೨೦೧೦

॥ ಓಂ ॥

ಶ್ರೀ ಶಿವರುದ್ರ ಶಿವಯೋಗಿ ಗ್ರಂಥ ಮಾಲೆ. ೧೦

# ಶಿವರುದ್ರ ವಿಜಯಂ

## (ಪುರಾಣ)



ಲೇಖಕರು :
…ಂ. ವೇ. ಪಂಡಿತ ಚೆನ್ನಕವಿಗಳು
…ರಿಯಮಠ, ಸೂರಕೋಡ.

033,1:g
K2C

ಪ್ರಕಾಶಕರು :
ಶ್ರೀ. ವೇ. ಪಂ. ವೀರಾರ್ಯ ಶಾಸ್ತ್ರಿಗಳವರು
(ಶಿವಕೀರ್ತನಕಾರರು)
ಶ್ರೀ ಶಿವರುದ್ರ ಶಿವಯೋಗಿ ಗ್ರಂಥ ಮಾಲೆ ಹಿರಿಯಮಠ,
ಸೂರಕೋಡ.

ಬೆಲೆ: ೫—೮೦

|| ಓಂ ||

# ಶಿವರುದ್ರ ವಿಜಯಂ

( ಪುರಾಣ )

ಲೇಖಕರು:

ಲಿಂ. ವೇ. ಪಂ. ಕವಿರತ್ನ ಚನ್ನ ಕವಿಗಳು ಸೂರಕೋಡ.

೧೯೬೨



ಪ್ರಕಾಶಕರು :

ಶ್ರೀ ಶಿವರುದ್ರ ಶಿವಯೋಗಿ ಗ್ರಂಥಮಾಲೆ, ಹಿರೇಮಠ

ಸೂರಕೋಡ.

033,1;9
K2C

ಓಂ

ಶ್ರೀ ಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ
ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು
ಪ್ರಸನ್ನ ರೇಣುಕ ವೀರಗಂಗಾಧರ ದೇಶಿಕೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳವರ
ಅಮೃತ ಹಸ್ತದಿಂದ

**ಶಿವರುದ್ರ ವಿಜಯ ಪುರಾಣವು**

ಮುಕ್ತಿ ಮಂದಿರ ಮಹಾಕ್ಷೇತ್ರದಲ್ಲಿ
ಶಕೆ ೧೮೮೪ ಶುಭಕೃತ ಸಂವತ್ಸರ ಸಾಗರ ಅಮಾವಾಸಿ
ತಾ॥ ೩೧—೭—೧೯೬೨ ಮಂಗಳವಾರ ದಿನ
ಉದ್ಘಾಟನೆ ಮಾಡಲ್ಪಟ್ಟಿತು.

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. ..........315

ಮುದ್ರಕರು:-
ಬಿ. ಜಿ. ಕೆರೂರ ಚಂದ್ರಿಕಾ ಪ್ರಿಂಟಿಂಗ ಪ್ರೆಸ್, ಬಾಗಲಕೋಟ.

॥ಓಂ॥



ಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯ ೧೦೦೮

ಜಗದ್ಗುರು ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ

ಪ್ರಸನ್ನ ರೇಣುಕ ವೀರ ಗಂಗಾಧರ ಶಿವಾಚಾರ್ಯ

ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ

ಭಕ್ತಿಪೂರ್ವಕ ಈ ಗ್ರಂಥವನ್ನು ಅರ್ಪಿಸಿದ್ದೇನೆ.

—ಲೇಖಕರು

# ಮುನ್ನುಡಿ

'ಶ್ರೀಶಿವರುದ್ರವಿಜಯ' ವೆಂಬ ವಸ್ತುಕ ಕೃತಿಯನ್ನು ರಚಿಸಿದವರು ಸೂರಕೋಡದ ಹಿರಿಯ ಮಠಾಧೀಶರಾದ ಶ್ರೀ ಚೆನ್ನಕವಿಗಳು. ಅವರು ರೇಣುಕಾಚಾರ್ಯರ ಸಂಪ್ರದಾಯ ಶರಣರು; ಗುರುಪಾದವರ್ಯರ ಕರಸಂಜಾತರು. ಮೇಲಾಗಿ ಉಭಯ ಭಾಷಾವಿಶಾರದರು. ತಮ್ಮ ಗುರುಪರಂಪರೆಯಲ್ಲಿ ಖ್ಯಾತಿವೆತ್ತು ಬೆಳಗಿದ ಶ್ರೀಶಿವರುದ್ರ-ಯೋಗಿಯನ್ನೇ ಕುರಿತು ಭಾವಮುಂಬಿ ಭಕ್ತಿಯಿಂದ ಕಾವ್ಯ ರಚಿಸಿದ್ದಾರೆ. ಅಸಮ ಗುರುವಿತ್ತ ಕವಿತಾರಸವನ್ನು ಗುರುವಿಗರ್ಪಿಸಿ ಕೃತಾರ್ಥರಾಗಲೆಳಿಸಿದ್ದಾರೆ; ತಮ್ಮ ಜನ್ಮ ಸಾರ್ಥಕ ಮಾಡಿಕೊಳ್ಳಲು ಇಚ್ಛಿಸಿದ್ದಾರೆ.

ಪಂಪಕವಿಯಿಂದ ಪ್ರಾರಂಭವಾದ ವಸ್ತುಕೃತಿರಚನೆ ಕಾಲಾನುಕಾಲಕ್ಕೆ ಬೆಳೆಯುತ್ತ ಬಂದು, ಇಂದಿನ ಭಾವಗೀತೆಗಳ ಕಾಲದಲ್ಲಿಯೂ ಜೀವಂತವಾಗಿದೆಯೆಂದು ಹೇಳಲು, ಶ್ರೀ ಚೆನ್ನಕವಿಗಳ ಶ್ರೀ ಶಿವರುದ್ರ ವಿಜಯವು ಉತ್ತಮ ನಿದರ್ಶನವಾಗಿದೆ. ಈ ಕೃತಿ ನವಯುಗದ ನವೀನ ಕೃತಿಯೆಂದೇ ಹೇಳಬೇಕು. ಸಂಪ್ರದಾಯ ಹಳೆಯದಾದರೂ ರಚನೆ ಮಾತ್ರ ನೂತನವಾದುದು. ಇದನ್ನು ಮಹಾಕಾವ್ಯವೆಂದು ಕರೆಯುವಂತಿಲ್ಲ; ಏಕೆಂದರೆ, ಮಹಾಕಾವ್ಯದಲ್ಲಿರುವ ಲಕ್ಷಣಗಳೆಲ್ಲ ಇಲ್ಲಿ ಪ್ರಕಟವಾಗಿಲ್ಲ. ಹದಿನೆಂಟು ತರದ ವರ್ಣನೆಗಳಿಗೆ ಕಟ್ಟು ಬಿದ್ದು, ಕವಿ ತನ್ನ ಕೃತಿಯನ್ನು ಕೆಡಿಸಿಕೊಂಡಿಲ್ಲ. ನವರಸಗಳೂ ಕಾವ್ಯದಲ್ಲಿ ಹರಿಯಬೇಕೆಂದು ಹಟತೊಟ್ಟಿಲ್ಲ. ಕಥಾವಸ್ತುವನ್ನು ಸಂಪ್ರದಾಯ ರೀತಿಯಲ್ಲಿ ಬೆಳೆಸಿಕೊಂಡು ಬಂದಿಲ್ಲ. ಆದರೆ ಕಥಾನಾಯಕನಲ್ಲಿರುವ ಉದಾತ್ತ ಗುಣಗಳನ್ನು ಉದಾತ್ತವಾಗಿಯೇ ಚಿತ್ರಿಸಹೊರಟಿರುವದರಿಂದ ವರ್ಣಕ ಕಾವ್ಯದ ಛಾಯೆ ಮೂಡಿದುದನ್ನು ಅರಿಯಬಹುದಾಗಿದೆ. ಅಲ್ಲಸಲ್ಲದ ವರ್ಣನೆಗಳನ್ನು ಹಿಂದಿಕ್ಕಿ, ಕಥಾನಾಯಕನ ಗುಣಗಡಣವನ್ನು ವಿಸ್ತರಿಸಿ ಹೇಳಿ, ಸರ್ವದೃಷ್ಟಿಯಿಂದಲೂ ಹೊಸ ಕೃತಿಯೆನಿಸುವಂತೆ ಕವಿ ಪ್ರಯತ್ನಿಸಿರುವದರಿಂದಲೇ ಅತಿನೂತನ ಕೃತಿಯಿದೆಂದು ನಾವು ಕರೆಯಬೇಕಾಗಿದೆ. ಕೃತಿಯ ಒಡಲಲ್ಲಿ ಗದ್ಯ ಬೆರೆತುಕೊಂಡಿದ್ದರೆ, ಚಂಪೂವೆಂದು ಹೆಸರಿಸಬಹುದಾಗಿತ್ತು. ಗದ್ಯಕ್ಕೂ ಇಲ್ಲಿ ಸ್ಥಾನ ಇಲ್ಲದಾಗಿದೆ. ಆದರೆ ಕವಿಗೆ ಷಡಕ್ಷರದೇವನ ಕಾವ್ಯಮಾರ್ಗ ಒಪ್ಪಿಗೆಯಾದಂತಿದೆ. ಆದ್ದರಿಂದಲೇ ಕಥಾವಸ್ತುವಿನ ಹರಹಿನಲ್ಲಿ, ವರ್ಣನೆಯ ರೀತಿಯಲ್ಲಿ, ಕೃತಿಯ ಗಾಂಭೀರ್ಯದಲ್ಲಿ ಕವಿಷಡಕ್ಷರದೇವನ ಪ್ರಭಾವ ಮೂಡಿ ನಿಂತಿದೆ.

ಕವಿ ಕಾವ್ಯಾರಂಭದಲ್ಲಿ ಶಿವರುದ್ರನನ್ನು ಭಕ್ತಿಯಿಂದ ಸ್ತುತಿಸಿದ್ದಾನೆ. ಆ ಮೇಲೆ ಶಿವ, ಪಾರ್ವತಿ, ವೀರಭದ್ರ, ಗಣೇಶ, ಷಣ್ಮುಖ ಮತ್ತು ಭೃಂಗೀಶರನ್ನು ಸ್ತುತಿಸಿ ತನ್ನ ಶೈವಮತನಿಷ್ಠೆಯನ್ನು ಪ್ರಕಟಪಡಿಸಿದ್ದಾನೆ. ಪಂಚಪೀಠಾಧೀಶರನ್ನೂ ಆ ಗುರುಪರಂಪರೆ

ಯಲ್ಲಿ ಮಿನುಗಿದ ಮಹನೀಯರನ್ನೂ ಹೊಗಳುವಲ್ಲಿ ತಮ್ಮ ಗುರುಪರಂಪರೆಯ ವೈಶಿಷ್ಟ್ಯತೆ ವನ್ನು ಉಳಿಸಿಕೊಂಡಿದ್ದಾರೆ. ಹಿಂದಿನ ವೀರಶೈವ ಕವಿಗಳ ಹೆಸರೆತ್ತುತ್ತಲೇ ನಿಜಗುಣ ಶಿವಯೋಗಿ, ಪದ್ಮಣಾಂಕ ಮತ್ತು ಷಡಕ್ಷರದೇವರನ್ನು ಹಾಡಿಹರಿಸುವಲ್ಲಿ ತಮ್ಮ ವೀರ ಶೈವದ ವೀರಾಭಿಮಾನವನ್ನು ವ್ಯಕ್ತಪಡಿಸಿದ್ದಾರೆ. ನಂತರ, ಕಥಾವಸ್ತುವಿನತ್ತ ಹೊರಳಿ, ಕಥಾನಾಯಕನ ಘನತೆಯನ್ನು ಘನವಾಗಿ ಎತ್ತಿ ತೋರಿಸುತ್ತ "ಶ್ರೀಗುರುಪಾದಯೋಗಿ ಚರಣಂ ಬೆಚ್ಚಿಕ್ಕೆ ಮಚ್ಚಿತ್ತದೋಳ್" ಎಂದು ಭಕ್ತಿಯನ್ನು ಆಶಿಸಿದ್ದಾರೆ.

ಶ್ರೀ ಶಿವರುದ್ರ ಶಿವಯೋಗಿಗಳು ಕರಿವೃಷಭಾದಿ ಸದ್ಗುರು ಪರಂಪರೆಯಲ್ಲಿ ಖ್ಯಾತಿಪಡೆದ ಪರಮ ವಿರಾಗಶೀಲರು; ಶಿವಭಕ್ತಿ ಸಂಪನ್ನರು; ತಮ್ಮ ಶಿವಯೋಗ ದಲ್ಲಿಯೇ ಲಿಂಗಾಂಗಸಾಮರಸ್ಯದ ಗುಟ್ಟನ್ನು ಸ್ವಾನುಭವಕ್ಕೆ ತಂದುಕೊಂಡ ಪೂಜ್ಯರು. ಮೊದಮೊದಲು, ಅವರ ಜೀವನದ ಪ್ರಭಾತದಲ್ಲಿ, ಸಾಧನೆಯ ರೀತಿಯನ್ನು ಕವಿ ಚಿತ್ರಿ ಸಿದರೆ, ಕೊನೆಕೊನೆಗೆ ಅವರೇ ತಮ್ಮ ತಪೋಬಲದಿಂದ ಸಿದ್ಧಿಗೇರಿ ಪವಾಡಪುರುಷರಾಗಿ ಮೆರೆದುದನ್ನು ಮೆರೆಯಿಸಿದ್ದಾನೆ. ಕಥಾನಾಯಕನ ಘನತೆಗೆ ಕುಂದು ಬಾರದಂತೆ ಕಾವ್ಯವನ್ನು ಜೋಕೆತೂಕಗಳಿಂದ ನಡೆಸಿಕೊಂಡು ಹೋದುದು, ಶ್ರೀಚೆನ್ನ ಕವಿಗಳ ವೈಶಿಷ್ಟ್ಯವನ್ನು ಎತ್ತಿ ತೋರಿಸುತ್ತದೆ. ಭಾವಕ್ಕೂ ಭಾಷೆಗೂ ತಾಳಮೇಳ ತಪ್ಪದಂತೆ ಹೊಂದಿಸಿಕೊಂಡು ಹೋಗುವಲ್ಲಿಯೇ ಕವಿಯ ಶಕ್ತಿ ಪ್ರಕಟವಾಗುತ್ತದೆ. ಅಂತಹ ಅನೇಕ ಸನ್ನಿವೇಶಗಳು ಕಾವ್ಯದುದ್ದಕ್ಕೂ ಮೂಡಿ ಬಂದಿರುವುದನ್ನು ರಸಿಕರು ಅರಿಯ ಬಹುದಾಗಿದೆ.

ಶ್ರೀ ಶಿವರುದ್ರ ಶಿವಯೋಗಿಗಳಲ್ಲಿ ಕವಿಗೆ ಅನನ್ಯ ಭಕ್ತಿ ಇದೆ. ಅದು ಹಲ ವಾರು ಕಡೆಗಳಲ್ಲಿ ಅತಿ ಮನೋಹರವಾಗಿ ವ್ಯಕ್ತವಾಗಿದೆ:

ಶ್ರೀಮದ್ಧರ್ಮಸ್ವರೂಪಂ ಸುರುಚಿರಭುವನಾವಾಸನಶ್ರಾಂತಸತ್ವಾ ।
ರಾಮಂ ಸ್ಫಾರಾಕ್ಷಭೂಷಂ ವಿಬುಧವಿನುತನುದ್ರಾಗವಾಸಂ ಸುಗೋತ್ರೋ ॥
ದ್ದಾಮಂ ಭೂತಿಪ್ರಯುಕ್ತಂ ಪ್ರಣವರುಚಿವಿನಿರ್ಧೂತಕಾಮಂ ನಿರಂತಂ ।
ಸೋಮಾಂತಸ್ತೇಜನೆಮ್ಮಂ ಸಲಪುಗೆ ಶಿವರುದ್ರಂ ವೃಷಾಧೀಶಮುದ್ರಂ ॥

ಈ ವರ್ಣನೆಯಲ್ಲಿ ಗುರುವಿನಲ್ಲಿಟ್ಟ ಭಕ್ತಿಗೆ ಹೊಂದಿಕೊಂಡು ಕವಿಯ ವಾಣಿ ಕುಣಿಯುವುದನ್ನು ಕಾಣಬಹುದಾಗಿದೆ.

ಸಂಪ್ರದಾಯದ ವರ್ಣನೆಗಳು ಕಾವ್ಯಾರಂಭದಲ್ಲಿ ಸಾಕಷ್ಟು ಬಂದಿವೆ. ಮೇರು ಪರ್ವತ, ಸಮುದ್ರ, ಭರತಖಂಡ, ಕನ್ನಡನಾಡು– ಈ ವರ್ಣನೆಗಳು ಎಲ್ಲ ಹಳಗನ್ನಡ ಕಾವ್ಯಗಳಲ್ಲಿಯೂ ಬಂದೇ ಬರುತ್ತವೆ. ಆದರೆ ಮಹಾಕವಿಯಾದವನು ಅಲ್ಲಿಯೂ ಸ್ಪರ್ಧೆ ಹೂಡಿ ತಾನು ಮಿಗಿಲೆನಿಸಿಕೊಂಡುದುಂಟು. ಚೆನ್ನಕವಿಗಳ ಸಮುದ್ರ ವರ್ಣನೆ ಹೀಗಿದೆ

ಆದೊಡಮೇಂ ಕುಂಭೋದ್ಭವ ।
ನಾದಂ ಬರಪೀರ್ದನಾತ್ಮಭವೆ ಚಂಚಲೆಯಾದಳ್ ॥
ಮೇದಿನಿಯೊಳ್ಭಂಗಕ್ಕೆಡೆ ।
ಯಾದೆನೆನುತ್ತೊಡಲವನ್ನಿಯಿಂ ತಳಮಳಿಕುಂ ॥

ತಳಮಳಿಸುತ್ತಿರುವ ಸಮುದ್ರವು ಇಲ್ಲಿ ಚಮತ್ಕಾರಭರಿತವಾಗಿ ವರ್ಣಿಸಲ್ಪಟ್ಟಿದ್ದರೂ ಷಡಕ್ಷರದೇವನ ಕಾವ್ಯಭಕ್ತರಿಗೆ ಇದು ಹೊಸದೆನಿಸುವದಿಲ್ಲ. ಹಳೆಯದರಲ್ಲಿ ಒಳ್ಳೆಯದು ಇದ್ದರೆ ಅದು ನಮ್ಮದಾಗಬೇಕೆಂದು ಕವಿ ಬಗೆದಿರಬೇಕು. ಇಂತಹ ಪರಂಪರಾಗತ ವರ್ಣನೆಗಳಲ್ಲಿ ಚೆನ್ನಕವಿಗಳ ಪಾಂಡಿತ್ಯ ನಾನಾಮುಖವಾಗಿ ತುಂಬಿಸಿಂತಿರುವದನ್ನು ಅರಿಯಬಹುದಾಗಿದೆ; ನಿದರ್ಶನಕ್ಕಾಗಿ ಉದಾಹರಣೆಗಳನ್ನು ಕೊಡಬಹುದಾಗಿದೆ. ಆದರೆ ಕವಿಯ ಪ್ರತಿಭಾಶಕ್ತಿ ನಿತ್ಯನೂತನವಾದ ಹೊಸ ಭಾವಗಳನ್ನು ಹೆಣೆಯದೆ ಹೋಗಿಲ್ಲ. ನರಗುಂದ ಪ್ರದೇಶದಲ್ಲಿ ಜುಳುಜುಳು ನಾದಮಾಡುತ್ತ ಮಂಜುಳವಾಗಿ ಹರಿಯುವ ಬೆಣ್ಣೆಹಳ್ಳ ನದನದಿಗಳಿಗಿಂತಲೂ ಹಿರಿದೆಂದು ಕವಿಯ ಕಲ್ಪನೆ. ಆ ಹಳ್ಳವನ್ನು ಕವಿ ಕಣ್ಣಾರೆ ಕಂಡಿದ್ದಾನೆ. ಅದರ ಮಹಿಮೆಯನ್ನು ಅರಿತಿದ್ದಾನೆ. ಅದನ್ನು ನೆನೆದೊಡನೆ ಕವಿಯ ಭಾವ ಉಕ್ಕುವುದು ಸಹಜ.

ಬಿಡದೆನ್ನಂ ಸೋಂಕಿರ್ಪರ ।
ಕಡುಪಾಪವನೊಕ್ಕಲಿಕ್ಕಿ ವಿಶ್ವಂಭರೆಯೊಳ್ ॥
ಮೃಡಗುರುಪೂಜೆಗೆ ಸಲ್ವೆಂ ।
ಬಿಡದಾನೆಂದು ಗುರುವೇದಿವೇಷ್ಟಿಸಿ ಪರಿವಳ್ ॥

ಪಾಪಿಗಳ ಪಾಪವನ್ನು ತೊಳೆವ ಆ ಪವಿತ್ರ "ಗುರುವೇದಿವೇಷ್ಟಿಸಿ" ಹರಿವಲ್ಲಿ, ಪುನೀತಳಾದಳೆಂದು ಹೇಳುವಲ್ಲಿ ಕವಿತಾಶಕ್ತಿ ಸಾರ್ಥಕಗೊಳ್ಳುತ್ತಿದೆ. ನರಗುಂದ ಗುಡ್ಡದ ವರ್ಣನೆ ಗುಡ್ಡಕ್ಕಿಂತ ಮಿಗಿಲಾಗಿ ಬಂದುದನ್ನು ಓದುಗರು ಅರಿಯದಿರರು.

ಶ್ರೀ ಶಿವರುದ್ರನ ಬಾಲಲೀಲೆಗಳು ಮನೋಹರವಾಗಿ ಬಂದಿವೆ. ಅವು ಕಥಾನಾಯಕನ ದಿವ್ಯ ಜೀವನದ ಮುಂಬೆಳಕಾಗಿ ಹೊಳೆಯುತ್ತವೆ. ಓದುತ್ತ ಹೋದಂತೆ ಓದುಗನು ಸನ್ನಿವೇಶದಲ್ಲಿ ತಾದಾತ್ಮ್ಯಹೊಂದದೆ ಇರನು. ಸಾಧನೆಯ ಮಾರ್ಗದಲ್ಲಿ ಮುನ್ನುಗ್ಗಿದ ಶ್ರೀ ಶಿವರುದ್ರರು ಪ್ರತಿನಿತ್ಯ, ಪ್ರಾತಃಕಾಲದಲ್ಲೆದ್ದು, ಶುಚಿ-ರ್ಭೂತರಾಗಿ, ಗುರುವನ್ನೇ ಧ್ಯಾನಿಸುತ್ತ ಶಮೀವೃಕ್ಷದ ಕೆಳಗೆ ಕೂಡ್ರುವುದು ರೂಢಿಯಾಗಿದೆ. ಆ ಸಮಯದಲ್ಲಿ ಬರುವ ನಿಸರ್ಗವರ್ಣನೆ ನೈಸರ್ಗಿಕವಾಗಿ ಬಂದುದನ್ನು ಅರಿಯಬೇಕು. ಹಲವಾರು ಬಣ್ಣದ ಹಕ್ಕಿಗಳು ತಮ್ಮ ಚಿತ್ರವಿಚಿತ್ರವಾದ ತುಪ್ಪಳಗಳನ್ನು ಆ ಶಮೀವೃಕ್ಷದಲ್ಲಿ ಕುಳಿತು ಉದುರಿಸಿದುದರಿಂದ, ಕೆಳಗಿನ ನೆಲ ಹಂಸತೂಲಿಕಾತಲ್ಪದಂತಾಗಿದೆ-ಯೆಂದು ಕವಿಯ ಬಣ್ಣನೆ. ಅಲ್ಲಿಯೇ ಆಸನಂಬಲಿದು ಧ್ಯಾನಾಸಕ್ತರಾದ ಶಿವರುದ್ರಶಿವ-ಯೋಗಿಗಳು ಸಾಕ್ಷಾತ್ ಶಿವನಂತೆ ಕಾಣುತ್ತಾರೆ.

ಕುಳತೆಳಗೆಂಪಿನೊಳ್ಕಸನಿಯಿಂ ನಿಜಿತೇಂದ್ರಿಯತೇಜದಿಂ ಮನಂ ।
ಗೊಳೆ ತನಗಾಸನಂಬಲಿದು ಶಾಂಭವಮಂತ್ರ ನಿಮಗ್ನವಿಗ್ರಹಂ ॥
ತಿಳಿವೊಡೆ ಗಂಗೆಗೌರಿಯರುಪದ್ರಕೆ ಪೇಸುತೆ ಯೋಗಿರೂಪದಿಂ ।
ದಿಳೆಗಿಳಿದಿಲ್ಲಿ ಮಂಡಿಸಿದನೋ ಶಿವನೆಂಬವೊಲೊಪ್ಪಿ ತೋರಿದಂ ॥

ಇಲ್ಲಿ ಭಾವಭಾಷೆಗಳಂತೆ ಆತ್ಮನೇ ಪರಮಾತ್ಮನಾಗಿರುವುದು ಮನೋಹರವಾಗಿ ಬಂದಿದೆ.

ಸಂಪ್ರದಾಯ ಬೋಧಾಗತಿ ಬೋಧಪ್ರದವಾಗಿದೆ. ಕಾವ್ಯ ಶಾಸ್ತ್ರವಾಗುವಂತೆ ಸಾಗಿ ಬರುತ್ತದೆ. ಅಷ್ಟಾವರಣ ವಿವರಣೆಗಾಗಿ ನಿದರ್ಶನಕ್ಕೆ ಬಂದ ಕಥೆಗಳು ಭಕ್ತಿಪೂರಿತವಾಗಿವೆ; ಹೃದಯಂಗಮವಾಗಿವೆ. "ಆರಾರೇರರ್ ಶಾಸ್ತ್ರಶ್ರೀರೋಹಣ ಗಿರಿಯನಲ್ಲಿ ನವಕವಿತಾಚಿಂತಾರತ್ನಂ ದೊರೆಗುಮೆ?" ಎಂಬ ಷಡಕ್ಷರ ದೇವನ ವಾಣಿಯ ನೆನಪು ಈ ಭಾಗವನ್ನೋದುವಾಗ ನೆನಪಿಗೆ ಬಾರದಿರದು. ಲಿಂಗಾಂಗ ಸಾಮರಸ್ಯ ನಿರೂಪಣೆ ಮಾತ್ರ ಹೃದಯಂಗಮವಾಗಿದೆ. ನುಡಿದಂತೆ ನಡೆದು ಲಿಂಗದ ಬೆಳಗಿನಲ್ಲಿ ಬೆಳಗುವ ಶ್ರೀ ಶಿವರುದ್ರ ಶಿವಯೋಗಿಗಳು ಕೊನೆಗೆ—

……………………ಪಶ್ಚಿಮ ಚಕ್ರದೊಳಿರ್ಪ ನಿರ್ಗುಣಾ ॥
ರುಜನಿರವದ್ಯ ನಿಷ್ಕಲ ನಿರಂಜನ ನಿತ್ಯನಿರಂಗ ಕೋಟಿ ನೀ ।
ರಜಸಖದೀಪ್ತಿಯಿಂ ಪಳಿವ ಭಾಸುರ ನಿಷ್ಕಲ ಲಿಂಗಗರ್ಭದೊಳ್ ॥

ಅಡಗುತ್ತಾರೆ. ಅವರ ಮಹಿಮೆಯನ್ನರಿತವರು ಭಕ್ತಿಯಿಂದ ಬಾಗುತ್ತಾರೆ. ಕಾವ್ಯ ಮುಕ್ತಾಯವಾಗುತ್ತದೆ. ಆದರೆ ಕವಿಯ ಕಾವ್ಯ ಅಲ್ಲಿಂದಲೇ ಪ್ರಾರಂಭವಾಗಿ ಹಿಂದಕ್ಕೆ ಸರಿಯುವಂತೆ ಭಾಸವಾಗದೆ ಇರದು.

ಶ್ರೀ ಚೆನ್ನಕವಿಗಳು ಪ್ರತಿಭಾವಂತ ಕವಿಗಳು; ಎಲ್ಲಕ್ಕಿಂತ ಮಿಗಿಲಾಗಿ ಅವರಲ್ಲಿರುವ ಪಾಂಡಿತ್ಯ ಬೆರಗುಗೊಳಿಸುವಂತಹದು; ಅವರ ಶೈಲಿಯಲ್ಲಿ ಹೆಜ್ಜೆಜ್ಜೆಗೆ ತೋರಿ ಬರುವ ಶಬ್ದಾಲಂಕಾರಗಳು, ಅರ್ಥಾಲಂಕಾರಗಳು ಅವರ ಪಾಂಡಿತ್ಯಕ್ಕೆ ನಿದರ್ಶನವಾಗಿ ನಿಲ್ಲುತ್ತವೆ. ಅವರ ಬಂಧ ಮೊದಲೇ ಬಂಧುರವಾದುದು; ಅದರಲ್ಲಿಯೂ ಆಗಾಗ ಕಾಣಿಸಿಕೊಳ್ಳುವ ಹಲಬಂಧ, ಚಕ್ರಬಂಧ, ಶರಯಂತ್ರಬಂಧಗಳು ಆಧುನಿಕ ರಸಿಕರನ್ನೇ ಬಂಧಿಸುವ ಬಂಧನಗಳೋ ಏನೋ ಎನಿಸುವಂತೆ ಬರುತ್ತವೆ. ಕಾವ್ಯಕನ್ನೆ ನಿರಾಭರಣ ಸುಂದರಿಯೆಂದು ಹೇಳುವವರು ಈ ಬಂಧಗಳಿಗೆ ಎಷ್ಟು ಮನ್ನಣೆ ಕೊಟ್ಟಾರೋ ಹೇಳಲಿಕ್ಕೆ ಬಾರದು. ಆದರೆ ಇಂತಹ ನಿರಾಡಂಬರ ಕಾಲದಲ್ಲಿಯೂ ಪ್ರಾಚೀನ ಪಾಂಡಿತ್ಯ ಜೀವಂತವಿದೆಯೆಂದು ಅಭಿಮಾನಿಗಳು ಒಪ್ಪಲೇ ಬೇಕಾಗುತ್ತದೆ. ಈ ಕಾವ್ಯದಲ್ಲಿ ಪ್ರಾಸಾನುಪ್ರಾಸಾಂತಗಳ ಜೊತೆಗೆ ಹೊರೆಹೊರೆಯಾಗಿ ಬರುವ ಯಮಕಪ್ರಾಸ, ಶಕಾರದಲ್ಲಿ ಕಂದ, ಮುಕ್ತಪದಗ್ರಸ್ತಕಂದ, ವರ್ಗೀಯ ಕಂದ, ಅವರ್ಗೀಯ ಕಂದ,

ವಾರನಾಮಕಂದ, ವಿಷಮಾಂತರ್ಲಾಪಿ— ಮೊದಲಾದವು ಕವಿಯ ಪಾಂಡಿತ್ಯಕ್ಕೆ ನಿದರ್ಶನಗಳಾಗಿ ನಿಲ್ಲುತ್ತವೆ. ಕವಿಯಲ್ಲಿ ಶಬ್ದಬಾಹುಳ್ಯಕ್ಕೆ ಕುಂದಿಲ್ಲ. ಸಂಸ್ಕೃತದಲ್ಲೇ ಬರೆಯಬೇಕೆಂದಾಗ :

ಯಜನಂ ಕುರ್ವೇ ವಿಲಸ ।
ದ್ವಜನಂ ಕುರ್ವೇ ಮಹೋಪಚಾರಂ ಕುರ್ವೇ ॥
ಸುಜನಂ ಕುರ್ವೇ ಶಿವಶಿವ ।
ವಿಜಯಂ ಕುರುಮೇ ಮಹೋಕ್ಷಪತ್ರಾರೂಢಾ ॥

ಎಂದು ಕಂದ ಓಡುತ್ತದೆ. ಅದೇ ರೀತಿಯಾಗಿ, ಕನ್ನಡದಲ್ಲೇ ಬರೆಯಬೇಕೆಂದಾಗ:

ಹಿಗ್ಗದೆ ತಗ್ಗದೆಯೆಗ್ಗರ ।
ಮೊಗ್ಗರದೊಳ್ನುಗ್ಗದೆಯಿವನಗ್ಗಳ ನಡೆಯಿಂ ॥
ಬಗ್ಗಮೊವಲುಡಿಯನಂ ನುತಿ ।
ಪಗ್ಗಳಿಕೆಯ ಸುಗ್ಗಿಯಲ್ಲಿಯೊಗ್ಗಿರುವಾಗಳ್ ॥

ಎಂದು ಕನ್ನಡವೇ ನುಡಯುತ್ತದೆ. ಹೀಗೆ ಕನ್ನಡ ಸಕ್ಕದಗಳೆರಡನ್ನೂ ಸಮವಾಗಿ ನಡೆಸುತ್ತ, ವೈವಿಧ್ಯಕ್ಕಾಗಿ ವಿವಿಧ ವೃತ್ತಗಳನ್ನು ಬಳಸಿಕೊಂಡಿರುವ ಕವಿಯ ಶೈಲಿ ಹಿತಮಿತವಾಗಿದೆ; ಮೃದುಮಧುರವಾಗಿದೆ. ಓಟಕ್ಕೆ ಭಂಗ ಬಂದ ಸ್ಥಳಗಳೇ ಕಡಿಮೆ. ಮರಹು, ಆಲಸ್ಯ, ರಸಾವೇಶಕ್ಕೊಳಗಾಗಿ ಒಂದೆರಡು ತಪ್ಪುಗಳಾಗುವುದು ಸಹಜ; ಆದರೆ ಸಹೃದಯನಿಗೆ ಬೇಕಾದುದು ಕಡೆತನಕ ಬಂದ ಲೇಸು. ಹೀಗೆ ಕವಿಯ ಬಂಧ ಸಡಿಲಾಗುವ ಪ್ರಸಂಗ, ನಡೆಯುಡುಗುವ ಸ್ಥಾನ ಈ 'ಕಾವ್ಯದಲ್ಲಿಯೇ ಇಲ್ಲವೆಂದು ಹೇಳಲಾರೆ. ಮುದ್ರಾರಾಕ್ಷಸನ ಉಪಟಳದಿಂದ ಇದ್ದ ತಪ್ಪು ಎದ್ದುಕಂಡುದೂ ಉಂಟು. ಆದರೆ ಕಾವ್ಯದ ಆತ್ಮ ರಸ; ರಸಭರಿತ ಕಾವ್ಯದಲ್ಲಿ ಇತರ ತಪ್ಪುಗಳು ಕೊಚ್ಚಿಹೋಗುತ್ತವೆ. ಶ್ರೀ ಶಿವರುದ್ರ ಶಿವಯೋಗಿಗಳ ಘನಮಹಿಮೆಯನ್ನು ಬಿತ್ತರಿಸುವ ಚೆನ್ನಕವಿಗಳ ಕಾವ್ಯದಲ್ಲಿ ತಪ್ಪು ಒಪ್ಪಿಗೆಯ ಒಪ್ಪವನ್ನು ಹೊಂದದಿದ್ದೀತೆ? ಪರುಷ ಮುಟ್ಟಿದ ಕಬ್ಬಿಣ ಕರ್ಬೊನ್ನಾಗಿ ಉಳಿದೀತೆ?

ಒಟ್ಟಿನಲ್ಲಿ, ಚೆನ್ನಕವಿಗಳು ರಚಿಸಿದ ಈ ಸತ್ಕಾವ್ಯ ಸಹೃದಯರ ಮನಸ್ಸನ್ನು ಸೆರೆಹಿಡಿಯುವಲ್ಲಿ ಸಂಶಯವಿಲ್ಲ. ಈ ಕಾವ್ಯವನ್ನು ಸಹೃದಯರು ಬರಮಾಡಿಕೊಳ್ಳಲಿ; ಕಟ್ಟೆಯುಮೇನೋ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ?

ಎಮ್. ಎಸ್. ಸುಂಕಾಪೂರ

ಕರ್ನಾಟಕ ವಿಶ್ವ ವಿದ್ಯಾಲಯ,
ಧಾರವಾಡ.

॥ ನಮಃ ಶಿವಾಭ್ಯಾಂ ॥

# ಅಭಿಪ್ರಾಯ



ಸೂರಕೋಡು ಬೃಹನ್ಮಠದ ಶ್ರೀ ಚೆನ್ನಕವಿಗಳಿಂದ ವಿರಚಿತವಾಗಿರುವ “ಶಿವರುದ್ರ ವಿಜಯ ಪುರಾಣಂ” ಎಂಬ ಕಾವ್ಯವನ್ನು ಆಮೂಲಾಗ್ರವಾಗಿ ಓದಿ ಪರಮಾನಂದವನ್ನು ಅನುಭವಿಸಿದ್ದೇನೆ. ಇಂದಿನ ಸಂಪ್ರದಾಯರಹಿತವಾದ ಕಾವ್ಯಗಳಿಗಿಂತಲೂ ಪ್ರಾಚೀನ ಪ್ರೌಢ ಕಾವ್ಯಗಳಲ್ಲಿ ವಿಶೇಷ ಅಭಿಮಾನವಿಟ್ಟಿರುವ ನಾನು ಸಂಪ್ರದಾಯ ಬದ್ಧವಾದ ಪ್ರಾಚೀನ ರೀತಿಯ ಈ ನವೀನ ಸೃಷ್ಟಿಯನ್ನು ನೋಡಿ ಪ್ರಫುಲ್ಲಚಿತ್ತನಾಗಿರುವೆನು. ಈ ಕಾವ್ಯವು ಶುದ್ಧವಾದ ಹಳಗನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಮನೋಹರವಾದ ಸಂಸ್ಕೃತ ಪದಗಳು ಕಾವ್ಯಕ್ಕೆ ಅರ್ಥಪುಷ್ಟಿಯನ್ನೂ ಬಂಧಕ್ಕೆ ಓಜಸ್ಸನ್ನೂ ಕೊಟ್ಟಿವೆ. ಈ ಕಾವ್ಯವು ಕನ್ನಡದಲ್ಲಿ ಉದ್ದಾಮ ಕವಿಗಳಾದ ರುದ್ರಭಟ್ಟ ಷಡಕ್ಷರಿದೇವರ ಅಮೋಘ ಕೃತಿಗಳಿಗೆ ಯಾವ ವಿಧದಲ್ಲೂ ಕಮ್ಮಿಯಲ್ಲವೆಂದು ಧಾರಾಳವಾಗಿ ಹೇಳಬಹುದು. ಕಾವ್ಯವನ್ನು ಪರಿಶೀಲಿಸಿದರೆ ಶ್ರೀ ಚೆನ್ನ ಕವಿಗಳ ಉಭಯ ಭಾಷಾ ಪಾಂಡಿತ್ಯವೂ ಕವಿತಾ ಪ್ರತಿಭೆಯೂ ಅಮೋಘವಾದುದೆಂದು ತಿಳಿದುಕೊಳ್ಳಬಹುದು. ಅಲ್ಲದೇ ವರ್ಣನೆಗಳೂ ರಸಭಾವಗಳೂ ಆಲಂಕಾರಗಳೂ ಪ್ರತಿಭಾವಿಶೇಷದಿಂದ ಕಾವ್ಯದಲ್ಲಿ ಸೇರಿಸಲ್ಪಟ್ಟು ಸಹೃದಯರಿಗೆ ಚಮತ್ಕಾರವನ್ನುಂಟು ಮಾಡುತ್ತವೆ. ಒಟ್ಟಿನಲ್ಲಿ ಶ್ರೀ ಚೆನ್ನ ಕವಿಗಳು ಪರಮೇಶ್ವರಾನುಗ್ರಹದಿಂದ ಕವಿತಾ ಶಕ್ತಿಯನ್ನು ಪಡೆದು ವ್ಯುತ್ಪತ್ತಿ ಮತ್ತು ಅಭ್ಯಾಸದಿಂದ ಅದನ್ನು ವೃದ್ಧಿಪಡಿಸಿಕೊಂಡು ಪರಿಪೂರ್ಣ ಕವಿಗಳೆನಿಸಿ ಈ ಪ್ರೌಢ ಕಾವ್ಯವನ್ನು ರಚಿಸಿ ಕರ್ಣಾಟಕ ದೇವಿಯನ್ನು ಸೇವಿಸಿ ಕೃತಾರ್ಥರಾಗಿದ್ದಾರೆ. ಉತ್ತಮವಾದ ಕೃತಿಯನ್ನು ಕನ್ನಡನಾಡಿಗೆ ಕಾಣಿಕೆಯಿತ್ತು ಜನತೆಯ ಮೆಚ್ಚಿಗೆಗೆ ಪಾತ್ರರಾಗಿದ್ದಾರೆ. ಕೃತಿಗೊಡೆಯರಾದ ಶಿವರುದ್ರ ಮಹಾಯೋಗಿಗಳ ಪರಮಾನುಗ್ರಹಕ್ಕೆ ಪಾತ್ರರಾದ ಈ ಕವಿವರ್ಯರು ಇದೇ ರೀತಿಯ ರಸಭರಿತವಾದ ಹಲವಾರು ಉದಾತ್ತ ಕಾವ್ಯಗಳನ್ನು ರಚಿಸಿ ಕೀರ್ತಿಗಳಿಸುತ್ತಾರೆಂದು ನಂಬಿದ್ದೇನೆ

ವಿಕೃತಿ ಸಂವತ್ಸರದ ಭಾದ್ರ ಶುದ್ಧ
ದ್ವಾದಶೀ ಸೌಮ್ಯವಾಸರ

ಹ. ವೆ. ನಾರಾಯಣಶಾಸ್ತ್ರೀ ಕವಿಶೇಖರ
ಉಭಯ ಭಾಷಾ ಪಂಡಿತ
ಉಪಪ್ರಾಧ್ಯಾಪಕ; ಶ್ರೀ ಚಾಮರಾಜೇಂದ್ರ
ಸಂಸ್ಕೃತ ಮಹಾಪಾಠಶಾಲಾ ಬೆಂಗಳೂರು.

|| ಓಂ ಶಂಭವೇ ನಮಃ ||

# ನಿವೇದನೆ.

ರೇಣುಕಾದಿಪಂಚಗಣಾಧೀಶರಿಗೂ ಬಸವಾದಿಪ್ರಮಥರಿಗೂ ಜನ್ಮಕೊಟ್ಟು ಪಾವನ ಚರಿತೆಯೆನಿಸಿದ ಕರ್ನಾಟಕಮಾತೆಯ ಹೃದಯದಂತಿರುವ ಧಾರವಾಡ ಜಿಲ್ಹೆಯಲ್ಲಿ ಸೂರಕೋಡವೆಂಬ ಗ್ರಾಮವಿದೆ. ಇಲ್ಲಿ ಶ್ರೀ ಮದ್ರಂಭಾಪುರಿ ಜಗದ್ಗುರು ರೇಣುಕಾ ಪೀಠಕ್ಕೆ ಸೇರಿದ ಹಿರಿಯಮಠವೊಂದಿದೆ. ಈ ಮಠವು ಕೈಬರಹದಪ್ರತಿಯಾಧಾರದಿಂದ ೧೦೦೦ ವರ್ಷದ್ದೆಂದು ಸಾಧಾರಣವಾಗಿ ತಿಳಿದು ಬಂದಿದೆ. ಈ ಮಠದ ಇತಿಹಾಸವನ್ನು ಇನ್ನೂ ಶೋಧಿಸಬೇಕಾಗಿದೆ. ಈ ಮಠದ ಪರಂಪರೆಯಲ್ಲಿ ೨೦ ಮಂದಿ ಪಟ್ಟದಸ್ವಾಮಿ ಗಳವರು ಆಗುತ್ತಾ ಬಂದಿದ್ದಾರೆ. ಇವರು ಶಿವಲಿಂಗಪೂಜಾಲೋಲರೂ ಸತ್ವಸಂಪನ್ನರೂ ಆಗಿದ್ದಾರೆ. ಇವರು ಯಾವ ಯಾವ ಊರಲ್ಲಿ ಜನಿಸಿ ಎಲ್ಲಿಎಲ್ಲಿ ತಮ್ಮ ಮಠವನ್ನು ಸ್ಥಾಪಿಸಿದರು ಎಂಬುದು ತಿಳಿದು ಬಂದಿಲ್ಲ. ಈ ಮಠವು ಯಾವ ಮಠದ ಕೈಕೆಳಗಿನ ಮಠವೂ ಅಲ್ಲ.

ಈ ೨೦ ಮಂದಿ ಸ್ವಾಮಿಗಳವರಲ್ಲಿ ಶ್ರೀಚರಪಟ್ಟದ ಗುರುಪಾದ ಸ್ವಾಮಿಗಳವರು ಮಹಿಮಾ ಪುರುಷರೂ ಯೋಗಿಗಳೂ ಲಿಂಗಪೂಜಾನಿಷ್ಠರೂ, ಏಕಾಂತಪ್ರಿಯರೂ ಆಗಿದ್ದರು. ಇವರಿಗೆ ಊರಲ್ಲಿಯ ಕೆಲವು ಮಹಾಶಯರ ಉಪದ್ರವದಿಂದ ಬಹಳ ತ್ರಾಸಾಯಿತು. ಹೀಗಾಗಿ ಇವರು ಸಿಟ್ಟಿಗೆದ್ದು ತ್ರಾಸುಕೊಡುವ ಮಹಾಶಯರ ಮನೆಗೆ ಮಣ್ಣುತೂರಿ ಸೂರಕೋಡ ಬಿಟ್ಟು ನವಿಲುಗುಂದಕ್ಕೆ ಹೋದರು

ಅಲ್ಲಿ ನವಿಲಗುಂದದಲ್ಲಿ ಗಾಣಿಗೇರ ಸತ್ಯಪ್ಪನೆಂಬ ಸದ್ಭಕ್ತನು ಇವರ ಮಹಿಮೆ ಯನ್ನು ಕಂಡು ಇವರಿಗೆ ಒಂದು ಮಠವನ್ನು ಕಟ್ಟಿಸಿಕೊಟ್ಟು ಅವರ ಶಿಷ್ಯನಾದ. ಅವರು ಅಲ್ಲಿಯೇ ಕೆಲವು ದಿನ ಲಿಂಗಪೂಜಾಲೋಲರಾಗಿ ಇರುತ್ತಿರಲಾಗಿ ಶಿವನಪ್ಪ- ಣೆಯ ಪ್ರಕಾರ ಲಿಂಗೈಕ್ಯರಾದರು. ಲಿಂಗೈಕ್ಯರಾದ ಸಮಯದಲ್ಲಿ ಅವರ ಹತ್ತಿರ ಮಠದ ಕಾಗದಪತ್ರಗಳೂ ಪಟ್ಟಾಭಿಷೇಕದ ಮುದ್ರೆಗಳೂ ಇದ್ದವು. ಶ್ರೀ.ಲಿಂ. ಸ್ವಾಮಿಗಳವರು ಶ್ರೀಸತ್ಯಪ್ಪನ ಸ್ವಪ್ನದಲ್ಲಿ ಬಂದು ನಮ್ಮ ಮಠದ ಕಾಗದಪತ್ರಗಳೆಲ್ಲವನ್ನು ನಮ್ಮ ಸೂರಕೋಡ ಮೂಲ ಹಿರಿಯರ ಮಠಕ್ಕೆ ಒಪ್ಪಿಸಬೇಕೆಂದು ಆಜ್ಞೆ ಮಾಡಿದರು. ಅದೇ ಪ್ರಕಾರ ಅವನು ಮಠದ ಪೂರ್ವ ವಂಶಜರನ್ನು ಕರೆಯಿಸಿ ಅವರಿಗೆ ಮಠದ ಎಲ್ಲಕಾಗದ ಪತ್ರಗಳನ್ನು ಒಪ್ಪಿಸಿ ಗುರುಕೃಪೆಗೆ ಪಾತ್ರನಾದನು.

ಅವರ ತರುವಾಯ ಪುರಾಣದ ಕಥಾನಾಯಕರಾದ ಶ್ರೀಶಿವರುದ್ರಸ್ವಾಮಿಗಳವರಿಗೆ ಬೆದವಟ್ಟಿ ಹಿರಿಯಮಠದ ಪಟ್ಟದ ಸ್ವಾಮಿಗಳವರಿಂದ ಐದು ಪಟ್ಟದ ಸ್ವಾಮಿಗಳವರ ಸಮಕ್ಷಮದಲ್ಲಿ ಶಕೆ ೧೮೮೩ ವಿರೋಧಿಕೃತ ಸಂವತ್ಸರ ಶ್ರಾವಣ ವ. ೯ ಶುಕ್ರವಾರ (೧೯೧೧) ಮಿತಿಗೆ ಅಧಿಕಾರ ಮಾಡಿದರು. ಇವರು ಕನ್ನಡವನ್ನು ತಕ್ಕ ಮಟ್ಟಿಗೆ ಓದಿಕೊಂಡಿದ್ದರು. ಇವರು ಕೇವಲ ಉದ್ಯೋಗಶೀಲರೂ ಶಿವಪೂಜಾನಿಷ್ಠರೂ ಗುರುನಿಷ್ಠಾಪಕರೂ ಏಕಾಂತವಾಸಿಗಳೂ ಇದ್ದರು. ಇವರು ಜೀವಿಸಿರುವಾಗ ಕೆಲವು ಸಣ್ಣಪುಟ್ಟ ಮಹಿಮೆಗಳನ್ನು ಮಾಡಿದರೂ ಅಜ್ಞಾನಿಗಳಾದ ನಮಗೆ ಗೋಚರಿಸಲಿಲ್ಲ-ವೆಂದು ಹೇಳಲು ವಿಷಾದವಾಗುತ್ತದೆ. ಇವರು ಸಾಯಂಕಾಲ ತಪ್ಪದೆ ಹಾಳು-ಕೊಪ್ಪದ ಹೊಲಕ್ಕೆ ಹೋಗುವದು ಬಹಳವಿತ್ತು. ಎಂದಿನಂತೆ ಮುಂಚಿತವಾಗಿ ಸಾಯಂಕಾಲ ೩ ಘಂಟೆಗೆ ಹಾಳುಕೊಪ್ಪದಲ್ಲಿರುವ ಹನುಮಂತದೇವರ ಗುಡಿಗೆ ಹೋದರು. ಅಲ್ಲಿ ಆಕಸ್ಮಿಕ ಮಠದ ಹಿಂದಿನ ಪೂಜ್ಯಶಿವಯೋಗಿಗಳಾದ ನವಿಲಗುಂದದ ಗುರುಪಾದಸ್ವಾಮಿಗಳವರು ೧೨ ವರ್ಷದ ಹುಡುಗನಾಗಿ ಇವರಿಗೆ ದರ್ಶನಕೊಟ್ಟು "ಏನಪ್ಪ ನಿನ್ನ ಜನ್ಮ ಸಾರ್ಥಕ ಆಯಿತು ಈಗ ನಮ್ಮಕೂಡ ನವಿಲಗುಂದಕ್ಕೆ ಹೋಗಿ ಅಲ್ಲಿಯೇ ನಿನ್ನ ದೇಹ ಬಿಡುವಿಯಂತೆ ಬಾ ಎಂದು ಕರೆದರು." ಆವಾಗ್ಗೆ ಶ್ರೀ ಪಟ್ಟದ ಶಿವರುದ್ರಸ್ವಾಮಿಗಳವರು "ಇಲ್ಲರಿ ಬುದ್ಧಿ ನಾನೇನು ನವಿಲಗುಂದಕ್ಕೆ ಬರುವದಿಲ್ಲ ನನ್ನ ದೇಹ ಸೂರಕೋಡದಲ್ಲಿಯೇ ಐಕ್ಯವಾಗಲಿ ನಾನು ಇನ್ನು ಒಂದು ತಿಂಗಳಿಗೆ ನಿಮ್ಮ ಸನ್ನಿಧಿಯನ್ನು ಸೇರುತ್ತೇನೆ"ಎಂದು ಹೇಳಿ ಅಲ್ಲಿ ಬಿದ್ದ ಒಂದು ಮುಪ್ಪುಕ ಎಕ್ಕೆ ಗಿಡದ ಟೊಂಗೆಯನ್ನು ತೆಗೆದುಕೊಂಡು ಊರಿಗೆ ಹೋಗಿ ಅಲ್ಲಿ ಈ ಎಕ್ಕೆಗಿಡದ ಟೊಂಗೆಯನ್ನು ನಟ್ಟು ಅದು ಚಿಗಿತಮೇಲೆ ತಮ್ಮ ಸನ್ನಿಧಿಗೆ ಬರುತ್ತೇನೆಂದು ಸೂಚನೆ ಕೊಟ್ಟು ಹಾಗೆಯೇ ಹಿಂದಿರುಗಿ ನೋಡಲಾಗಿ ಅವರು ಮಾಯವಾಗಿದ್ದರು. ಗುರುಗಳ ಸ್ಮರಣೆ ಮಾಡುತ್ತ ಊರದಾರಿ ಹಿಡಿದು ಬರುವಾಗ ಮಧ್ಯದಲ್ಲಿ ವರ್ತಿಹಳ್ಳದಲ್ಲಿ ಶ್ರೀ ಶಿವಶಕ್ತಿಯರು ಸ್ವಾಮಿಗಳನ್ನು ತಡೆದು ಹಿಂದಕ್ಕೆ ನಡೆಯಿರಿ ಊರಿಗೆ ಹೋಗಬೇಡಿರಿ ಎಂದು ಬೇಡಕೊಂಡರು. ಅವರಿಗೆ ನಾನು ಇನ್ನು ಒಂದು ತಿಂಗಳಿಗೆ ಬರುತ್ತೇನೆಂದು ಸಮಾ-ಧಾನ ಹೇಳಿ ಮಠವನ್ನು ಸೇರಿದರು. ೫ ದಿನಗಳ ವರೆಗೆ ಸ್ವಾಮಿಗಳವರಿಗೆ ಬಾಯಿ-ಯಿದ್ದಿಲ್ಲ. ಶಿವಪೂಜೆ ಪ್ರಸಾದವೂ ನಡೆದಿರಲಿಲ್ಲ. ಹೀಗಾಗಿ ಮಠದ ವಂಶಜರಿಗೂ ಭಕ್ತರಿಗೂ ಬಹಳ ಕಳವಳವಾಯಿತು. ಆ ಮೇಲೆ ಒಂದು ದಿನ ವೇ. ಪಂ. ವೀರಾರ್ಯ ಶಾಸ್ತ್ರಿಗಳು ಉಪಾಯದಿಂದ ಸ್ನಾನಮಾಡಿಸಿ ತೀರ್ಥವನ್ನು ತೆಗೆದುಕೊಳ್ಳುವಾಗ "ಬುದ್ಧಿ ಈಗ ಪವಿತ್ರ ಸಮಯ ಇಲ್ಲಿ ಮಾತನಾಡಲಿಕ್ಕೆ ಯಾವ ಅಭ್ಯಂತರವೂ ಇಲ್ಲ ತಾವು ಮಾತನಾಡಲಿಕ್ಕೇಬೇಕು" ಎಂದು ಬಹಳ ವಿನಯದಿಂದ ಬೇಡಿಕೊಂಡರು. ಆವಾಗ್ಗೆ ಅವರ ಮುಂದೆ ಎಲ್ಲ ಸಂಗತಿಗಳನ್ನು ಹೇಳಿ ಊರಲ್ಲಿ ಮಠದ ಸದ್ಭಕ್ತರನ್ನು ಕರೆಯಿಸಿರೆಂದು ಹೇಳಿದರು ಆ ಮೇಲೆ ಊರ ಸದ್ಭಕ್ತರನ್ನು ಕರೆಯಿಸಲಾಗಿ ಅವರೆಲ್ಲರೂ ಮಠಕ್ಕೆ ಬಂದರು. ಅವರ ಮುಂದೆ ಶ್ರೀ ಸ್ವಾಮಿಗಳವರು "ಎಲೈಸದ್ಭಕ್ತರೇ ನಾನು ಇನ್ನೊಂದು ತಿಂಗಳ ಇರುತ್ತೇನೆ ಅಷ್ಟರಲ್ಲಿ ಆ ಬಸವೇಶ್ವರ ಮೂರ್ತಿಯ ಸ್ಥಾಪನೆ ಮಾಡಿರಿ. ಇಲ್ಲ-

ವಾದರೆ ನಿಮಗೆ ಕಷ್ಟ ಬಂದೀತು” ಎಂದು ಎಚ್ಚರಿಕೆ ಕೊಟ್ಟರು ಆದರೆ ಅವರು ಹೇಳುವ ಮಾತಿಗೆ ಹೂ ಎಂದು ಹೋಗಿಬಿಟ್ಟರು. ಶ್ರೀಬಸವೇಶ್ವರ ಮೂರ್ತಿ ಸ್ಥಾಪನೆ ಅವರಿಂದ ನೆರವೇರಲಿಲ್ಲವೆಂಬುದು ಹೇಳಲು ವಿಷಾದಕರ.

ಪೂಜ್ಯ ಸ್ವಾಮಿಗಳವರು ೯–೧೨–೧೯೩೬ನೇ ( ಭಾದ್ರಪದ ಶು. ೧೩ ) ದಿನ ಲಿಂಗೈಕ್ಯರಾದರು, ಇವರ ತರುವಾಯ ಶ್ರೀಗುರುಪಾದಸ್ವಾಮಿಗಳನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡರು ಅವರೇ ಈಗ ಚರಪಟ್ಟದ ಗುರುಪಾದಸ್ವಾಮಿಗಳು. ಲಿಂಗೈಕ್ಯರಾಗುವ ಮುಂಚೆ ೩ ದಿನ ಮೂತ್ರ ಕಟ್ಟಿತ್ತು. ಅದರ ಸಲುವಾಗಿ ಕೊಂಗವಾಡದ ದೇಸಾಯಿಗೌಡ್ರ ರಾಚನಗೌಡರು ಎಂ. ಬಿ.ಬಿ. ಎಸ್. ಡಾಕ್ಟರರು ಬಂದು ಚಿಕಿತ್ಸೆ ಮಾಡಿದರು. ಆದರೂ ಅವರಿಗೆ ಮೂತ್ರದ ದ್ವಾರವೇ ಸಿಗಲಿಲ್ಲ ಹೀಗಾಗಿ ಡಾ॥ ರಾಚನಗೌಡರು ವಿಚಕ್ಷಣರಾಗಿದ್ದರಿಂದ ಶ್ರೀ ಅರಹುಣ್ಸಿ ಮಹಾಗುಂಡಪ್ಪನವರ ಸಮಕ್ಷಮದಲ್ಲಿ ನೀವು ಸ್ವಾಮಿಗಳಿಗೆ ಏನಾದರೂ ಅಪವಾದ ಕೊಟ್ಟಿದ್ದೀರೋ ಹೇಗೆ, ಎಂದು ಪ್ರಶ್ನೆಮಾಡಿದರು. ಆವಾಗ್ಗೆ ಶ್ರೀ ಮಹಾಗುಂಡಪ್ಪನವರು ಹೌದು ಎಂದು ಉತ್ತರಿಸಿದರು, ಆವಾಗ್ಗೆ ಡಾಕ್ಟರರು ಎಲ್ಲ ಜನರನ್ನು ಕೂಡಿಸಿಕೊಂಡು ಸ್ವಾಮಿಗಳವರ ಪಾದಕ್ಕೆ ಹೋಗಿ ನಮ್ಮದು ತಪ್ಪಾಯಿತು ಬುದ್ಧಿ, ಎಂದು ಬೇಡಿಕೊಂಡರು. ನಂತರ ಡಾಕ್ಟರರು ಮೂತ್ರ ವಿಸರ್ಜನೆ ಮಾಡಿಸಿದರು. ಮರುದಿನ ಅವರ ದೇಹ ಲಿಂಗದಲ್ಲಿ ಐಕ್ಯವಾಯಿತು. ಇಲ್ಲಿ ಇವರು ಲಿಂಗೈಕ್ಯರಾದರೆ ಕೆರೂರಲ್ಲಿ ಪಂ. ವೀರಾರ್ಯ ಶಾಸ್ತ್ರಿಗಳ ಶಿವಪೂಜೆಯ ಘಂಟೆ ಮುರಿದು ಹೋಗಿತ್ತು ಮುರಿದ ಘಂಟೆ ಈಗ್ಯೂ ಮಠದಲ್ಲಿದೆ. ಶ್ರೀಗಳವರು ಲಿಂಗೈಕ್ಯರಾದಮೇಲೆ ಶ್ರೀಗಳವರ ಮಹಿಮೆ ಈಗ ಪ್ರಕಾಶಕ್ಕೆ ಬರಲಿಕ್ಕೆಹತ್ತಿವೆ. ಲಿಂಗೈಕ್ಯರಾದ ಮೇಲೆ ಪ್ರಕಟವಾದ ಶ್ರೀಗಳ ಮಹಿಮೆಗಳು ಪುರಾಣದಲ್ಲಿ ಬಂದಿವೆ.

ಇವರ ಪುರಾಣವನ್ನು ಇದೇ ಮಠದ ವಂಶಜರಾದ ವೇ. ಪಂ. ಚೆನ್ನಕವಿಗಳು ಬರೆದಿದ್ದಾರೆ. ಇವರು ಸಾಧಾರಣ ಮಟ್ಟಿಗೆ ಕನ್ನಡ ಅಭ್ಯಾಸ ಮಾಡಿದ್ದರು. ಸಂಸ್ಕೃತವನ್ನು ಅಭ್ಯಾಸ ಮಾಡಿದ್ದಿಲ್ಲ. ಅವರ ಅಣ್ಣಂದಿರಾದ ವೇ.ಪಂ. ವೀರಾರ್ಯಶಾಸ್ತ್ರಿಗಳವರು ಕೀರ್ತನಕಾರರು ಅವರಿಂದ ಸಂಗೀತ ಅಭ್ಯಾಸವಾಗಿತ್ತು. “ನಾನೃಷಿಃಕುರುತೇ ಕಾವ್ಯಂ” ಎಂಬ ಆರ್ಯೋಕ್ತಿಯಂತೆ ಸಂಸ್ಕಾರ ಜನ್ಯವಾಗಿ ಇವರಿಗೆ ಮೊದಮೊದಲು ಲಾವಣಿ, ಭಜನೆ– ಪದ್ಯರೂಪವಾಗಿ ಕವಿತೆಯು ಹೊರಹೊಮ್ಮಿತು. ಇವರು ತಾವೇ ಶ್ರಮವಹಿಸಿಕೊಂಡು ಹಗಲು ರಾತ್ರಿ ಷಡಕ್ಷರಾದಿ ಮಹಾಕವಿಗಳ ಕಾವ್ಯಗಳನ್ನು ಚನ್ನಾಗಿ ಓದಿ ಕಾವ್ಯದ ಲಕ್ಷಣವನ್ನರಿತುಕೊಂಡರು. ಇವರು ದೈವೀಕೃಪೆಯಿಂದಲೂ ತಮ್ಮ ಬುದ್ಧಿಯ ಬಲದಿಂದಲೂ ರೇಣುಕಶತಕ- ಮಾತೃ ಮಹಿಮೆ– ನಕ್ಷತ್ರಮಾಲೆ– ಅನ್ನದಾನೀಶ್ವರಲೀಲಾವಿಲಾಸ ಮೊದಲಾದ ಶತಕಗಳನ್ನು ಬರೆದು ಉತ್ತಮ ಕವಿಗಳೆಂದು ಹೆಸರುವಾಸಿಗಳಾದರು. ಇವರು ತಮ್ಮ ಜನ್ಮದ ಕೊನೆಯಲ್ಲಿ ಶ್ರೀ ಶಿವರುದ್ರಸ್ವಾಮಿಗಳವರ ಪುರಾಣವನ್ನು ಬರೆದು ತಮ್ಮ ಜನ್ಮವನ್ನೂ ವಾಣಿಯನ್ನೂ ಸಫಲಮಾಡಿಕೊಂಡರು. ಇವರು ವಾಗ್ಮಿಗಳೂ ವಿಮರ್ಶಾಪಟುಗಳೂ ಗುರುತತ್ವನಿಷ್ಠಾಪರರೂ ನಿಷ್ಠುರವಾದಿಗಳೂ

ಆಗಿದ್ದರು. ಶ್ರೀ ಸ್ವಾಮಿಗಳು ಪುರಾಣದ ಮುದ್ರಣ ನಡೆಯುವಾಗಲೇ ಆ ಪುರಾಣದ ಸಂಪೂರ್ಣ ಭಾಗವನ್ನು ನೋಡಿ ಸಂತೋಷಪಟ್ಟಿದ್ದರು. ಆದರೆ ದೈವಲೀಲೆ ವಿಚಿತ್ರ. ಪುರಾಣ ಪ್ರಕಾಶನ ಆಗುವದರೊಳಗೆ ಶಿವನಪ್ಪಣೆಯೇನೋ ಎನ್ನುವಂತೆ ತಮ್ಮ ದೇಹ ವನ್ನು ಶಿವಲಿಂಗದಲ್ಲಿ ಬೆರಿಸಿಕೊಂಡರು. ಪುರಾಣದ ಪುರುಷರಾದ ಶ್ರೀ ಶಿವರುದ್ರ ಸ್ವಾಮಿಗಳವರು– ಅವರಿಗೆ ಚಿರಶಾಂತಿ ಕೊಡಲಿಯೆಂದು ಬೇಡಿಕೊಳ್ಳುವೆ. ಅವ್ಯಾಜ ಪ್ರೇಮದಿಂದ ನಮ್ಮಿಂದ ಏನೊಂದು ಪ್ರತಿಫಲದ ಅಪೇಕ್ಷೆಯಿಲ್ಲದೆ ಪುರಾಣದ ಕಥಾಸಾರ ವನ್ನು ಬರೆದುಕೊಟ್ಟಿರುವ ಶ್ರೀ ವ್ಯಾ. ಸಾ. ವಿ. ಶಿವಮೂರ್ತಿಸ್ವಾಮಿಗಳವರು ಹಿರಿಯ ಮಠ ಮತಿಘಟ್ಟ ಅವರ ಮತ್ತು ಈ ಗ್ರಂಥಕ್ಕೆ ಸುಂದರವಾದ ಮುನ್ನುಡಿ ಬರೆದುಕೊಟ್ಟ ಪ್ರೊ. ಎಮ್. ಎಸ್. ಸುಂಕಾಪೂರ ಅವರ ಉಪಕಾರವನ್ನು ಸ್ಮರಿಸದಿರಲಾರೆವು. ನಂತರ ಪುರಾಣಕ್ಕೆ ಧನಸಹಾಯ ಮಾಡಿದ ಪೂಜ್ಯವ.ಹಾಸ್ವಾಮಿಗಳವರಿಗೂ, ಸಕಲ ಸದ್ಭಕ್ತ ಮತ್ತು ಮಹೇಶ್ವರರಿಗೂ, ಪುರಾಣವನ್ನು ಸಕಾಲಕ್ಕೆ ಮುದ್ರಿಸಿ ಕೊಟ್ಟ ನಮ್ಮ ಶ್ರೀ ಬಾಬುರಾವ ಕೆರೂರ ಚಂದ್ರಿಕಾ ಪ್ರೆಸ್ಸಿನ ಮಾಲಕರಿಗೂ ದೇವರು ಇತೋಪ್ಯತಿಶಯ ವಾಗಿ ಭಕ್ತಿ, ಜ್ಞಾನ, ಧನಾದಿ ಸಂಪತ್ತನ್ನು ದಯಪಾಲಿಸಲಿ ಎಂದು ಬೇಡಿಕೊಂಡು ನನ್ನ ಈ ಅಲ್ಪ ನಿವೇದನೆಯನ್ನು ಶ್ರೀ ಗುರುಗಳ ಪಾದಕ್ಕೆ ಅರ್ಪಿಸುತ್ತೇನೆ,

ಸೂರಕೋಡ
೧–೮–೧೯೬೨

ತಮ್ಮ,
ಗುರುಲಿಂಗಜಂಗಮಾನುರಾಗಿ
ಎಚ್. ಎಂ. ಚವಡಿ ಬಿ. ಎ.

॥ ಜಯ ಜಯ ಭಕ್ತ ಪ್ರೇಮಿ ನಮಸ್ತೆ ॥

# ಶಿವರುದ್ರ ವಿಜಯದ ಕಥಾಸಾರ



೧

**ಇಷ್ಟ ದೇವತಾ ಪ್ರಾರ್ಥನೆ:**

ಧರ್ಮಾಭಿರಾಮನೂ ಸತ್ಪ್ರಾರಾಮನೂ ಕಾಮ ನಿರ್ಧೂಮನೂ ಎನಿಸಿ, ಸಂತತ ಮೆರೆವ ಸಾಕ್ಷಾತ್ ಶಿವರುದ್ರನು ಎಮ್ಮನೆಂದೆಂದಿಗೂ ಸಲಹಲಿ. ಕಲ್ಪವೃಕ್ಷದಂತಿರುವ ನಿಗಮ ನುತನಾದ ಆ ಗಿರೀಶ್ವರನು ಕಲ್ಪಿತಾರ್ಥವನು ನಮಗೆಲ್ಲ ಒಲಿದೀಯಲಿ. ಅಮೃತಮಯಳಾದ ಈಶ್ವರಿಯೇ ! ಸವಿನುಡಿಯ ಸಿದ್ಧಿಯನು ನೀ ನೀವುದೆಮಗೆ.

**ಶಿವ ಪರಿವಾರ ಸ್ತುತಿ :**

ಮೋಡದಂತಿರುವ ಮೈಬಣ್ಣದಲ್ಲಿ, ಮಿಂಚಿನಂತೆ ಪಳಂಚುವ ಕಠಾರಿ ಯಾವನ ಕೈಯಲ್ಲಿದೆಯೋ ಆ ವೀರಭದ್ರೇಶ್ವರನು, ಹಾಗೂ ವಿಘ್ನವಿನಾಶಕನಾದ ವಿನಾಯಕ, ಲೋಕಾನುರಾಗದ ನೆಲೆಯಾದ ಷಣ್ಮುಖಸ್ವಾಮಿ, ಮತ್ತು ಶಂಕರಪಾದಾರವಿಂದದಲ್ಲಿ ಭೃಂಗನಾಗಿರುವ ಭೃಂಗಿ—ಇವರೆಲ್ಲ ಈ ಪುರಾಣಕ್ಕೆ ಒಳಿತನುಂಟುಮಾಡಲಿ.

**ಕವಿಯ ಸ್ವಮತಾಚಾರ್ಯ ಸ್ಮರಣೆ :**

ಜಗತ್ತಿನಲ್ಲಿ ಮೊತ್ತ ಮೊದಲು, ಯಾರು ವೀರಶೈವ ಮತದ ಧ್ವಜವ ಎತ್ತಿ ಹಿಡಿದು, ಜಂಗಮ ಜಾಲಕ್ಕೆ ಅಷ್ಟಾವರಣವನು ಅನುಗ್ರಹಿಸಿ, ಷಟ್ ಸ್ಥಲಗಳನ್ನು ಶ್ರುತಪಡಿಸಿದರೋ, ಅಂಥ ಪಂಚಪೀಠದ ಗುರುಗಳಿಗೆ, ನನ್ನೆದೆಯ ಗದ್ದುಗೆಯಿತ್ತು ಗೌರವಿಸುವೆ. ಮಲತ್ರಯದಿಂದ ಕೂಡಿದ ಮಾನವರ ಮಾಂಸ ಶರೀರವನು ಶಿವ ದೀಕ್ಷಾನುಗ್ರಹದಿಂದ ಮಂತ್ರಮಯವಾಗಿ ಮಾರ್ಪಡಿಸಿ, ಅಂಗೈಯೊಳು ಲಿಂಗವ ತೋರಿ ಆ ವೀರಶೈವ ಮತವನು ಪರಿಪಾಲಿಸುತ್ತ ಬಂದಿರುವ ಆ ಪಂಚ ಪೀಠಗಳ ಮಹಾಗುರು ಪರಂಪರೆಯನ್ನು ಸಹ ಸೇವಾಬುದ್ಧಿಯಿಂದ ಸ್ಮರಿಸುವೆನು.

ಪರಮ ಪಾವನರಾದ ಪ್ರಥಮ ಗಣದ ಮಧ್ಯದೊಳು ಮಹಾಮಹಿಮೆಯ ಕೀರ್ತಿಗೆ ಹೆಸರಾಗಿರುವ ಅರುವತ್ತುಮೂರು ಶರಣರ ಅಡಿಗಳು, ನಮಗೆ ನಿರ್ವಿಘ್ನತೆ ಯನುಂಟು ಮಾಡಲಿ. ಹಾಗೂ ವಿನಯಗುಣ ಭೂಷಣನಾಗಿ ಅಧಿಕ ವಿದ್ಯಾಸಂಪನ್ನ ನೆಂಬ ಕೀರ್ತಿಗೆ ನೆಲೆಯಾದ ನಿಜಗುಣ ಶಿವಯೋಗಿಗೆ ನಮಿಸುವೆನು.

ಯಾವ ಮತವು ವೇದೋಕ್ತವೆನಿಸಿ ಪಂಚ ಜಗದ್ಗುರುಗಳಿಂದ ಸಂಸ್ಥಾಪಿತ ವಾಯಿತೋ, ಯಾವ ಮತವು ಸಂಸಾರ ಸಾಗರವನ್ನು ಸುಗಮವಾಗಿ ದಾಟಿಸಿ

ಮೋಕ್ಷವನ್ನು ಅನುಗ್ರಹಿಸುವದರಲ್ಲಿ ಕಲ್ಪವೃಕ್ಷ ಸಮಾನವಾಗಿದೆಯೋ, ಅಂಥಾ ವೀರಶೈವ ಮತವು ನನ್ನ ಚಿತ್ತದ ತುಂಬಾ ಎತ್ತೆತ್ತಲೂ ಅಲುಗಾಡದಂತೆ ಮಂಗಳ ಮಯವಾಗಿ ಕಂಗೊಳಿಸಲಿ !

ಯಾವನು ಲಿಂಗಾಂಗಯೋಗದ ಸುಜ್ಞಾನ ಕಲಾಮಯನಾಗಿ ಶಾಂತಿಯನು ಪಸರಿಸುತ, ಓಲೈಸಿದ ಭಕ್ತಕುಲವನ್ನೆಲ್ಲಾ ಪೊರೆದು, ವೈರಾಗ್ಯ ವೈಭವದಿಂದ ಮೆರೆದು, ಶಿವ ಮತಕ್ಕೆ ಅಲಂಕಾರನೆನಿಸಿದನೋ, ಆ ಶ್ರೀ ಗುರುಪಾದ ಶಿವಯೋಗಿಯ ಚರಣವು ನನ್ನ ಚಿತ್ತದಲ್ಲಿ ಅಚ್ಚೊತ್ತಿದಂತಿರಲಿ.

ಪೂರ್ವ ಕವಿ ಸ್ತುತಿ :

ವಿಶ್ವನಾಥನ ಪಾದಪದ್ಮದಲ್ಲಿ ಝೇಂಕರಿಸುವ ಭೃಂಗನೆಂದೂ ಉಭಯ ಭಾಷಾ ಕವಿವರನೆಂದೂ ಶಿವಾಗಮಗಳ ರಸಜ್ಞನೆಂದೂ ಶಿವಭಕ್ತರ ಕವಿಶ್ರೇಷ್ಠನೆಂದೂ ಪ್ರಸಿದ್ಧಿ ಪಡೆದ ಎಲೆ "ಪದ್ಮಣಾಂಕನೆ" ತಿಳಿನುಡಿಗಳ ಪ್ರಸಾದವನು ಅನುಗ್ರಹಿಸು ನಮಗೆ.

ಯಾವನು ಎಳೆಯ ವಯಸ್ಸಿನಲ್ಲೇ ತನಗೆ ಕವಿತಾಶಕ್ತಿ ಉಂಟಾದರೂ, ಮೃತ್ಯುವಿಗೆ ತುತ್ತಾಗುವ ನರಸುರರನ್ನು ಹೊಗಳದೆ ಮೃತ್ಯುಂಜಯನಾದ ಶಿವನಿಗಾಗಿ ತನ್ನ ನಾಲಿಗೆಯನ್ನು ಮಾರಿ, ಅದರಂತೆ "ರಾಜಶೇಖರ ವಿಳಾಸ" ಮೊದಲಾದ ಮಹಾಕಾವ್ಯಗಳನ್ನು ವಿರಚಿಸಿ "ಉಭಯ ಕವಿತಾ ವಿಶಾರದ" ಎಂದು ವಿದ್ವಾಂಸರಿಂದ ಸನ್ಮಾನಿತನಾದನೋ, ಆ ಷಡಕ್ಷರಿದೇವನು ಕಾವ್ಯ ನಿರ್ಮಾಣಶಕ್ತಿಯ ನೆಮಗೆ ದಯೆಗೈಯಲಿ.

ಕವಿಯ ನಿವೇದನೆ :

ಒಂದು ಪುಣ್ಯದಿನದಂದು ಈ ಪುರಾಣದ ಕಥಾನಾಯಕನ ಕರ್ತೃ ಗದ್ದುಗೆಯ ಸನ್ನಿಧಿಯೊಳು: ಎಷ್ಟೋ ಜನ ಭಕ್ತಸಮಾಜದೊಂದಿಗೆ ನಾನೂ ಸೇರಿದ್ದೆ. ಆ ಸಮಾಜ ದಲ್ಲಿ "ಕೀರ್ತನಾಚಾರ್ಯ" ಎಂದು ಪ್ರಶಸ್ತಿಪಡೆದ ವೀರಯ್ಯ ಶಾಸ್ತ್ರಿಗಳು ಪ್ರಮುಖರಾಗಿ ದ್ದರು. ಇವರು ಏಕಪತ್ನೀವ್ರತಸ್ಥರು ಶಿವೈಕ ಪೂಜಾಲೋಲರೂ ಮಿಕ್ಕಾರಸಿಕರೂ ಆಗಿದ್ದುದರಿಂದ, ಆಗ ಇಂತೆಂದರು— ಈ 'ಮಠದ ಆದ್ಯಪ್ರವರ್ತಕರಾದ ಕರಿಬಸವ ಶಿವಾಚಾರ್ಯರ ಪರಂಪರೆವಿಡಿದು ಬಂದ ಗುರುಗಳಲ್ಲಿ, ನಾವೆಲ್ಲಾ ಕಣ್ಣಾರೆ ಕಾಣುವಂತೆ ಮಹಾ ವೈರಾಗ್ಯ ವಿಭೂತಿಯೆನಿಸಿದ ಈ ಶಿವರುದ್ರ ಮಹಾಶಿವಯೋಗಿಯ ಪುಣ್ಯ ಚಾರಿತ್ರದ ಪುರಾಣವೊಂದು ರಚಿತವಾಗಬೇಕೆಂಬ ಹೆಬ್ಬಯಕೆ ನನ್ನೆದೆಯ ತುಂಬ ತುಂಬಿ ಮೇರೆವರಿಯುತ್ತಿರುವುದು. ಅಯ್ಯಾ ಚೆನ್ನ ಕವಿಯೆ ! ನೀನಿದಕ್ಕೆ ಸಮರ್ಥ. ಆದ ಪ್ರಯುಕ್ತ ಪುರಾಣ ರಚನೆಗೆ ನೀನಿಂದಿನಿಂದಲೇ ಪ್ರಾರಂಭಿಸುವುದಾದರೆ, ಅಂಥಾ ಶಕ್ತಿಯನು ಆ ಗುರುವೇ ನಿನಗೆ ನೀಡುವನು— ಎಂದರು: ಇವರೀ ಆಶೀರ್ವಚನದಂತೆ ನಂಬಿ, ಗುರುವೇ ಗತಿಮತಿಯೆಂದು ಈ ಗ್ರಂಥ ರಚನೆಗೆ ತೊಡಗಿದೆ.

ಜಗದ ಹೊರವಳೆಯದ ತುಂಬ ಕವಿದ ಕತ್ತಲೆಯು, ರವಿ ಕಳೆವನು. ಕವಿಯಾದರೋ ಒಳ ಹೊರಗಣದಾದ ಎರಡುಂ ಬಗೆಯ ಕತ್ತಲೆಯನೂ ಕಳೆವನಾಗಿ– "ರವಿ ಕಾಣದುದಂ ಕವಿ ಕಾಣುವಂ, ಅದರಿಂದೆ ಕವಿ ರವಿಗಧಿಕಂ!'' ಎಂದು ಹೆಸರಾಯಿತು. ಸಾಹಿತ್ಯದ ಅಮೃತಾಸ್ವಾದವನು ಸಾಹಿತ್ಯದ ಉಪಾಸಕರೇ ಬಲ್ಲರಲ್ಲದೆ, ಸಾಹಿತ್ಯಸನ್ನಿಧಾನದಲ್ಲಿದ್ದರೂ ಅಜ್ಞರಿಗೆ ಮಾತ್ರ ಆದರ ಹಿರಿಮೆಗರಿಮೆಗಳು ಗೊತ್ತಾಗುವುದಿಲ್ಲ. ಆದಿಶೇಷನ ಹೆಡೆಯಲ್ಲಿಯೇ ಮಣಿ ಇದ್ದರೂ ಆ "ಮಣಿಯ ಕಲೆಯುಂ ಬೆಲೆಯುಂ" ಅವನೇನಾದರೂ ಬಲ್ಲನೇನು ?

ಸಮಾನರಾರೂ ಇಲ್ಲದ ಗುರುವು ಕರುಣಿಸಿದ ಕವಿತಾರಸವ ಆ ಗುರುವಿಗೇ ಸಮರ್ಪಿಸಿದರೆ ಅದು ಸಾರ್ಥಕ ! ಹಾಗಲ್ಲದೆ ಸಂಸಾರ ಸಂತ್ರಸ್ತರಿಗೆ ವಿನಿಯೋಗಿಸಿದ್ದಾದರೆ- "ಹಸಿರಿಗೆ ಆಶಿಸಿಹೋದ ಕೋಣ ಕೆಸರಿಗೆ ಬಿದ್ದಂತೆ" ಆಗುವುದು. ಕಾವ್ಯಕನ್ಯೆ ಎಂತಾದರೂ ಕವಿಯ ಮಗಳಲ್ಲವೆ ? ಈ ಮಗಳು ಮೇಲಾಗಿ ಬಾಳಬೇಕೆಂದಿದ್ದರೆ, ಇಷ್ಟರಾದ ತನ್ನ ವರಿಗೇ ಕೊಟ್ಟರೆ ಮಾತ್ರ ಅದು ಸಾಧ್ಯ. ಇಲ್ಲವಾದರೆ ರಸಗೆಟ್ಟವನಲ್ಲಿ ಬಾಳುವೆ ಹಸಗೆಟ್ಟಾಗ, ಹೆತ್ತವರನ್ನೇ ಆ ಮಗಳು ಶಪಿಸುವಳು; ಕೋಪಿಸುವಳು.

ನಾನೀ ಪುರಾಣವ ಬರೆಯುತ್ತಿರುವುದು ಹೊಟ್ಟೆಹೊರೆವುದಕ್ಕಲ್ಲ; ಶ್ರೇಷ್ಠ ಕೀರ್ತಿಗಾಗಿಯೂ ಅಲ್ಲ; ಹುಟ್ಟು ಸಾವುಗಳ ನಟ್ಟನಡುವಿರುವ ಕೆಟ್ಟ ಸಂಸಾರವೆಂಬ ಅಗ್ನಿಯಿಂದ ಕುದಿಯುವ ಕಾಯವಿದು; ಅಂತಲ್ಲಿಯೂ ಇದು ಕೊನೆಯ ಜನ್ಮ ! ಈ ಜನ್ಮದಲ್ಲಿ ಆ ಶಿವರುದ್ರಯೋಗಿಯ ಪಾದತೀರ್ಥ ಪ್ರಸಾದ ಫಲಸಿದ್ಧಿಗಾಗಿ ರಚಿಸುತ್ತಿರುವೆ. ಸೂರಕೋಡೆಂಬ ಗ್ರಾಮದಲ್ಲಿ ಹಿರಿಯ ಮಠ ಉಂಟು. ಶ್ರೀ ರೇಣುಕ ಶಾಖೆಯ ಮಠವಿದು. ಇದರ ಅಧಿಪತಿಗಳು ಗುರುಪಾದಾರ್ಯರು. ಇವರ ಮಗ ಚೆನ್ನ ಕವಿ. ಇವನೇ ರಚಿಸಿದನು ಈ ಪುರಾಣವನು. ಈ ನೂತನ ಕೃತಿಯ ಹೆಸರು– ಶಿವರುದ್ರ ವಿಜಯಂ. ಈ ಗ್ರಂಥಕ್ಕೆ ಆ ಶಿವರುದ್ರ ಗುರುವೇ ಒಡೆಯ ! ಶಿವರುದ್ರಾಚಾರ್ಯನ ಚಾರಿತ್ರ ವಿದು,-ಭಕ್ತಿಜ್ಞಾನ ವೈರಾಗ್ಯಗಳ ವೈಭವದ ಮನೆ. ಸಕಲ ಸಂಪತ್ತಿನ ಸ್ಥಾನ. ಕಾಮಿತಾರ್ಥವ ಕೊಡುವ ಕಲ್ಪವೃಕ್ಷ !

—: ೧ನೆಯ ಸಂಧಿಗೆ ಸಹಾಯ ಮಾಡಿದವರು :—

( ಶ್ರೀಮತಿ ಶಿವಮ್ಮ ಗೌಡಶಾನಿ ಮರಿಗೊಣ್ಣವರ. )

— ೨ —

ಭೂ ರಮಣಿಯುಟ್ಟ ನೀಲವರ್ಣದ ಸೀರೆಯಂತೆ ಭೂ ಮಂಡಲದ ಸುತ್ತ ಸಾಗರವು ಮಿಗೆ ಶೋಭಿಸುವುದು. ಈ ಸಮುದ್ರ ರಾಜನಿಗೆ ಚಂದ್ರನೇ ಮಗ. ಸಸ್ಯ ಸಮೂಹವೆಲ್ಲಾ ಸಮೃದ್ಧವಾಗುವುದು. ಈ ನನ್ನ ಕಂದನಾದ ಚಂದಿರನ ಅಂದದ ಸುಧಾಕಿರಣಗಳಿಂದಲ್ಲವೆ ! ಅಲ್ಲದೆ ಮುದ್ದಾದ ಇವನನ್ನು ಮಹಾದೇವನೂ ಸಹ ಮಸ್ತಕದಲ್ಲಿ ಮುಡಿದು

ಕೊಂಡಿರುವನು. ಇಂಥ ಕುವರನುಳ್ಳ ನನಗೆ ಸರಿಸಮಾನರಾರು ? ಎಂಬ ಮಿಕ್ಕ ನಲುವಿನಿಂದ ಉಲಿದಾಡುತ್ತಿರುವ ಹಾಗೆ ಆ ಸಮುದ್ರರಾಜ ಭೋರ್ಗರೆಯುತ್ತ ಇದ್ದಾನೆ. ಆದರೇನು ಅಗಸ್ತ್ಯ ಮಹರ್ಷಿ ಹಿಂದೆ ಬರಿದಾಗುವಂತೆ ನನ್ನನ್ನೆಲ್ಲ ಹೀರಿ ಬಿಟ್ಟನು; ಇನ್ನು ನನ್ನ ಮಗಳಾದ ಲಕ್ಷ್ಮಿಯಾದರೋ ಚಂಚಲೆ;– ಎಂಬ ಹೊಟ್ಟೆ ಯುರಿಯೂ ಒಳಗಿರುವಂತೆ ವಡವಾಗ್ನಿ ಕಾಣುವುದು ಆ ಕಡಲಿನಲ್ಲಿ ! ಈ ವಡವಾಗ್ನಿ ಯಿಂದ ಸಿಡಿದ ದೊಡ್ಡ ಕಿಡಿಯಂತೆ, ಆ ಕಡಲ ನಡುವೆ ಕನಕಪರ್ವತ ಕಂಗೊಳಿಸುವುದು ಈ ಪರ್ವತದ ದಕ್ಷಿಣ ದಿಶೆಯಲ್ಲಿ ಒಳ್ಳೆ ಲಕ್ಷಣವಾಗಿ ಕಾಣುತ್ತಿರುವುದೇ ಭಾರತದೇಶ ! ಈ ದೇಶದ ತುಂಬ ಕೆರೆಕಟ್ಟೆಗಳು ಹೊಳೆಗಳು ಬತ್ತದ ಗದ್ದೆಗಳು ಶಿವಮಂದಿರಗಳು ವನೋಪವನಗಳು ಶೋಭಿಸುತ್ತಿವೆ. ಇನ್ನೊಂದು ವಿಶೇಷವೇನಂದರೆ : ವಿಭೀಷಣನು- ಸುಪ್ರಸಿದ್ಧನಾದ ರಾವಣೇಶ್ವರನ ತಮ್ಮನಷ್ಟೇ ! ಇವನ ಸಂಕಲ್ಪದಂತೆ, ಶಿವಮತ ಸ್ಥಾಪನಾಧೀಶ್ವರನಾದ ಪೂಜ್ಯ ಶ್ರೀ ರೇಣುಕಾಚಾರ್ಯನು, ಮೂರು ಕೋಟಿ ಶಿವಲಿಂಗ ಗಳನ್ನು ಪ್ರತಿಷ್ಠಿಸಲು ಏಕಕಾಲದಲ್ಲಿ ಪ್ರತ್ಯೇಕ ಪ್ರತ್ಯೇಕ ಮೂರು ಕೋಟಿ ಗುರು ರೂಪ ಧರಿಸಿ ಮಹಿಮೆ ಮೆರೆಸಿದ ಲಂಕಾಕ್ಷೇತ್ರವು ಸಹ ಇದೇ ಭರತಖಂಡದಲ್ಲಿದೆ.

ಈ ಭರತಖಂಡದೊಳು ತಿಳಿನೀರಿಗೆ ಹೆಸರಾದ "ಬೆಣ್ಣೆಹಳ್ಳ"ವೆಂಬ ಹೆಸರಿನ ಹಳ್ಳವೊಂದು, ಓರ್ವ ಪೂರ್ವಾಚಾರ್ಯನ ಗದ್ದುಗೆಯ ಸುತ್ತ ಬಳಸಿ ಜುಳು ಜುಳು ಹರಿ ಯುವುದು. ಇದನ್ನು ಗಮನಿಸಿದರೆ- ನನ್ನ ಸೇರಿದ ಪಾಪಿಗಳ ಪಾಪವನ್ನೆಲ್ಲಾ ತೊಳೆದ ನಾನು ಗುರುಸೇವೆಯಿಂದ ಪುನೀತವಾಗುವುದು ವಿಹಿತವೆಂದು ಹಾಗೆ ಆ ಹಳ್ಳವು ಗುರು ಪ್ರದಕ್ಷಿಣೆ ಮಾಡುತ್ತಿರುವುದೋ ಎಂಬಂತೆ ಭಾಸವಾಗುವುದು. ಈ ಹಳ್ಳದಿಂದ ಸಾಲು ಸಾಲಾಗಿ ಲೀಲೆಯಿಂದ ನೀರ ತರುವ ನೀರೆಯರ–ರೂಪರೇಖೆ ಬಿಂಕಬಿನದ ಚೆಲುವು ಒಲವು ಚೆಲ್ಲಾಟ ಚೆಲ್ನೋಟ ಇವು ಪ್ರೇಕ್ಷಣೀಯತೆಯಿಂದ ನೋಟಕರ ಮೈಮರೆಸು ವುವು. ಇಂಥ ಬೆಣ್ಣೆ ಹಳ್ಳದ ದಂಡೆಯ ಪ್ರದೇಶದೊಳಗೆ ಶೃಂಗಾರದ ಮಡುವಿನಂತೆ ಕಂಗೊಳಿಸುವ"ಸೂರಕೋಡು"ಎಂಬ ಗ್ರಾಮವಿದೆ ರಾಮದುರ್ಗ ಸಂಸ್ಥಾನವೆಂಬ ರಾಜ್ಯಕ್ಕೆ ಒಳಪಟ್ಟ ಗ್ರಾಮವದು. ಈ ಊರಿನಲ್ಲಿ ಸಂಗೀತ ಕಲಾಕೋವಿದರು ರಂಗಾದ ರಸಿಕರು ಕಂಗೊಳಿಸುವ ಪರಭಾಷಾ ಪಂಡಿತರು ತುಂಗಸದನೀ ಪ್ರತಿಷ್ಠಿತರು, ಈ ಮುಂತಾದವರಿ ಗೇನೂ ಕೊರತೆಯಿಲ್ಲ. ಈ ಸೂರಕೋಡು ಗ್ರಾಮದ ಪಕ್ಕದಲ್ಲಿರುವ "ನಗಗುಂದಾಚಲ" ಎಂಬ ಹೆಸರಿನ ಗಿರಿಯನ್ನು ನೋಡಿದೊಡನೆ ಅದು-ಅಯ್ಯಾ ಮಾನವರೆ ! "ಸಾವನಪ್ಪಿ ದೇವಲೋಕವ ಸೇರಿದವರೆಲ್ಲ ಪುಣ್ಯತೀರುವ ತನಕ ತಣ್ಣಗಿರುವರು; ಅದು ಮುಗಿದ ದಿನವೇ ಮರ್ತ್ಯಲೋಕಕೆ ಅವರನೆಲ್ಲಾ ತಳ್ಳುವರು. ಆದರೆ ಈ ಗುರುದೇವ ನೆಲೆಸಿರುವ ಸೂರಕೋಡು ಕ್ಷೇತ್ರದೊಳು ಮಾತ್ರ ಎಂದೆಂದೂ ಕೇಡಿಲ್ಲದ ಶಾಂತಿ ಇರುವುದು" ಎಂದು ಆ ನಗಗುಂದಾಚಲ, ತನ್ನ ಶ್ರೋತೃಗಳಿಗೆ ಹೇಳುತ್ತಿರುವ ಹಾಗೆ ಉನ್ನತಿಯಿಂದ ಕಾಣುವುದು.

ಆ ಸೂರಕೋಡೆಂಬ ಊರಿನಲ್ಲಿ ವೀರಗೋತ್ರೀಯನಾದ ಕರಿಬಸವಾರ್ಯ ನೆಂಬ ವಿಮಲಚಾರಿತ್ರದ ವೀರಮಾಹೇಶ್ವರನೊಬ್ಬ ವಿದ್ಯಾ ಗುರುವಾಗಿ ವಾಸಿಸುತ್ತ,

ಗುರುವಂಶ ಕಾರ್ಯನಿರತನಾಗಿದ್ದ ಈತನ ಶೀಲವನ್ನಷ್ಟು ಕೇಳಿ: ಪರಸತಿಯರೆದುರು ಕುರುಟ, ಪರದ್ರವ್ಯದತ್ತ ಹೆಳವ, ಪರಶಿವೇತರ ಸ್ತುತಿಯಲ್ಲಿ ಮೂಗ, ಪರಶಾಸ್ತ್ರದ ಬಳಿ ಕಿವುಡ-ಇಂತೀ ತೆರನಾದ ಸದ್ವೃತ್ತಿಯಿಂದ ಜನ ಪೂಜ್ಯನಾಗಿ ಬಸವಾರ್ಯ ಬಾಳುತ್ತಿದ್ದ. ಇವನ ಸತಿಯ ಹೆಸರು ರುದ್ರಾಣಿ! ಇವಳು ಸುಶೀಲ ಲಕ್ಷಣ ಸಂಪನ್ನಳಾದ ಜಾಣೆ, ಮತ್ತು ಪತಿಪ್ರಾಣೆ, ಬಹಳ ಬಣ್ಣಿಸಲಿಂದೇನು? ಶಿವಪ್ರಸಾದ ಮತ್ತು ಶಿವಭಕ್ತಿ ಇವೆರಡೂ, ದಂಪತಿಗಳಾಗಿ ಬಾಳಲು ಬಯಸಿ, ಈ ಭುವಿಗಿಳಿದು ಬಂದಂತೆ, ಬಸವಾರ್ಯ ರುದ್ರಾಣಿಯರು ಪುಣ್ಯ ದಂಪತಿಗಳಾಗಿದ್ದರು. ಅವರು ನಡೆವ ಬಾಳುವೆಯ ಪಾಗ್ ಹೀಗಿತ್ತು:- ಅಖಿಳ ಜಗವಿದು ಅಸತ್ಯವಲ್ಲ; ಭುವಿಯ ಭೋಗವ ನೀಗುವ ಸರಣಿ ಸಾಧು ವಾದುದಲ್ಲ; ನಿತ್ಯಸುಖ ಸ್ವರೂಪದ ಮುಕ್ತಿ ಪಡೆಯಲು ಈ ಜಗವೇ ಸಾಧನವಲ್ಲವೇ? ಸಾಪೇಕ್ಷಣೀಯವಾದುದಲ್ಲವೇ? ಶರೀರವಿದು ಶಿವನ ಮನೆ. ಪ್ರಾಪಂಚಿಕವಾದ ರಾಗ ಭೋಗವನೆಲ್ಲಾ ಶಿವಗಿತ್ತರೆ ಅದು ಶಿವಪ್ರಸಾದವಾಗುವುದು. ಈ ಪ್ರಸಾದದಿಂದ ಪರಮಶಾಂತಿಪದ ಲಭಿಸುವುದು. ಜೀವಿಗಳಿಗಾಗಿ ದೇವನಾದ ಶಿವನೀ ಜಗವ ಸೃಜಿಸಿರು ವನು. ಶಿವೇತರ ಮೋಹದಿಂದ ಅನುಭವಿಸುವ ಭೋಗ ತುಚ್ಛವಲ್ಲದೆ, ಭೋಗವೆಂದಿಗೂ ಸ್ವಯಂ ತುಚ್ಛವಾದುದಲ್ಲ. ಇದೇ ಶಿವಾನುಭವಿಗಳ ಹಾದಿ! ಎಂದು ತಿಳಿದ ಬಸವಾರ್ಯ ರುದ್ರಾಣಿಯರಿಗಾಗಲೆ ಮೂವರು ಗಂಡುಮಕ್ಕಳಾಗಿದ್ದರು.

ಇಂತಿರುವಾಗೊಂದು ಇರುಳಿನಲ್ಲಿ ಸತೀ ರುದ್ರಾಣಿಗೊಂದು ಕನಸಾಯಿತು, ಅದರಲ್ಲಿ ದರ್ಶನವಿತ್ತ ಶಂಕರ ನಿರೂಪಿಸಿದನಿಂತು:- ಎಲೆ ಮಗಳೆ ನಿಮ್ಮ ವಂಶಾಭಿವೃದ್ಧಿಗೆ ತಕ್ಕ ಮಕ್ಕಳನು ಈಗಾಗಲೇ ಇತ್ತಿರುವೆ. ಆದರಿನ್ನು ಮುಂದೆ ಭಕ್ತೋದ್ಧಾರಾರ್ಥ ನಿನ್ನ ಗರ್ಭದಲ್ಲಾನೆ ಬರುವೆ. ಆಗ ಇವನನ್ನು ನೀವು ಗುರು ಪೀಠಕ್ಕೆ ಒಪ್ಪಿಸಲೇಬೇಕು, ಎಂದು ಆಜ್ಞಾಪಿಸಿದ ಶಂಕರ ಹಾಗೇಯೇ ಮಿಂಚಿನಂತೆ ಮಾಯವಾದನು. ಎಚ್ಚತ್ತ ಬಳಿಕ ರುದ್ರಾಣಿ, ಮಿಕ್ಕ ಆನಂದಾಶ್ಚರ್ಯಗಳಿಂದ, ಕಂಡ ಕನಸನು ಗಂಡನಿಗೆ ಬಿನ್ನವಿಸಿ ದಳು, ಕನಸಿನ ವಿವರ ಕೇಳಿದ ಬಸವಾರ್ಯನು- ಎಮ್ಮ ಮೇಲಿನಾ ಔದಾರ್ಯದಿಂದ ಶಿವ ಮೈದೋರಿದ್ದಾನೆ. ಆ ಶಿವಾಜ್ಞೆ ಪಾಲಿಸುವುದು ನಮ್ಮ ಆ ಮುಂದಿನ ಕರ್ತವ್ಯ ಎಂದು ಸಮ್ಮತಿಸಿದನು, ಸಂತಸಪಟ್ಟನು.

ಇತ್ತ ಕೈಲಾಸಪತಿಯಾದ ಕರುಣಾಳು ಶಂಕರ, ತನ್ನ ಚಿತ್ಕಳೆಗೆ ಇತ್ತ ಕಟ್ಟ ಪ್ಪಣೆಯಂತೆ, ಅದು ರುದ್ರಾಣಿಯ ಗರ್ಭದಲ್ಲಿ ಬಂದು ನೆಲೆಸಿತು, ಬರುಬರುತ್ತ ರುದ್ರಾಣಿಯ ನಡು ನಡೆ ನುಡಿಗಳು ಕಿರಿದಾದುವು. ಮುಡಿ ಮೊಲೆ ತೊಡೆಗಳು ಪಿರಿ ದಾದುವು. ಗರ್ಭಾಷ್ಟಮ ದೀಕ್ಷೆಯೂ ಆಗಮೋಕ್ತವಾಗಿ ನಡೆಯಿತು. ನವಮಾಸ ತುಂಬಿರುವಲ್ಲಿ ಒಂದು ರಾತ್ರಿ, ಶಿವಪ್ರಸಾದವ ಸವಿದ ರುದ್ರಾಣಿ ನಿದ್ರೆ ಹೋದಳು ಶಿವಧ್ಯಾನದಲ್ಲಿ. ಪ್ರಭಾತ ಸಮಯದ ಪ್ರಶಾಂತಮಯ ಮಂಗಳ ಮುಹೂರ್ತದೊಳು ರುದ್ರಾಣಿಯ ಗರ್ಭಾಬ್ಧಿಯಿಂದ ಬಾಲಾರ್ಕ ಉದಯಿಸಿದನು. ತಂದೆ ಬಸವಾರ್ಯನಾಗ ಹುಟ್ಟಿದ ಶಿಶುವಿಗೆ ಪ್ರೀತಿಮಿಗೆ ಜಾತಕರ್ಮವ ನೆರವೇರಿಸಿದನು. ಆಹ್ವಾನಿತರಾದ ಕುಲ

ಬಾಂಧವರೊಡನೆ ಶಿವರುದ್ರನೆಂ ನಾಮಕರಣ ಮಾಡಿ, ಮಣಿದೊಟ್ಟಿಲಲ್ಲಿಟ್ಟು ಮಂಗಳಾಂಗಿಯರು ತೂಗಿದರು ಜೋಗುಳವಪಾಡಿ.

## ೨ನೇಯ ಸಂಧಿಗೆ ಸಹಾಯ ಮಾಡಿದವರು
## ( ಶ್ರೀಮತಿ ಸಕ್ರವ್ವ ಬಾಲಪ್ಪ ಜವಡಿ. )

— ೩ —

ತನ್ನ ಮುದ್ದು ಶಿವರುದ್ರ ಕಂದನ ಎಳೆಮೈಗೆ ತಿಳಿದುಪ್ಪವ ತೊಡೆದು, ಬಿಸಿನೀರ ಎರೆದು, ವಿಭೂತಿಯ ಧರಿಸಿ, ಇನಿಮೊಲವಾಲ ಕುಡಿಸಿ, ತೊಟ್ಟಿಲೊಳು ಮಲಗಿಸಿ, ಧೂಪದ ಹೊಗೆಯಿತ್ತು, ತನ್ನ ಇಂಪಾದ ಸ್ವರದಿಂದ ಸೊಂಪಾದ ಜೋಗುಳವ ಪಾಡುತ್ತ, ಮಾತೆ ರುದ್ರಾಂಬೆ ಮೆಚ್ಚಾಗಿ ಸಲಹಿದಳು-ಆ ಚಿಣ್ಣನನ್ನು ! ಮಗನ ಸುಕುಮಾರಾಂಗದ ಅಂದ ಚೆಂದಗಳ ನೋಡಿ ನೋಡಿ ಆನಂದಿಸುವಳೊಮ್ಮೆ! ದಾ–ದಾ ಎಂಬ ನುಡಿ ಕೇಳಿ ಮುದ್ದಾಡಿ ಮುಂಡಾಡುವಳು ಮತ್ತೊಮ್ಮೆ!! ಇನ್ನೊಮ್ಮೆ ಚಿನ್ನದಾಭರಣ ತೊಡಿಸಿ, ಎನ್ನ "ಕಟ್ಟಾಣಿ" ಎಂದಪ್ಪಿ, ಕೊಂಡಾಡುವಳು ! ಮಕ್ಕಳ ಮೇಲಿರುವ ಮಾತೆಯ ಮೋಹ, ಮಾತಿಗೆ ಮೀರಿದುದಲ್ಲವೆ ! ಶಿವರುದ್ರ ಕುವರನ ಸೋಜಿಗವಾದ ಬಾಲ ಲೀಲೆಯ ಕೇಳಿ:– ಗುರು ಕಟಾಕ್ಷ ಬಲದಿಂದ ಮಾಯಾಮದವ ನಿಂತು ಒದೆವೆನು- ಎಂಬಂತೆ, ತೊಟ್ಟಿಲಾಟದಲ್ಲಿ ಪುಟ್ಟಕುವರ ಕಾಲಾಡಿಸುವನು; ಗುರುಪಾದ ಪದ್ಮವ ಹಿಡಿವುದು ಹೀಗಲ್ಲವೇ ಎಂಬಂತೆ– ಕೈಯ ಮುಷ್ಟಿಮಾಡುವನು. ಧನಕನಕಾಭಿಲಾಷಿಗಳ ಕಂಡು ನಗುವಂತೆ ಮುಖವನರಳಿಸುವನು; ಸದುಭಕ್ತರ ಹೃದಯ ಕಮಲದಲ್ಲಿ ಮಂಡಿಸಿರುವ ಶಿವನನ್ನು ಅಣಕಿಸುವ ಹಾಗೆ, ತಾಯ ತೊಡೆ ಯೆಡೆಯಲ್ಲಿ ಮಂಡಿಸಲು ಕಲಿತನು; ಪೊಡವಿಯೊಳು ಅಡಿಯಿಟ್ಟರೆ ಕ್ರಿಮಿಕೀಟ ಜಂತು ಗಳೆಲ್ಲಿ ನೋಯುವವೋ ಎಂಬ ದಯಾಮಯ ಸಾಮ್ಯತೆಯಿಂದ, ತಡವರಿಸುತ್ತ ಮೆಲ್ಲ ಮೆಲ್ಲನೆ ಅಂಬೆಗಾಲಿಡಲು ಆರಂಭಿಸಿದನು. ಯಾವ ಎಡರು ತೊಡರುಗಳಿಲ್ಲದೆ ಬಳೆದ ಕಂದನನ್ನು, ಎನ್ನಯ ಮನೋವನದ ಮಧುರ ಫಲವೆಂದು ಹೆತ್ತಮ್ಮ ರುದ್ರಾಣಿ ಬಗೆದುಂಬಿ ಆರೈಕೆ ಮಾಡಿದಳು. ಮುನಿಪೋತ್ತಮರ ಶಿವಧ್ಯಾನದಂತೆ, ಶಿವಯೋಗಿಗಳ ಸಮೃದ್ಧವಾದ ಶೈವತೇಜದಂತೆ, ಶಿಶು ಶಿವರುದ್ರ ಕ್ರಮವಾಗಿ ಬಳೆದನು. ಹೊಳೆದನು.

ಬಾಲ್ಯ ವಿಮೋಚನದಿಂದ ಯೌವನಕ್ಕೆ ಹೆಜ್ಜೆಯಿಟ್ಟ ಶಿವರುದ್ರ ಕುಮಾರನಿಗೆ ಮಾಹೇಶ್ವರದೀಕ್ಷೆ (ಅಯ್ಯಾಚಾರ) ಗೈಯಲೋಸುಗ, ಒಂದು ಸುಮುಹೂರ್ತದಂದು ಪ್ರಸಿದ್ಧಪಡಿಸಿ, ತಮ್ಮ ಮನೆಗುರುವ ಬಿಜಯಂಗೈಸಿ ಬಿನ್ನವಿಸಿದನು– ಬಸವಾರ್ಯ ತಂದೆ. ಸೈ, ಶಿವದೀಕ್ಷೆ ಆಯಿತು ಶಿವರುದ್ರನಿಗೆ ! ಶಿವತೇಜೋ ರಾಜಿಯ ರಾಶಿಯೋ ಎಂಬ ಹಾಗೆ ಹುಟ್ಟಿನಿಂದಲೇ ಉಜ್ವಲಿಸುವ ಶಿವರುದ್ರನಿಗೆ ಯಾವಾಗ ಗುರುಕರುಣವಾಯಿತೋ, ಆಗ ಆ ತೇಜಸ್ಸೀಗ ಒಳ ಹೊರಗೆಲ್ಲ ತುಂಬ ಬೆಳಗಿ, ಸದುಭಕ್ತರ ಹೃದಯವನೆಲ್ಲಾ ಆವರಿಸಿತು, ಆಕರ್ಷಿಸಿತು. ವಿದ್ಯಾಭ್ಯಾಸವ ಮಾಡಿಸಬೇಕೆಂಬವರಿಗೆಲ್ಲಾ ಕುಮಾರ ಶಿವರುದ್ರ ತನ್ನ ನಿಜನೀತಿಯ ಧ್ಯೇಯವನ್ನಿಂತು ಹೇಳಿದನು.

"ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು" ಎಂಬ ಸಾರತರ ವಚನ ಉಂಟು. ಒಕ್ಕಲು (ಕೃಷಿ) ತನದ ಕಲೆ ನೆಲೆಗಳ ವಿದ್ಯೆಯೇ, ಜಗಜ್ಜೀವನಕ್ಕೆ ಮೂಲ ಭೂತವಾದುದು. ಗೇಣು ಹೊಟ್ಟೆಗಾಗಿ ಮಾಣದೆ ಲೋಕಕ್ಕೆಲ್ಲಾ ವಂಚಿಸಿ, ದುರಿತವನು ಸಂಚಿಸುವಂತೆ ಧನವಗಳಿಸುವ ಇತರ ವೃತ್ತಿ ಸಲ್ಲದ್ದು. ಲೋಕೋಪಕಾರ ಎಸಗದ ವಿದ್ಯೆ ಎಷ್ಟೇ ಮಹತ್ತಾದುದಾದರೂ ಅದೇ ಹೊಲ್ಲ (ಕೆಟ್ಟ)ದ್ದು. ವಿವೇಕಿಸಿ ನೋಡಲಾಗಿ ನಿರ್ಣಯವಾಗುವುದಾದರೂ ಏನು ?– ಚರಾಚರ ಪ್ರಾಣಿಗಳ ವ್ಯವಹಾರವೆಲ್ಲ ಅನ್ನಕ್ಕಾಗಿ ಅಲ್ಲವೆ ? ಈ ಅನ್ನ ಉಂಟಾಗುವುದು, ಧಾನ್ಯದಿಂದ. ಧಾನ್ಯ ದೊರಕುವುದು, ಕೃಷಿಕರ್ಮ (ಒಕ್ಕಲುತನದ ಉದ್ಯೋಗ) ದಿಂದ ಅಂತೆಯೇ ವೇದವಿತ್ತುಗಳಾದ ಮಹಾನುಭಾವರೂ ಸಹ- 'ಕೃಷಿ ಮೂಲಮಿದಂ ಸರ್ವಧಾನ್ಯಂ' ಎಂದರೆ ಎಲ್ಲ ಧಾನ್ಯಗಳಿಗೂ ಕೃಷಿಕರ್ಮವೇ ಮೂಲ-ಎಂದು ಸಾರಿರುವರು. ಕೃಷಿಕಾರ (ಒಕ್ಕಲಿಗ)ನೇ ನಿಜವಾಗಿಯೂ ಕುಬೇರ ! ಏಕೆಂದರೆ ಈ ಕೃಷಿ ಕುಬೇರನಿಗೆ ಹೊಲವೇ ಅಳಕಾಪುರಿ ! ದನಕರುಗಳೇ ಅವನ ಪಾಲಿಗೆ ಕಿನ್ನರರು ! ಬಂಡಿಯೇ ಅವನಿಗೆ ಭವ್ಯವಾದ ರಥ ! ಪರಿಪರಿಯ ಫಲಗಳನೀವ ಮರಗಳ ತೋಟವೇ–ಚೈತ್ರ ರಥವೆಂಬ ಉದ್ಯಾನ ! ತನ್ನ ಇಚ್ಛೆಯ ಮಡದಿಯೇ– ಉಚ್ಚಭೋಗಭಾಗ್ಯವನೊದಗಿಸುವ ಶಕ್ತಿದೇವಿ ! ತನ್ನ ನಂದನರೇ ನಿಜಕ್ಕೂ ನಲಕೂಬರರು ! ಸರ್ವವಿಧಧಾನ್ಯಜಾಲವನೊಳಗೊಂಡ ರಾಜಾನ್ನವೆಂಬ ನಿಧಿಗೆ, ನೆಲೆಯಾದ ನೆಲವ (ಭೂಮಿಯ) ನಾಳುವ ಈ ಕೃಷಿಕುಬೇರನ ಭಾಗ್ಯದ ಮಹೋನ್ನತಿ ಮಾನಾತೀತವಾದುದಲ್ಲವೆ !

ಇನ್ನು, ಯಾಚಕವೃತ್ತಿ (ತಿರಿವತನ) ನೋಡಿದರೆ ಅದು ಲೋಗರ ಹಂಗಿನದು; ಅಲ್ಲದೆ "ಧರೆಗೆ ಯಾಚನೆಯಿಂದೆ ಲಘುತರ ಮುಂಟೆ ?" ಎಂಬುಕ್ತಿಯಂತೆ ತೀರಾ ಕೀಳುಮಟ್ಟದ್ದು. ಪರಸೇವೆಯಂತೂ ಸ್ವಾತಂತ್ರ್ಯವಿಲ್ಲದ್ದು. ಮತ್ತು ಭಯಭರಿತವಾದದ್ದು. ಇತರ ಉದ್ಯಮಗಳಲ್ಲಿಯಾದರೋ ಮೋಸ ಅಸತ್ಯ-ಇವು ಇದ್ದೇಇರಬೇಕಾಗುವುದು. ಇದಾವ ಕುಂದು ಕೊರತೆಗಳಿಲ್ಲದ, ಮಾನ್ಯವೂ ಧನ್ಯವೂ ಆದ ಕೃಷಿಕರ್ಮಕ್ಕೆ ಸರಿದೊರೆಯಾದ ವಿದ್ಯೆ ಇನ್ನೊಂದುಂಟೇ ?

ನೇಗಿಲಯೋಗಿಯ (ಒಕ್ಕಲಿಗನ) ನಡೆವಳಿ ಭವ್ಯವಾಗಿರುವುದು; ಇವನ ವೃತ್ತಿಗೆ ಸಂಬಂಧಪಟ್ಟ ಸಂತಸದ ನುಡಿಗಳೇ–ಅವನಿಗೆ ಜಪ; ತನ್ನಯ ದುಡಿಮೆಗಾಗಿ ಎಡೆಬಿಡದೆ ದೇಹವ ದಂಡಿಸುವುದು–ಅವನು ಎಸಗುವ ತಪ; ಅಖಿಳ ಜೀವಕೋಟಿಗೆ ಅನ್ನವನೀವುದೊಂದೇ ಅವನ ಅತಿಶಯವಾದ ಶೀಲ; ಮೆಚ್ಚಿ ನಚ್ಚಿ ಲೋಕಾಭಿವೃದ್ಧಿಗೈವ ಅರಿವೇ– ಅವನಿಗಿರುವ ಜ್ಞಾನ; ಇಂಥಾ ನೇಗಿಲಯೋಗಿ, ಕೃತಕೃತ್ಯನಲ್ಲವೇ ! ನಿಷ್ಕಪಟವೂ ನೈಜವೂ ಆದ, ಭೋಗಾಧಾರಭೂತವಾದ ಬೆಲೆಬಾಳುವ ಕೃಷಿವಸ್ತುಗಳನ್ನಿಟ್ಟುಕೊಂಡಿರುವ, ಈ ಪಾವನ ಜೀವನದ ನೇಗಿಲಯೋಗಿಗೆ, ಹೆಚ್ಚಿನವರೆಂದು ಹೆಮ್ಮೆಪಡುವ ಬಣಜಿಗವೃತ್ತಿಯವರೇನು ಎಣೆಬಂದಾರೇ ? ಭೂಮಿ ನೀರು ಅಗ್ನಿ ಗಾಳಿ ಆಕಾಶ ಸೂರ್ಯ ಚಂದ್ರ ಆತ್ಮ– ಇಂತೀವೆಂಟೂ ಶಿವನ ಶರೀರವೆನ್ನುವಲ್ಲಿ, ಧರೆಯೆಂಬುದೂ

ಒಂದು ಶಿವನ ದೇಹವೇ ಆಗಿರುವುದು. ಇಂತು ನೋಡಿದರೆ, ಧರೆಯ ಸೇವೆ ಹರಸೇವೆ-ಎಂದರಿದು ಮಾಡುವ ಕೃಷಿಕಾಯಕದ ರೈತನ ಸುಕೃತಕ್ಕೆ, ಸಮಾನವಾಗಿರುವುದು ಯಾವುದಿದೆ ಲೋಕದಲ್ಲಿ ? ಆದುದರಿಂದ ತನುವ ತೋಟವಮಾಡಿ, ಮನವ ಗುದ್ದಲಿಯ ಮಾಡಿ, ಹಾಸುಹೊಕ್ಕಾಗಿರುವ ಭ್ರಾಂತಿಬೇರನಗೆಸು, ಉಂಟಾದ ಮೋಹದ ಹೆಂಟೆಗಳ ನೊಡೆದು, ಸುವಿಜ್ಞಾನದೃಷ್ಟಿಯಿಂದ ನಿರೀಕಿಸುತ, ಬ್ರಹ್ಮವೆಂಬ ಬೀಜವ ಬಿತ್ತಿ ಬೆಳೆದು, ಕೈವಲ್ಯ ಫಲವ ನಾನುಣ್ಣುವೆ; ಸಾಕಿದೊಂದೇ ಕೆಲಸ ನನಗೆ-ಎಂದು ಕುಮಾರ ಶಿವರುದ್ರ ಆಡಿದನು, ಮಾಡಿದನು.

ಈ ಸೂರಕೋಡ ಊರಿನಲ್ಲಿ ಗೋಜನೂರ ನೀಲಪ್ಪನೆಂಬ ಗುರುಭಕ್ತ ಇದ್ದನು. ಇವನು ಮುಗ್ಧನಾದರೂ ಒಕ್ಕಲುತನದ ಕಾಯಕದಲ್ಲಿ ಮಿಕ್ಕಕಲೆಗಾರ; ಸತ್ಯವಂತ ಸನ್ಮಾನವಂತ ! ಕುಮಾರ ಶಿವರುದ್ರನಿಗೆ ಅದೇನು ಮನಸಾಯಿತೋ, ಅಥವಾ ಶಿವಚರಣ ಸೇವೆಗಿಂತ ಶಿವಶರಣಸೇವೆ ಮಿಗಿಲೆಂದೋ ಏನೋ? ಈ 'ನೀಲಪ್ಪ ಗುರುಭಕ್ತ' ನೊಂದಿಗೆ ಬೇಸಾಯ ಮಾಡಲಿಕ್ಕೆ ಪ್ರಾರಂಭಿಸಿದನು.

—: ೩ನೇಯ ಸಂಧಿಗೆ ಸಹಾಯ ಮಾಡಿದವರು :—

( ಶ್ರೀಮತಿ ಭೀಮವ್ವ ಮರಿತಿಮ್ಮಪ್ಪ ಗಡಿಗಿ ರೋಣ. )

— ೪ —

ಶಿವಸಂಬಂಧವಾದ ಜ್ಞಾನರತ್ನ ಜ್ಯೋತಿಯ ಪ್ರಭಾಭಿವೃದ್ಧಿಗೆ ಸಹಾಯಕವಾಗಿ ಅನ್ನವಿರುವದರಿಂದ, "ಜ್ಞಾನಮನ್ನಂ" ಎಂದರೆ ಜ್ಞಾನವೇ ಅನ್ನವೆಂದು, ವೇದಮಾತೆ ಬೋಧಿಸಿದಳು. ಸಪ್ತಧಾತುಗಳ ಬಲವಿಡಿದು ಜ್ಞಾನವೃದ್ಧಿ ಆಗುವುದು. ಆ ಧಾತುಗಳೆಲ್ಲ ಅನ್ನದ ಬಲದಿಂದ ಬಳೆವುವು, ಬಲಿವುವು. ಆದುದರಿಂದ ಅನ್ನಕ್ಕೆ ಮೂಲವಾದ ಕೃಷಿಕಾಯಕಕ್ಕೆ ಭಂಗಬಾರದಂತೆ, ಕುಮಾರ ಶಿವರುದ್ರನಿರುವಲ್ಲಿ !

ಒಂದಾನೊಂದು ದಿನ ಹಿಂದಿನಂತೆ ಬಂದ ಭಕ್ತಜನ, ಕುಮಾರ ಶಿವರುದ್ರ ದೇವನಿಗೆ ವಂದನೆಯ ಸಲ್ಲಿಸಿ ಇಂತೆಂದರು; ಸ್ವಾಮಿ! ನಮ್ಮ ಗುರುಗದ್ದುಗೆಯನೇರಿ ಭಕ್ತರನ್ನೆಲ್ಲಾ ಪರಿಪಾಲಿಸಲು ತಮ್ಮಲ್ಲಿ ಪ್ರಾರ್ಥಿಸುವೆವು. ಆಗ ಅವರಿಗೆ ಆ ಪೀಠದ ಸತ್ವವನ್ನು ಕುರಿತು ಈ ಮುಂದಿರುವಂತೆ ಶಿವರುದ್ರದೇವ ನಿರೂಪಿಸಿದನು.

ಈ ಗುರು ಪೀಠಕ್ಕೆ ಮೂಲ ಪ್ರವರ್ತಕನಾಗಿ ಮೊತ್ತಮೊದಲು, ಯಾವನು ತನ್ನ ಶಿವಯೋಗದ ದಿವ್ಯ ಶಕ್ತಿಯ ಉಜ್ವಲ ಮಹಿಮೆಯಿಂದ, ಗೋಡೆಯನ್ನೇ ಕುದುರೆಯ ಮಾಡಿಕೊಂಡು ಏರಿ ಊರೊಳು ಚರಿಸಿದನೋ, ಯಾವನು-ಎಣ್ಣೆ ಇಲ್ಲದೆ ದೀಪವ ಉರಿಸಿ, ಮರುದಿನ ಪರ್ಯಂತ ಕೆಂಡವನ್ನೇ ಉಂಡು ಮೆರೆದನೋ, ಮತ್ತು ಅಹಂಭಾವದ ಜಂಗಮರು ಕೆಲವರು ತನ್ನ ತೆಗಳಲು ಅವರ ಲಿಂಗಗಳನ್ನೆಲ್ಲಾ ಮಾಯವಾಗುವಂತೆ ಮಾಡಿ, ಊರಹತ್ತಿರದ ಹಳ್ಳದಲ್ಲಿ ಶಿಲೆಕಲ್ಲುಗಳ ಆಟವ (=ಬಾಲಕರು

ಕೈಯಿಂದ ತೂರಿ ಆಡುವ ಕಲ್ಲುಗಳ ಆಟ, ಇದಕ್ಕೆ "ಚಣಪಿ ಆಟ" ಎಂಬ ಹೆಸರೂ ಇದೆ.) ಆ ಲಿಂಗಗಳಿಂದ ಆಡುತ್ತ ಇರುವಾಗ, ಆ ಜಂಗಮರು ಬಂದು ದೈನ್ಯದಿಂದ ವಂದಿಸಿ ಬೇಡಿಕೊಳ್ಳಲು, ಯಾವನು ಅವರಿಗೆ ಮರಳಿ ಲಿಂಗವಕೊಟ್ಟನೋ, ಯಾವನು-ತಾನು ಶಿವೈಕ್ಯವಾದ ವರ್ಷದ ಬಳಿಕ, ಮತ್ತೆ ನಿಜರೂಪ ತೋರಿ ವೃಷಾರ್ಯನಿಗೆ ಪಟ್ಟಾಧಿಕಾರ ನಿತ್ತನೋ, ಅಂಥಾ ದಿವ್ಯನಾದ ಕರಿವೃಷಭಾಚಾರ್ಯನು ಭೂಭಾಗದ ತುಂಬ ಖ್ಯಾತಿ ಪಡೆದಿದ್ದನು. ಆ ದಿವ್ಯ ಗುರುವಿನ ಧರ್ಮಾಚಾರಗಳನ್ನೇ, ಎರಡನೆಯ ಬಸವಾರ್ಯನು ಬೋಧಿಸುತ್ತ ಸಾಧಿಸುತ್ತ, ದುರ್ಮತವ ದೂರೀಕರಿಸುತ್ತ, ತನ್ನ ಭಕ್ತವರ್ಗಕ್ಕೆಲ್ಲಾ ಕಲ್ಪ ವೃಕ್ಷಪ್ರಾಯನಾಗಿ ವೈರಾಗ್ಯ ವೈಭವದಿಂದ ಮನ್ನಣೆಗಳಿಸಿದ್ದನು. ಈ ಗುರುವಿನ ಕರಕಂಜಾತ ಸಂಜಾತನಾಗಿ ಸುಗುಣ ಸಂಪನ್ನನಾಗಿ ವೇದ ಶಾಸ್ತ್ರಜ್ಞನಾಗಿ, ಕಾಮ ವಿಜಯದಿಂಡ ಭೂಮಂಡಳದ ಶಿವನೆನಿಸಿ, ಶಾಂತಿಸಾಗರನೆಂದೂ ವಿರಕ್ತರ ಹೃದಯ ಕಮಲದಲ್ಲಿ ಮೂಡಿಸಿದ ಮೂರ್ತಿಯೆಂದೂ ಮೂರನೆಯ ಚೆನ್ನವೀರಶಿವಾಚಾರ್ಯನು ಉನ್ನತಿಯನ್ನೈದಿದ್ದನು. ಈ ಗುರುವಿನಿಂದ ಅಭಿಷಿಕ್ತನಾದ ೪ನೆಯ ಗುರುವಾದ ಶಿವಾ ಚಾರ್ಯನು ಕ್ರಿಯಾಸಿದ್ಧಿಯಿಂದ ಶಿಷ್ಯಕೋಟಿಯನ್ನುದ್ಧರಿಸುವ ಹಿತಕಾರ್ಯದಲ್ಲಿ ಧುರಂಧರ ನಾಗಿ, ದೀನೋದ್ಧಾರ ಪರಾಯಣನಾದನು. ಈ ಗುರುವರ್ಯನಿಂದ ಅಧಿಕಾರ ಪಡೆದ ೫ನೆಯ ಕರಿಬಸವ ಶಿವಾಚಾರ್ಯ ಮಹಾಶಿವಯೋಗಿಯು ಕ್ಷೀರಸಾಗರದಂತೆ ಲೋಕ ಪ್ರಿಯನಾದನು. ಈ ಗುರುಪುಂಗವನಿಂದ ಅಧಿಕಾರಾರೂಢನಾದ ೬ನೆಯ ಕರಿವೃಷಭ ಸ್ವಾಮಿಯು – ಜಿತೇಂದ್ರಿಯತೆಯಿಂದ ಯೋಗಿವರೇಣ್ಯನಾಗಿ, ಪವಿತ್ರಕಾಯದಿಂದ ಪುಣ್ಯಚರಿತ್ರನಾಗಿಯೂ, ಶೈವಾಗಮಗಳ ತತ್ತ್ವಜ್ಞಾನದಿಂದ ಸತ್ತ್ವಪರಿಪೂರ್ಣನಾಗಿ ಜಂಗಮವೃಂದದಿಂದ ವಂದ್ಯನಾದನು. ಈ ಗುರುವರನ ತರುವಾಯ ಗುರುಕುಲದ ಮಣಿದೀಪನೆನಿಸಿ, ಗುಣರಂಜಿತ–ರಾಗಭಂಜಿತನೆಂಬ ಜಸದಿಂದ, ಶಿಷ್ಯಾನುರಾಗರತ ಶಿವಧರ್ಮಾಭಿಮತನಾಗಿ, ಚಂದ್ರನಂತೆ ಶಾಂತಿಕಲಾಪರಿಪೂರ್ಣನಾದ ೭ನೆಯ ವೃಷಲಿಂಗ ದೇಶಿಕನು ಆಳಿದನು. ಇವನಿಂದ ೮ನೆಯ ಕರಿವೃಷಭನೆಂಬ ಗುರುವೂ, ಈತನಿಂದ ಬಳಿಕ ಶಿವಮತಕ್ಕೆ ಅಲಂಕಾರಪ್ರಾಯನೂ, ಶಿವಯೋಗ ಭೋಗಗಳಲ್ಲಿ ಜಾಣನೂ ಎನಿಸಿದ ೯ನೆಯ ಶಿವಸ್ವಾಮಿ ಬಾಳಿದನು. ಈ ಸ್ವಾಮಿಯಿಂದ ಗುರುತ್ವ ಮುದ್ರೆಯ ಪಡೆದ ೧೦ನೆಯ ರುದ್ರದೇಶಿಕನು–ಚರಕುಲ ಚಕ್ರವರ್ತಿ ಕಮನೀಯ ಕೀರ್ತಿ ಗುರುಸಮಯಾನು ವರ್ತಿ ವಿಜಿತೇಂದ್ರಿಯ ಮೂರ್ತಿ–ಮುಂತಾದ ಪ್ರಶಸ್ತಿಯಿಂದ ಪ್ರಶಸ್ತನಾದನು. ಈ ದೇಶಿಕನಿಂದ ಸಿಂಹಾಸನಾರೂಢನಾದ ೧೧ನೆಯ ಗುರುಪಾದಚರಾರ್ಯನಾದರೂ ಶಿವಧರ್ಮ ವನ್ನು ಸಮೃದ್ಧಗೊಳಿಸಿ ಪ್ರಭಾವಶಾಲಿ ಎನಿಸಿಕೊಂಡನು. ೧೨ನೆಯ ಗುರುವಾದ ಮುದ್ದಚರೇಶನು ನಿಷ್ಕಳಂಕಚಾರಿತ್ರ, ನಿಷ್ಕಾಪಟ್ಯ ನಿರ್ವಿಷಯಾನುರಾಗ–ಇವುಗಳಿಗೆ ಒಳ್ಳೆಯ ಹೆಸರುವಾಸಿಯಾಗಿದ್ದನು. ಇವನ ಮುಂದಿನವನಾದ ೧೩ನೆಯ ಸಿದ್ಧೇಶ ಶಿವಾಚಾರ್ಯನು–ಬಿಸಿಲಿಲ್ಲದ ಭಾನುವಿನಂತೆ, ತಾಪವಿಲ್ಲದ ತಂಗಾಳಿಯಂತೆ–ಕಂಗೊಳಿಸುತ್ತ ಶಾಪಾನುಗ್ರಹ ಸಮರ್ಥನಾಗಿದ್ದನು. ಈ ಗುರುದೇವನಿಂದ ೧೪ನೆಯ ಕರಿವೃಷಭ ಸ್ವಾಮಿ, ಮತ್ತಿವನಿಂದ ೧೫ನೆಯ ಮುದ್ದಾಚಾರ್ಯ, ಆ ಬಳಿಕ ೧೬ನೆಯ ಶಿವರುದ್ರ

ಸ್ವಾಮಿ, ಅನಂತರ ೧೭೦ನೆಯ ಚೆನ್ನವೀರ ಶಿವಾಚಾರ್ಯ, ತರುವಾಯ ೧೮೮ನೆಯ ಗುರುಪಾದ ಶಿವಾಚಾರ್ಯ, ಅಲ್ಲಿಂದ ಜಂಗಮ ಕಲ್ಪವೃಕ್ಷ ನೆನಿಸಿದ ೧೯೯ನೆಯ ವೃಷಚರ-ಪತಿ, ಆ ತರುವಾಯ ೨೦೧ನೆಯ ಗುರುಪಾದಾಚಾರ್ಯರು ಅಧಿಕಾರಿಗಳಾದರು. ಈ ಗುರು ವರ್ಯನು ತನ್ನ ಶಿವಜ್ಞಾನವೆಂಬ ಅಗ್ನಿಯಿಂದ, ತ್ರಿಕರಣಗಳೆಂಬ ಸೌದೆಯ (=ಸಮಿತ್ತು) ಸುಟ್ಟು, ಚಿತ್ಕಲಾ ಸಂಪನ್ನತೆಯಿಂದ ಪೂಡವಿಯನ್ನೇ ಪಾವನಗೈದು, ಇಹ ಪರ-ಸುಖ ಶಾಂತಿಗಳನ್ನು ನಿಜಭಕ್ತರಿಗೆ ಅನುಗ್ರಹಿಸಿ, ಕೊನೆಗೆ ವೀರವೈರಾಗ್ಯನಿರತನಾಗಿ ನವಿಲು ಗುಂದನೆಂಬ ಊರಿಗೆ ಹೋಗಿ. ಇಲ್ಲಿಯೇ ಈ ಗುರುವರೇಣ್ಯ ಶಿವೈಕ್ಯತೆ ಪಡೆದನು.

ಅಂಥಾ ಶ್ರೇಷ್ಠ ಪೀಠವನ್ನೇರುವವನಿಗೆ, ಪರಿಪಕ್ವ ಜ್ಞಾನ ಹಾಗೂ ಪರಿಸ್ಫುಟವಾದ ಶಿಷ್ಯಪಾಲನ ದಕ್ಷತೆ—ಇವು ಮುಖ್ಯವಾಗಿ ಬೇಕು. ಇವೇನೂ ಇಲ್ಲದ ನನ್ನಂಥ ಆಸೆಬು ರುಕ ಹತ್ತುವುದೆಂತೂ ಸಾಧುವಲ್ಲ; ಸಾಧ್ಯವೂ ಇಲ್ಲ. ನಟವರ್ಗಕ್ಕೆಲ್ಲಾ ಸೂತ್ರಧಾರ ನಂತೆ ಸ್ವಮತೀಯರಾದ ಸರ್ವಜನಾಂಗಕ್ಕೆ ಗುರುಪೀಠವೇ ಮೂಲಭೂತವಾದುದು. ಅಂತೆಯೇ ಪೀಠಾಧಿಪತಿಯಾಗುವವನು ನಿಜಸಾಮರ್ಥ್ಯಸಂಪನ್ನಶಾಲಿಯೇ ಆಗಿರಬೇಕು. ಇಂತಲ್ಲದೆ ಬರಿಯ ಬಡಾಯಿಯಿಂದ ಆಳುವುದಾದರೆ, ಕುರುಡರಿಬ್ಬರು ಕೂಡಿ ಕಡ ಲೊಳಗೆ ಧುಮುಕಿದ್ದಂತೆ, ಗುರು ಶಿಷ್ಯರ ಗತಿಯಾಗುವುದು.

ಭಕ್ತರು:— ಉಜ್ವಲವಾದ ಉರಿ, ತನ್ನ ತೇಜವ ಸಾರುತ್ತ ಬೀರುತ್ತ ಹೋಗುವುದೇ ? ಕಂಪುಳ್ಳ ಕಮನೀಯ ಕುಸುಮ, ವಾಸನೆಯ ಕೊಳ್ಳಿರೆಂದು ಪ್ರಾರ್ಥಿ ಸುವುದೇ ? ರಂಗಾದ ಬಂಗಾರ, ತನ್ನ ಬೆಲೆಗೈಯಿರೆಂದು ಬೇರೆಯವರನೆಲ್ಲ ಬೇಡುವುದೇ? ಇವುಗಳ ಸಹಜ ಸುಂದರತೆಯೇ ಸರ್ವರನ್ನು ಮನವೆಳೆಸುವಂತೆ ಮಾಡುವುದಿಲ್ಲವೆ ? ಎಲ್ಲಿ ಬ್ರಹ್ಮವರ್ಚಸ್ಸು ಇದೆಯೋ, ಅಲ್ಲಿ ಎಲ್ಲರ ಮನ ತಾನಾಗಿಯೇ ಮಗ್ನವಾಗುವುದು; ಮುಗ್ಧವಾಗುವುದು ಅಯ್ಯ !

ಕುಮಾರ ಶಿವರುದ್ರ:— ಮಣ್ಣಿನ ಬೊಂಬೆ, ಮುದ್ದಾದರೇನು ಪ್ರಯೋಜನ? ಚಿತ್ರದಲಿ ಬರೆದ ಚೆಲುವೆ, ಚಿತ್ತಾಕರ್ಷಕವಾದರೇನು ಫಲ ? ಗೋಡೆಯ ಮೇಲೆ ಬಣ್ಣಿಸಿದ ಕುಸುಮ, ಕಣ್ಮನಗಳಿಗೆ ಕಮನೀಯವೆನಿಸಿದರೇನು ಫಲ? ಅರಿವು. ಅನುಭವ ಇರದವನು ಗುರುಗದ್ದುಗೆಯ ಆಳಿದರೆ ಹಸನಾಗುವುದೇ ? ಅದರಿಂದ ನೀವೀಗ ಮರು ಮಾತಾಡದೆ ಆ ಗುರು ಪೀಠಕ್ಕೆ ಸಲ್ಲುವ ಸದ್ಗುಣ ಸಂಪನ್ನನನ್ನೇ ಆಯ್ಕೆ ಮಾಡಿದರೆ ನಿಮ್ಮಾಸೆ ನೆರವೇರುವುದು-ಎಂದು ಶಿಷ್ಯರನೆಲ್ಲಾ ಬೀಳ್ಕೊಟ್ಟನು.

ಶಿವರುದ್ರ ಕುಮಾರನ ಈ ಪ್ರತಿಕೂಲ ವಚನದಿಂದ ಆ ಗುರು ಮಠದ ಪ್ರಮುಖ ಶಿಷ್ಯರೆಲ್ಲ ನಿರಾಶರಾಗಿ—ಏನು ಶಿವಸಂಕಲ್ಪವೇ ಇಷ್ಟೋ, ಅಥವಾ ನಮ್ಮ ಸಮಾಜದ ದುರ್ದೈವವೋ, ಅಂತೂ ನಮ್ಮ ಆಸೆಯೆಂಬ ಸಸಿಗೆ, ಗುರುವಿನ ಸತ್ಕೃಪಾರಸ ದೊರಕದೆ ಹೋಯಿತು. ನಾವೇನೋ ಗುರುಲಕ್ಷಣ ಪೂರ್ಣನಾದ ಈ ವಟುವನ್ನು ಕಂಡೊಡನೆ, ಕಾಂತನಾದ ರವಿಯನ್ನು ಕಂಡ ಕಮಲಿನಿಯಂತೆ ನಲಿದಾಡಿದೆವು. ಆದರೆ ಆ ರವಿ

ಅಸ್ತ್ರಪಾಡೊಡನೆ ಅಳಲಿ ಬಳಲುವ ಕಮಲಿನಿಯಂತೆ, ಎಮ್ಮಯ ಗತಿಯಾಯಿತು ಈಗ, ಎಂದು ಮಾತಾಡುತ್ತ, ಮನೆ ಸೇರಿದರು ಅತ್ತ.

ಇತ್ತ ಅಚ್ಚರಿಯೊಂದು ಸಂಭವಿಸಿತು, ಈ ಪೀಠದ ಪೂರ್ವದ ಗುರುದೇವ ತಾನು ಮಾನುಷಾಕಾರ ಧರಿಸಿ, ಕುಮಾರ ಶಿವರುದ್ರದೇವನ ಮನೆಗೆ ಬಂದು ಜಯ ಶೀಲ ನಾಗೆಲೆ ಕಂದಾ ! ನೀನೀಗ ನನ್ನದೊಂದ ಮಾತನಾಲಿಸು; ಪಾಲಿಸು. ನಿನಗೆ ತಡೆ ಯಾಗುವ ವಿಘ್ನವೃಕ್ಷವ ಒಣಗಿಸಿ, ನಿನ್ನಯ ಮನೋರಥವ ನಡೆಸುವುದಲ್ಲದೆ, ಬಿಡದೆ ವಿಜಯಗೊಳಿಸುವೆ. ನೀನೀಗ ಅಖಿಳ ಭಕ್ತರ ಬಯಕೆಯಂತೆ. ನಮ್ಮ ಗುರುಗದ್ದುಗೆಯ ನೇರುವುದು, ಪರಮಪಾವನ ಶಿವದೀಕ್ಷೆ, ಜ್ಞಾನಮಯ ವೈರಾಗ್ಯ-ಇವುಗಳನ್ನು ಕರತ ಲಾಮಲಕದಂತೆ ಸುಲಭಗೊಳಿಸುವೆ ನಿನಗೆ. ಈ ಮಹಾ ಗುರುಪೀಠದ ಪ್ರಭಾವವನ್ನೂ ಪವಿತ್ರ ಧರ್ಮಾಭಿರತಿಯನ್ನೂ ಮಂಗಳವಾಗಿ ತೋರಿ ಬೀರುವುದೇ ನಿನ್ನ ಕರ್ತ್ರವ್ಯವಾಗಲಿ! ನಾನು ಈ ನೆರೆಯ ಹಳ್ಳಿಯಲ್ಲಿಯೇ ಇರುವೆ, ಈ ಸಂಗತಿಯನ್ನು ನಿನಗೆ ಉಸಿರ ಲೋಸುಗ ಬಂದೆ. ಹೊತ್ತಿನ (=ಸೂರ್ಯನ) ಕುದುರೆಗಳಿಗೆ ಕತ್ತಲೆಯ ಕಾಟವುಂಟೇ ಕುಮಾರಾ ? ಗುರುವಿನ ಕೃಪಾಕಟಾಕ್ಷ. ನಿನ್ನ ಶಿರದ ಮೇಲಿರುವಾಗ ತರಹರಿಸಲೇಕೆ ? ಒಪ್ಪಿಕೊಳ್ಳು ಕಂದ ! ಎಂದು ಹೇಳಿ ಅಲ್ಲಿಯೇ ಮಿಂಚಿನಂತೆ ಸಹಸಾ ಮಾಯವಾದನು. ಇದನೀಗ ತನ್ನ ಕಣ್ಣಾರೆ ಕಂಡು ಕಿವಿಯಾರೆ ಕೇಳಿದ ಶಿವರುದ್ರದೇವ ಆನಂದಾಶ್ಚರ್ಯ ಮಯನಾಗಿ ಇಂತೆಂದನು; ನನ್ನ ಮಾತೆಯ ಕನಸಿನಲಿ ಈ ಪೂರ್ವದಲ್ಲಿಯೇ ತೋರಿ ಹೇಳಿದ ಆ ಗುರುದೇವನೇ, ಮತ್ತೀಗ ಎನಗೂ ನಿಜಮಾನುಷಾಕಾರದಿಂದ ತೋರಿ ಹೇಳಿದುದು, ಇದೆಷ್ಟು ವೈಚಿತ್ರ್ಯ ! ಗುರುದೇವನಿಗಿರುವ ನಮ್ಮ ಮೇಲಣ ಆತ್ಮಪುತ್ರ ಮಮತೆ ಅದೆಷ್ಟು ಹಿರಿದಾದುದು ! ಎಂದು ಸ್ಮರಿಸುತ್ತ ಆನಂದಾಶ್ರುಗಳ ಸುರಿಸಿದನು. ಮಹಾಮಹಿಮಾನ್ವಿತರಾದ ಗುರುವಂಶಜರ ಲೋಕಮಾನ್ಯ ಮಹತ್ತಿಗೆ, ಇದೇ ನಿದರ್ಶನ ಸಾಕಲ್ಲವೆ ! ಎಂದು ತನ್ನಂತರಂಗದಲ್ಲಿ ನಲಿದು ನಮಿಸಿದನು—ಆ ಗುರುಪಾದ ಪದ್ಮಕ್ಕೆ. ಪೂರ್ವದಲ್ಲಿ—ಜಂಗಮಕುಲ ಸಾರ್ವಭೌಮನೆನಿಸಿದ ರೇಣುಕ ಗುರುದೇವ ತಾನು, ತನ್ನನ್ನು ಸ್ಮರಿಸಿದ ಮಂಗಳವಾಡದ ಮಾಯಿದೇವಿಗೆ, ಒಡನೆ ಒಲಿದು, ಆಕೆಯ ಮಗಳ ಮರಣದ ತೊಡಕ ಹರಿದು ಪೊರೆದಂತೆ— ಎಲೆ ಸ್ವಾಮಿ ! ನೀನೆ ಬಂದೆನ್ನನೆಚ್ಚರಿಸಿದೆ; ಉಚ್ಚರಿಸಿದೆ. ಗುರುವಾಜ್ಞೆ ಅಲಂಘನೀಯವಲ್ಲವೆ ! ಏಕೆಂದರೆ ಉಭಯ ಕವಿ ಶರಭ ಭೇರುಂಡನೆಂಬ ಬಿರುದಂಕನಾದ ರಾಘವಾಂಕಪಂಡಿತನು, ಗುರುವಾಜ್ಞೆ ಮೀರಿದುದರ ಫಲವಾಗಿ, ಹಲ್ಲುಗಳನೇ ಕಳೆದುಕೊಂಡ. ಹಾಗೆಯೇ ವೇದವ್ಯಾಸ ಮಹರ್ಷಿಯ ಮಾತ ಮೀರಿದ ಮಾನ್ಯ ಜೈಮಿನಿಋಷಿ, ಕಾಮಾಂಧನಾಗಿ ನಗೆಗೇಡಾದನು ಲೋಕದೊಳಗೆ. ಇಂತಿರುವಾಗ ಗುರುವಾಜ್ಞೆ ಮೀರಿದವರುಂಟೇ ? ಎಲೆ ಗುರುವರ್ಯ ! ನಿಮ್ಮ ಸಿಂಹಾಸನದ ಶ್ರೇಷ್ಠತೆಗೆ, ಭುವಿಯೊಳು ಭಂಗಬರದಂತೆ, ಮಂಗಳವಾಗಿ ನಡೆಸುವ ನಿಜಾಭಿಮಾನ ನಿನಗೆ ಸೇರಿದುದಲ್ಲದೆ, ನಿನ್ನೀ ಪಾದಸೇವಕನಿಗೆ ಎಂತಾದರೂ ಸಲ್ಲುವುದೇ ಸ್ವಾಮಿ ? ಎಂದು ನಿವೇದಿಸಿಕೊಂಡ ಕುಮಾರ ಶಿವರುದ್ರದೇವನು, ಆ ಮುನ್ನ

ಬಿನ್ನವಿಸಿಕೊಂಡ ಮಾನ್ಯ ಭಕ್ತರನ್ನೆಲ್ಲಾ ಪುತ್ತಾಗ ಕರೆಯಿಸಿ, ಗುರು ಪೀಠಾರೋಹಣಕ್ಕೆ ತನ್ನ ಸಮ್ಮತಿಯಿತ್ತನು. ಅಡಿಯಾಳುಗಳ ಕಡೆಗಣಿಸಿದರೆ ಕಡುದುಗುಡ ಬಿಡುವುದುಂಟೇ ? ಭಕ್ತಜನವಾಗ ಗೆಲವು ನಲವುಗಳಿಂದ ಗುರುಪಟ್ಟಾಭಿಷೇಕದ ಮಹಾ ಕಾರ್ಯಕ್ಕೆ ಉದ್ಯೋಗಿಸಿದರು.

ಈ ಸಮಾರಂಭಕ್ಕೆ ಶ್ರೀಗಳಾದ- ಪಂಚಾಕ್ಷರಯ್ಯ, ಹೆಸರಾದ ಮದ್ದಾದಯ್ಯ, ಸುಜ್ಞಾನದ ಸಿದ್ಧಲಿಂಗಾರ್ಯ, ಗುರುಸಂಗಯ್ಯ, ಸುಶೀಲನಾದ ಸೋಮಯ್ಯ, ಶಾಂತಯ್ಯ; ಗೌರವಶಾಲಿ ಗೂಳಪ್ಪ, ದಾನವೀರ ಶ್ರೀಮಂತ ಮುದಿಯಪ್ಪ, ಮತ್ತು ಸಂಕಪ್ಪ, ಬಲ್ಲಿದನಾದ ಕಲ್ಲನಗೌಡ, ಮರಿಗೌಡ, ಅಯ್ಯಪ್ಪ, ಗ್ರಾಮಾಧಿಕಾರಿ ಅಯ್ಯನಗೌಡ, ಹನುಮಂತಗೌಡ, ಲಿಂಗಯ್ಯ, ಬಸಯ್ಯ ವೀರಯ್ಯ- ಇವರೇ ಮೊದಲಾದ ಭಕ್ತ ಮಾಹೇಶ್ವರರೆಲ್ಲ ಸೇರಿ, ಪಟ್ಟಾಭಿಷೇಕೋತ್ಸವದ ಆಹ್ವಾನಪತ್ರಿಕೆಯನ್ನು ಅಚ್ಚುಗೊಳಿಸಿ ಹರಡಿದರು.

ವೇದವಿತ್ತುಗಳಾದ ಪುರೋಹಿತರ ಸಮ್ಮತಿಯಂತೆ, ಮುಂದಾಳುಗಳು ಸರ್ವ ಸನ್ನಾಹ ಮಾಡಿದರು. ಸಾರಣೆ ಕಾರಣೆ, ತಳಿರು ತೋರಣ, ಕಳಸ ಕನ್ನಡಿ. ಕುಂಡ ಮಂಡಪ- ಇವುಗಳಿಂದ ಮಠವೆಲ್ಲ ಮಂಗಳವಾಗಿ ಕಂಗೊಳಿಸಿತು. ಷಟ್‌ಸ್ಥಲಬ್ರಹ್ಮಗಳಾದ ತೊಂಡಿಹಾಳು ಗ್ರಾಮದ ಪಟ್ಟಾಧ್ಯಕ್ಷ ಸ್ವಾಮಿಗಳು, ತಿರ್ಲಾಪುರದ ಚರಮೂರ್ತಿಗಳು, ವೈರಾಗ್ಯ ವೈಭವದ ಬೆದವಟ್ಟಿಗ್ರಾಮದ ಗುರುಪಟ್ಟಾಧ್ಯಕ್ಷರು- ಈ ಗುರುವರ್ಯರೆಲ್ಲ ಬಿನ್ನೈಸಿದ ಪ್ರಕಾರ ಬಿಜಯಂಗೈಸಿದರು. ಈ ಪೂಜ್ಯರು ಮತ್ತು ಮಠಸ್ಥರು ಪಂಡಿತರುಗಳೆಲ್ಲ ವಟುವಿನ ಭವ್ಯಲಕ್ಷಣ ದಿವ್ಯ ಸದ್ಗುಣಗಳನ್ನು ಪರೀಕ್ಷಿಸಿದ ಬಳಿಕ ಸುಮುಹೂರ್ತದಲ್ಲಿ ಪಟ್ಟಾಭಿಷೇಕ ಪ್ರಾರಂಭವಾಯಿತು. ಆಗ ವೀರಶೈವಧರ್ಮದ ಗೌರವದ ಹೆಗ್ಗುರುತಾದ ವೃಷಭಧ್ವಜ, ಮಠದ ಮುಂಭಾಗದಲ್ಲಿ ಹಾರಿಸಲ್ಪಟ್ಟಿತು. ಅದರ ಅಡಿಯಲ್ಲಿ, ಆಪ್ತಕಾಮರಾದ ಭಕ್ತರ ಜಯಘೋಷ, ಮೇರೆಮೀರಿತು. ರೇಣುಕಾದಿ ಪಂಚಾಚಾರ್ಯರ ಸಾಂಕೇತಿಕವಾದ ಪಂಚಕಲಶ ಸ್ಥಾಪನಪೂರ್ವಕ, ವಿಧ್ಯುಕ್ತ ಸಂಸ್ಕಾರಗಳು ಆದನಂತರ, ಶ್ರೀ. ಬೆದವಟ್ಟಿ ಷಟ್‌ಸ್ಥಲ ಬ್ರಹ್ಮ ಶ್ರೀಗುರು ಪಟ್ಟಾಧ್ಯಕ್ಷರಿಂದ, ಶಿವರುದ್ರದೇವನಿಗೆ ಗುರುತ್ವಾಧಿಕಾರದೊಡನೆ ದಂಡಕಮಂಡಲಗಳು ಅನುಗ್ರಹಿಸಲ್ಪಟ್ಟು, ಸಿಂಹಾಸನಾರೋಹಣವಾಯಿತು. ಗಣಾರಾಧನೆ ನಡೆಸಿ, ಶಿವಾನುಭವ ಉಪದೇಶ ಮಾಡಿದರು. ನೂತನಗುರು ಶಿವರುದ್ರಸ್ವಾಮಿಗೆ. ಮಂಗಳವಾದ್ಯ ಮೊಳಗುತ್ತಿರುವಾಗ, ರಾಜಮಾರ್ಗದಲ್ಲಿ ನೂತನ ಗುರುವಿನ ಪಾಲಕಿ ಮಹೋತ್ಸವ ಹೊರಟಿತು. ಅಲ್ಲಿ, ಹರಿಸುವ ಪುರೋಹಿತರ ವೇದನಾದ, ಸುಮಂಗಲೆಯರ ಸುಶ್ರಾವ್ಯವಾದ ಶೋಭನಪಾಡುಗಳು, ಕಿವುಡುಗೊಳಿಸುವಷ್ಟು ಅಬ್ಬರವಾದ ಕರಡೆಯ ಮಜಲು ಇವು ನೋಟಕರ ಮೈ ಮರೆಸಿದುವು; ಮನ ಸೆಳೆದುವು. ಉತ್ಸವ ನೋಡಲು ಉತ್ಸುಕೆಯರಾದ ಸುಂದರೀ ಜನರ, ಕಡುಸಡಗರವಂತೂ ಕೌತುಕವಾಗಿತ್ತು.

ನೋಲೆಹಾಲಿಗಾಗಿ ಸೆರಗೆಳೆದು ಸಲಿಕಾಟವಾಡುವ ಕಂದನನ್ನು ಸಹ, ಹಠಾತ್ತಾಗಿ ಕೆಳಗೆ ನೂಕಿ, ಮುಂದೈಸಿದ ಮಂದಿಯೊಳಗೆ ನುಗ್ಗಿ ಹೋಗುವ ರಭಸದಲ್ಲಿ, ಆಕೆಯ ಕದಕ್ಕದಿಸುವ ಖಂಡವಾದ ಅಂಡುಗಳ ಅಲ್ಲಾಟವನ್ನು ಕಂಡು ಸಖಿಯರೆಲ್ಲ, ಗೊಳ್ಳೆಂದು ನಕ್ಕುಬಿಟ್ಟರು. ಮತ್ತೊಬ್ಬ ಬಾಲೆ– ಇದೇನು ಉತ್ಸವ? ಎಂದು ಕೇಳಿದಾಗ ಪಕ್ಕದವಳೊಬ್ಬಳು– ಕೇಳಿಲ್ಲವೇ ನೀನು? ನಮ್ಮೂರ ಹಿರಿಯ ಮಠದ ಸಿಂಹಾಸನಕ್ಕೆ ಇಂದು ಗುರುಸ್ವಾಮಿಯನ್ನು ಮಂಡಿಸಿದ್ದಕ್ಕಾಗಿ, ಸ್ಥಳಮನ್ನಣೆಯ ಮಹೋತ್ಸವ ಹೊರಟಿದೆ ಈಗ. ಆಶ್ರಿತ ಭಕ್ತರ ಅಖಿಳಪಾಪವ ಮುಕ್ಕಲು, ಆ ನಮ್ಮ ನೂತನ ಸ್ವಾಮಿ ನಡೆತರುತ್ತ ಇರುವನು ನೋಡಲ್ಲಿ! ಎಂದು ಕೂಡಿ ನೋಡುತ್ತ ಇದ್ದರು. ಇನ್ನೊಂದೆಡೆ ಪುಣ್ಯಬುದ್ಧಿಯ ಹೆಣ್ಣೊಬ್ಬಳು– ನೂರಾರು ಜನ್ಮಗಳಲ್ಲಿ ಸಂಪಾದಿಸಿದ ಸುಕೃತದ ಫಲವಾಗಿ, ಶ್ರೀಗುರುವಿನ ಭವ್ಯ ಉತ್ಸವ ದಿವ್ಯದರ್ಶನ ದೊರಕುವುದೆಂಬತು– ಎನ್ನುತ್ತ ನಿಂತಿದ್ದ ಆ ಸಾತ್ವಿಕ ಸುಂದರಿ– ಮುಕ್ತಿದೇವಿ ಸ್ವಯಂ ಹೆಣ್ಣಾಗಿ ನಿಂತು ನೋಡಬಂದಿರುವಳೋ– ಎಂಬಂತೆ ಕಣ್ಗೆ ಮಂಗಳವಾಗಿ ಕಂಡಳು, ಹೀಗೆ ಶಿವರುದ್ರ ಗುರುವಯ್ಯನ ಮಹೋತ್ಸವವು ಜಯಘೋಷದೊಡನೆ ಊರಕೇರಿಗಳಲ್ಲೆಲ್ಲಾ ನಡೆದು ಮರಳಿ ಮಠದ ಮುಂಗಡೆಯಲ್ಲಿ ಕಂಗೊಳಿಸುತ್ತಿರುವ ವೃಷಭಧ್ವಜದ ಹತ್ತಿರಕ್ಕೆ ಬಂದು ಮುಕ್ತಾಯವಾಯಿತು. ಕಂಗೊಳಿಸುವ ಆ ರಾಗರಂಗಿತಧ್ವಜವು– ಗಿರಿಜೆಗೊಲಿದು ಅರೆಮೈಯ್ಯನೀಡಾಡಿದ ಹಸನಿಗಿಂತಲೂ, ತರುಣಿಯರ ಸಂಪರ್ಕವೆಷ್ಟೂ ಇಲ್ಲದ ಈ ಶಿವರುದ್ರಶಿವಯೋಗಿಯ ಮಹಾಶಿವಯೋಗ ಮೇಲಾದುದು– ಎಂದು ಸಾರಿ ಹೇಳುವಂತೆ ಬಹಳ ಎತ್ತರದಲ್ಲಿ ಪಾರೆಯುತ್ತಿತ್ತು.

ಆನೇಯ ಸಂಧಿಗೆ ಸಹಾಯ ಮಾಡಿದವರು

( ಶ್ರೀಮತಿ ಶಂಕ್ರಪ್ಪ ಮಲ್ಲಪ್ಪ ಅರಹುಣಸಿ )

— ೫ –

ಜರತಾರಿ ಬಟ್ಟೆ, ಝಗಝಗಿಸುವ ಬಂಗಾರದೊಡವೆ- ಇವುಗಳಗೊಡವೆ ಇಲ್ಲದೆ, ಮೈಯೊಳು ಕಾವಿನ ಕಪನಿ, ಕೊರಳೊಳು ರುದ್ರಾಕ್ಷಮಾಲೆ, ಹಣೆಯೊಳು ಭಸ್ಮ ಪಾದದೊಳು ಹಾವುಗೆ, ಕೈಯೊಳು ಬೆತ್ತ ಹಾಗೂ ಕೈಪು-ಇಂತಿಷ್ಟೇ ಶಿವರುದ್ರ ಶಿವಯೋಗಿಯ ಸ್ವತ್ತು. ಹೊದೆಯಲೊಂದು ಕಾವಿಯ ವಸ್ತ್ರ; ಹಾಸಲೊಂದು ಹಳತಾದ ಹರಿದ ಕಂಬಳಿ-ಇದು ಅವನ ನಿರಾಡಂಬರದ ನಿಜರೀತಿ. ಋತುಮಾನ ಯಾವದೇ ಇರಲಿ ಬರಲಿ ಹೋಗಲಿ, ಈ ಶಿವಯೋಗಿಯು ಮಾತ್ರ ಗೊತ್ತಾದ ನಿರ್ಜನಸ್ಥಾನ ಒಂದರಲ್ಲೇ ನಿಚ್ಚ ಪವಡಿಸುತ್ತ ಇದ್ದ. ತಿಗಣೆ ಚಿಕ್ಕುಟಗಳ ಕಾಟ ಈ ಕಾವಿನಲ್ಲಿಂದು ಯಾರಾದರೂ ನುಡಿದರೆ, ನಾನೇನೂ ಕಾಣೆನೆಂದು, ನಗೆಯೊಡನೆ ಹೇಳುತ್ತಿದ್ದ. ಸರ್ವವನ್ನೂ ಶಿವಮಯವಾಗಿ ತಿಳಿದವರಿಗೆ, ತಿಗಣೆ ಚಿಕ್ಕುಟಗಳೆಂಬ ಭಿನ್ನಭಾವನೆ ಇರುವುದುಂಟೇ? "ಒಪ್ಪುವ ಭಕ್ತನ ಶರೀರವೇ ತಪ್ಪದೆ ನನ್ನ ಶರೀರ, ಬೇರೆಯಿಲ್ಲ"–ಎಂಬ ಶಿವಾಗಮ

ವಚನದಂತೆ, ಶಿವರುದ್ರ ಶಿವಯೋಗಿ ಯಾವಾಗಲೂ, ಅವರು ಯಾರೇ ಆಗಲಿ, ಒಕ್ಕಲು ಮಕ್ಕಳಿದ್ದ ಹೊಲಗಳಿಗೆ ತಾನಾಗಿ ಹೋಗಿ, ಪಕ್ಕದ ಕೈಯಾಳಿನಂತೆ ಅವರಿಗೆ ಅನು ಕೂಲನಾಗಿ ಕೈಗೆಲಸ ನೀಡುತ್ತ ಇದ್ದ. ಹೀಗೆ ನಿಚ್ಚ ನಿಜಕಾಯಕವ ಸಲದಿಂದ ನೆರ ವೇರಿಸಿಕೊಂಡು ಬರುವುದು, ಆವನ ಸ್ವಭಾವವಾಯಿತು, ಸಮತೆ, ಸಹನೆ, ಸಂತೃಪ್ತಿ ಯೆಂಬೀ ಸಂಪತ್ತನ್ನು, ಅದೇನು ಜನ್ಮಗಳಲ್ಲಿ ದುಡಿದ ಶಿವಯೋಗದ ಪ್ರಭಾವದಿಂದ ಸಂಪಾದಿಸಿದ್ದನೋ ಆ ಶಿವರುದ್ರಶಿವಯೋಗಿ, ಶಿವನೇ ಬಲ್ಲ ! ಇಂತು ಅಣುಮಾತ್ರ ವಾದರೂ ಪರರ ನೆರವ ಬಯಸದೆ, ಪರಸೇವಾನಿರತನಾದ ಈ ಗುರುವಿಗೂ, ಪರವೆ ನಾಚಿಯ ಪರಮ ಭಕ್ತನಾಗಿ ಮೆಚ್ಚಿ, ನಚ್ಚಿ, ಲಜ್ಜೆಗೆಟ್ಟ ಕುಂಟಣಿತನಕ್ಕೆ ಉಜ್ಜುಗಿಸಿದ ಶಂಕರನಿಗೂ, ಹೋಲಿಸಿ ನೋಡಿದರೆ, ಇದರಲ್ಲಿ ಯಾರದು ಹಿರಿಮೆ ? ಎಂಬುದು ಮನ ವರಿಕೆಯಾಗುವದೆಂದು ಬಲ್ಲವರು ಒಣ್ಣಿಸುತ್ತಿದ್ದರು. ಮಕ್ಕಳೊಡನಾಟವೆಂದರಂತೂ ಈ ಗುರುವಿಗೆ ಮಿಕ್ಕ ಪ್ರೀತಿ ! ಶಿವಯೋಗಿಗಳ ಒಡನಾಟಕ್ಕಿಂತ, ಶಿವನಂತೆ ಸಮಭಾವನೆ ಯುಳ್ಳ ಸಾಕ್ಷಾತ್ ಮಕ್ಕಳೊಡನಾಟ, ಮಿಗಿಲೆಂಬುದು ಈ ಗುರುವಿನ ಅಭಿಮತ ! ಅಂತೆಯೇ ಮಕ್ಕಳ–ಕೂಟ ಆಟ ನೋಟ ಬೇಟಗಳೆಂದರೆ, ಪ್ರತ್ಯಕ್ಷ ಪರಶಿವನ ಕೂಟ ಆಟ ನೋಟಗಳೆಂದೇ ಬಗೆದು, ಅವರೊಡನೆ ನಲಿದಾಡುತ್ತಿದ್ದನು; ನೆಗೆದಾಡುತ್ತಿದ್ದನು; ನಗೆಯಾಡುತ್ತಿದ್ದನು.

'ಶಿವಲಿಂಗ ನಿಷ್ಠಾಗರಿಷ್ಠರಾದ ನಿಜಯೋಗಿಗಳು ಆಚರಿಸುವ, ಇಹ ಪರ ಸಂಬಂಧವಾದ ಯಾವ ಕಾರ್ಯವಾಗಲಿ, ಅದೆಲ್ಲ ಚಿದಾನಂದ ಶಿವಪೂಜೆ !'– ಎಂದಿರುವ ವೇದವಾಣಿಯಂತೆ, ಈ ಶಿವರುದ್ರಶಿವಯೋಗಿಯ ನಡೆವಳಿ ಇದ್ದುದರಿಂದ. ಇದರ ಅಂತ ಸ್ತನ್ನು ಅರಿಯುವುದು ಅಷ್ಟು ಸುಲಭವಾಗಿರಲಿಲ್ಲ. ಈತನು ತನ್ನ ಚಿತ್ತದೊಳಗಾದರೂ ಪರವಸ್ತುವನ್ನೆಂದಿಗೂ ಇಚ್ಛಿಸಲಿಲ್ಲ. ಎಂಥ ವಿಷಮಾವಸ್ಥೆಯಲ್ಲಿಯೂ ಕೂಡ ಪುಸಿ ಮಾತನೊಮ್ಮೆಯೂ ಉಸಿರಲಿಲ್ಲ. ಹಿಗ್ಗು, ತಗ್ಗು, ಹೊಗಳಿಕೆ ತೆಗಳಿಕೆ, ಸ್ಥಾನ ಮಾನ ಇವುಗಳಿಗಾಗಿ ಬಯಸಲಿಲ್ಲ, ಭ್ರಮೆಗೊಳ್ಳಲಿಲ್ಲ. "ನ ತ್ಯಜಂತಿ ನ ವಾಂಛಂತಿ ವ್ಯವಹಾರಂ ಜಗದ್ಗತಂ"–ಎಂದರೆ ಶಿವಯೋಗಿಯು, ಜಗತ್ತಿನಲ್ಲಿಯ ಭೋಗಾದಿ ವ್ಯವಹಾರವಸ್ತು, ಬಯಸುವುದಿಲ್ಲ; ಬಿಡುವುದೂ ಇಲ್ಲ-ಎಂಬ ಉಪನಿಷದ್ವಾಣಿಯಂತೆ, ಬಯಸದೆ (ನಿಷ್ಕಾಮಿಯಾಗಿ) ಶಿವಾರ್ಪಿತಕ್ಕಾಗಿ ಸ್ವಯಂ ಪ್ರಾಪ್ತವಾದುದನ್ನು ಶಿವಪ್ರಸಾದವಾಗಿ ಸ್ವೀಕರಿಸುತ್ತ, ಸಂತೃಪ್ತನಾಗಿದ್ದನು. ಇವನ ಭಿಕ್ಷಾಟನ ಪದ್ಧತಿ, ಭಕ್ತರಿಗೆ ಮೆಚ್ಚು ಗಿತ್ತು. ಕುಸುಮವ ನೋಯಿಸದೆ ಅದರ ರಸವ ಸವಿವ ಭೃಂಗದಂತೆ, ಭಕ್ತರ ಮನ ನೋಯದಂತೆ ಅವರಿತ್ತ ಭಿಕ್ಷೆಗೊಂಡು, ಭಕ್ತ ಬಾಂಧವನಾಗಿ, ಚಿತ್ತಾನಂದದಿಂದ ಮೆರೆದನು.

ಶಾಂತಿ ದಾಂತಿ, ದಯಾ ಧರ್ಮ, ಪೂಜೆ ಪದ್ಧತಿ, ಸತ್ಯ ಸಹಕಾರ, ಭಾವನೆ ಬ್ರಹ್ಮ ಚರ್ಯ–ಇವುಗಳಿಂದ ಸಮೃದ್ಧವಾದ ಅವನ ತಪ ಸಂಪತ್ತು ಸಂಚರಿಸುತ್ತಿರುವ ಸಂಸಾರ ತ್ರಿಸ್ತ್ರ. ರಿಗಾಗಿ ಇರಿಸಿದ ಬುತ್ತಿಯಂತೆ, ಸಂಚಯವಾಗಿತ್ತು; ಸದ್ವಿನಿಯೋಗಗೊಳ್ಳು

ಪ್ರತಿನಿತ್ಯ ಪ್ರಾತಃಕಾಲ ಈ ಗುರುದೇವ ಎದ್ದೊಡನೆ ಶೌಚಾಚಾರವ ತೀರಿಸಿ ಅಲ್ಲಿರುವ ಬೆಣ್ಣೆಯಹಳ್ಳದೊಳಗೆ ಹಸ್ತಪಾದಾದಿಗಳನ್ನು ತೊಳೆದು, ಗುರುಸ್ಮರಣ ಮಾಡುತ್ತ, ಆ ಹಳ್ಳದ ಧಡದಲ್ಲಿರುವ ಮನೋಹರವಾದ ಬನ್ನಿಯ ಮರದಡಿಗೆ, ಶಿವ ಮಂತ್ರ ಜಪಕ್ಕಾಗಿ ಹೋಗುವದೊಂದು, ಅವನ ನಿತ್ಯ ಪದ್ಧತಿ. ಆ ಮರದಲ್ಲಿ ನೆಲಿ- ಸಿದ್ದ ಹಲವು ಜಾತಿಯ ಹಕ್ಕಿಗಳ ಚಿತ್ರವಿಚಿತ್ರವಾದ ತುಪ್ಪಳಿಂದ ತುಂಬಿ ಚೆಲುವಾದ ಆ ನೆಲವು ಜಪಾನುಷ್ಠಾನಕ್ಕಾಗಿ ಆಗಮಿಸುವ ಗುರುವಿಗೆ ಗದ್ದುಗೆಗಂಬಳಿಯನ್ನು ಹಾಸಿದಂತೆ ಕಂಗೊಳಿಸುವುದು. ಪ್ರಕೃತಿಸುಂದರವಾದ ಈ ಆಸನದ ಮೇಲೆ, ಚಂದ್ರ- ಗಾವಿಯ ವಸ್ತ್ರಧಾರಿಯಾದ ಗುರುದೇವ ತಾನು ಕುಳಿತು, ಬಾಹ್ಯ ಪ್ರಪಂಚವ ಮರೆತು ಆತ್ಮತೇಜದಲ್ಲಿ ಬೆರೆತು, ಆಸನಸ್ಥಿರನಾಗಿ, ಶಿವಯೋಗಪರನಾಗಿ, ಮೈಮರೆಯುತ್ತಿದ್ದ. ಆಗ ಈ ದೃಶ್ಯವನ್ನು ನೋಡಿದವರಿಗೆ– ಗಂಗೆ ಗೌರಿಯರ ಕಾಟಕ್ಕೆ ಬೇಸತ್ತ ಪರಶಿವನು ಧರೆಗಿಳಿದು ಬಂದಿಲ್ಲಿ ಯೋಗಪರನಾಗಿರುವನೋ ಏನೋ! ಎಂಬ ಹಾಗೆ ತೋರುತ್ತಿದ್ದ. ಇಂತು ವೀರಶೈವಾಚಾರ್ಯ ಪಟ್ಟವ ತಳೆದು, ಕಾಮಾದಿ ಅರಿಷಡ್ವರ್ಗವ ತುಳಿದು, ಮುಸುಕಿದ ಮಾಯಾಪಾಶವ ಕಳೆದು ಸ್ಥಿರವೈರಾಗ್ಯದಲ್ಲಿ ನಿಂತು, ವರಸುಜ್ಞಾನ ರತ್ನ- ವನಾಂತು, ಆ ಪ್ರಭಾಪ್ರಭಾವದಿಂದ ಪರಿರಂಜಿಸುತ್ತ, ಪರಶಿವಯೋಗವನು ಶಿವರುದ್ರ ಶಿವಯೋಗಿ ಸವಿಯುತಿರ್ಪಲ್ಲಿ!

ಏಕಾಏಕಿಯಾಗಿ ಊರಿಗೇ ಮಾರಿಕೋಪದ್ರವ ಅಡಿಯಿಟ್ಟಿತು. ಇದು ಮೊತ್ತ ಮೊದಲು–ದಕ್ಷದಾನಿ ಸ್ವಮತ ಹಿತಾಭಿಮಾನಿ ಘನವಂತ ಧನವಂತ ತೀರ್ಪು ಹೇಳು ವುದರಲ್ಲಿ ಹೆಸರಾಂತ 'ಕರಿಗೊಣ್ಣವರ' ಎಂಬ ಮನೆತನಕ್ಕೇ ಕಣ್ಣಾದ ಗೌಡಪ್ಪಗೌಡನಿಗೆ ಹೊಡೆಯಿತು. ಆಗ ಇವನ ಬಂಧುಬಾಂಧವಾದಿ ಆಪ್ತೇಷ್ಟರಿಗೆ ಆದ ಅಳಲು ಅಷ್ಟಿಷ್ಟಲ್ಲ. ಅಯ್ಯೋ! ನಂದಿಹೋಗುವುದೇ ಇಂದು ನಮ್ಮ ಕುಲದ ನಂದಾದೀಪ ಎಂದು ಅವರೆಲ್ಲ ಪ್ರಲಾಪ ಪಡುತ್ತಿದ್ದರು. ಇದ ಕೇಳಿದೊಡನೆ ಆ ಗೌಡಪ್ಪಗೌಡನ ಸ್ನೇಹಿತನಾದ ಬುಳು ಗೊಣ್ಣನವರ ರಾಯಪ್ಪ, ರಭಸದಿಂದ ಬಂದನು ಅಲ್ಲಿಗೆ. ಈತನು ಉಚ್ಚ ಶಿವಭಕ್ತ; ಅಚ್ಚ ಒಕ್ಕಲಮಗ: ಮೇಲಾಗಿ ಶಿವರುದ್ರಗುರುದೇವನ ಕಾರುಣ್ಯದ ಕಂದನೂ ಆಗಿದ್ದ. ಆಗ ಇವನು, ಒಟ್ಟಬಸುವ ಆ ಜನಕೆಲ್ಲಾ– ಸಾವ ಶರೀರಕ್ಕೇಕೆ ಇಷ್ಟು ದುಃಖ? ಎಂದು ಸಮಾಧಾನ ಹೇಳಿ, ಶಿವರುದ್ರಶಿವಯೋಗಿಯ ಸನ್ನಿಧಿಗೆ ಬಂದು ವಂದಿಸಿ ಇಂತೆಂದನು: ನಂಬಿದ ಭಕ್ತರಮೇಲೆ ತುಂಬಿದ ಕರುಣೆಯುಳ್ಳ ಗುರುವರ್ಯಾ! ಗೌಡಪ್ಪ ಗೌಡನಿಗೆ ಒದಗಿರುವ ರೋಗವನೀಗ ಪರಿಹರಿಸಿ ಪಾಲಿಸಬೇಕು. ಈ ಮಾತಿಗೆ ಉತ್ತರ ವಾಗಿ- ಸಾಯಂಕಾಲಕ್ಕೆ ಬರುವುದು– ಎಂದ ಗುರುನಿರೂಪದಂತೆ, ರಾಯಪ್ಪನು ಚಿಂತಾ ಕ್ರಾಂತನಾಗಿ ಆದರಂತೆ ಮತ್ತೆ ಬಂದು ಬಿನ್ನೈಸಿದ. ಆಗ ಶಿವರುದ್ರಗುರುವರ್ಯನು:– ಶಿವ ಪೂಜೆ ಸಂಪೂರ್ತಿ ಆಯಿತು ಎಂದನು. ಸಾಕ್ಷಾತ್ ಶಿವಸ್ವರೂಪವೇ ತಾನಾಗಿರುವ ಈ ಗುರುದೇವ, ಶಿವನನ್ನು ತಿಳಿದು ಹೇಳುವದಿದೇನು ಅಪಹಾಸ್ಯವೋ? ಅಥವಾ ಶಿವಲಿಂಗ ಪೂಜೆಯಿಂದ ಸರ್ವಾರ್ಥ ಸಿದ್ಧಿಸುವುದೆಂಬ ಬಗೆಯೋ ಏನೋ?– ಎಂದು ರಾಯಪ್ಪನು,

ಆ ಗುರುಲೀಲೆ ಹಾಗೂ ಶಿವಪೂಜೆಯ ಸೊಗಸಿಗೆ, ತನ್ನ ಮನವಾರೆ ಬೆರಗಾಗಿ ಬಂದನು. ಗೌಡಪ್ಪಗೌಡನ ಪ್ರಾಣಪಕ್ಷಿ, ಆ ರಾತ್ರಿ ಬೆಳಗಿನ ಝಾವ ಹಾರಿಹೋಯಿತು. ನೆರೆದ ಜನವೆಲ್ಲ ಗುರುಲೀಲೆ ಅಸದಳವಾದುದೆಂದು ಬಣ್ಣಿಸಿದರು ಆಗ.

ಶಿವಧ್ಯಾನಪರನಾದ ಶಿವರುದ್ರ ಗುರು ಒಮ್ಮೊಮ್ಮೆ ಶಿವತನ್ಮಯತೆಯಿಂದ ಉರಿವ ಕೆಂಡವನ್ನೇ ಕೈಯಿಂದೆತ್ತಿ ಕಬಳಿಸುತ್ತಿದ್ದ. ಪೂರ್ವಕಾಲದಲ್ಲಿ, ಸೌರಾಷ್ಟ್ರ ಸೋಮನಾಥದೇವರ ಪೂಜಾರಿಗಳು, ಶಿವನಿರ್ಮಾಲ್ಯದ ಪತ್ರಪುಷ್ಪಗಳೂ ಸಹ ಓಹಿಲದೇವನಿಗೆ ಉಣ್ಣಲಿಕ್ಕೆ ಸಿಗಬಾರದೆಂದು ಅವುಗಳನ್ನು ಸುಟ್ಟು ಬೂದಿಮಾಡುತ್ತಿದ್ದರು. ಆ ಬೂದಿಯನ್ನೇ ಮೋದದಿಂದ ಮೆಲಿದನು–ಓಹಿಲದೇವ ! ಈ ಗುರುದೇವನಾದರೋ–ಕೆಂಡವನ್ನೇ ಉಂಡುಬಿಡುತ್ತಾನೆ. ಇದೇನಾಶ್ಚರ್ಯ ! ದಕ್ಷಯಾಗದಂದು ಪ್ರತಿಪಕ್ಷಮೊಡೆಯನಾದ ವೀರಭದ್ರದೇವನಿಂದ ಶಿಕ್ಷಿಸಲ್ಪಟ್ಟಾಗ, ನನ್ನ ( ಅಗ್ನಿಯ) ಜ್ವಾಲಾ ನಾಲಗೆ ಸೀಳು ಸೀಳಾಗಿ ಹೋಯಿತು. ಮತ್ತೀಗೇನಾದರೂ ಈ ಸಮರ್ಥಗುರುವಿನ ಹಸ್ತವ ನಾನು ಸುಟ್ಟುದಾದರೆ, ಉರಿದೇಳುವ ಇವನ ಜ್ಞಾನಾಗ್ನಿಯಿಂದ, ಎಲ್ಲಿ ನಿರ್ನಾಮವಾದೇನೋ– ಎಂಬ ಭಯದಿಂದ, ಆ ಅಗ್ನಿ ಆಗ ತಣ್ಣಗಾಗಿರುವುದೆಂದರೆ ಸಲ್ಲುವುದು.

ಹುಸಿಹೋಗದ ಶಿವರುದ್ರ ಗುರುವಿನ ನುಡಿಗಳು, ಶಿವಶಾಸನದಂತೆ ಸತ್ಯತೆಯಲ್ಲಿ ಹೆಸರಾದವು. ಬ್ರಹ್ಮದೇವ ರಾವಣೇಶ್ವರ ಸರ್ಪರಾಜ– ಇವರಿಗೆ ನಾಲಗೆಗಳು ಕ್ರಮವಾಗಿ ನಾಲ್ಕು, ಹತ್ತು, ಸಾವಿರ ಇದ್ದರೂ, ಇವರೇನು ನಾಲಗೆ ಒಂದೇ ಉಳ್ಳ ಈ ಗುರುವಿಗೆ ಸರಿದೊರೆಯಾಗುವರೇ ?

ಎಲ್ಲ ಜೀವಜಾಲಕ್ಕೂ ಸುಖ ದುಃಖ ಸಮಾನವಾದುದೆಂಬ ಅಖಂಡ ಜ್ಞಾನದಿಂದ, ಅಖಿಳ ಪ್ರಾಣಿಯಲ್ಲಿಯೂ ಕರುಣಾಳುವಾದ ಶಿವರುದ್ರಸ್ವಾಮಿ, ಗುಬ್ಬಿ ಮೊದಲಾದ ಪಕ್ಷಿಗಳಿಗೆಲ್ಲಾ ಕುಡಿಯಲು ನೀರೆರೆದು ನಲಿಯುತ್ತಿದ್ದ. ಶಿವದೀಕ್ಷಾದಿ ಶುಭ ಶೋಭನ ಪ್ರಸಂಗದಲ್ಲಿ ಭಕ್ತರೊಲಿದಿತ್ತ ವಸ್ತುವನ್ನೆಲ್ಲಾ ವಿದ್ಯಾರ್ಥಿಗಳೇ ಕೈಕೊಳ್ಳುತ್ತಿದ್ದರಲ್ಲದೆ, ಅದನ್ನು ತನ್ನ ಕೈಯಾರೆ ತೆಗೆದುಕೊಳ್ಳುವ ಮಾತಂತಿರಲಿ, ಕಣ್ಣೆತ್ತಿ ನೋಡಲಿಲ್ಲ ವೆಂಬುದನ್ನು, ಈ ಕಾವ್ಯಕರ್ತನೇ ಸ್ವಯಂ ಕಂಡಮಾತು. ಇದೇನು ಸತ್ಯವಾಗಿಯೂ ಅತಿಶಯೋಕ್ತಿಯಲ್ಲಲ್ಲ.

ಪ್ರಪಂಚಕ್ಕೆ ಪ್ರಾಣಭೂತವಾಗಿರುವ ಧನದಾಶೆಯ ಘನಮಹಿಮೆಯ ಬಣ್ಣಿಸುವುದು ಅಸದಳ. ಏಕೆಂದರೆ ಸರ್ವೈಶ್ವರ್ಯ ಸ್ವಾಮಿಯಾದ ಶಿವನೂ ಸಹ, ಧನಪತಿಯಾದ ಕುಬೇರನನ್ನು ಘನಮಿತ್ರನನ್ನಾಗಿ ಮಾಡಿಕೊಂಡ. ಸಿರಿದೇವಿಯನ್ನೇ ಹರಿ ತಾನು ಉರದಲ್ಲಿ ಇರಿಸಿಕೊಂಡ. ಇಂತಿದ್ದರೂ ಧನದ ವಿಷಯವಾಗಿ ಶಿವರುದ್ರಶಿವಯೋಗಿಗೆ ಇದ್ದ ಪರಮ ವಿರತಿಯನ್ನು ಕಂಡ ಪಂಡಿತರು ಕೊಂಡಾಡದಿರುವರೇ ?

ಹೆಣ್ಣಿಗಾಗಿ ಎಳಸಿದ ವಿಷ್ಣು, ಹತ್ತು ಹುಟ್ಟುಗಳಲ್ಲಿ ಬಂದು ಹೆಣಗಿದನು. ಮಗಳ (- ಸರಸ್ವತಿಯ) ಮೋಹಿಸಿದ ಬ್ರಹ್ಮ, ಅದಕಾಗಿ ತನ್ನೊಂದು ತಲೆಯ ಕಳೆದು ಕೊಂಡುದು ನಿಜ. ಅಹಲ್ಯೆಗೆ ಅಳುಪಿದ ಅಮರೇಂದ್ರನಂತೂ, ಅಂದಗೆಟ್ಟ ಮೈಯಿಂದ 'ಸಹಸ್ರಯೋನಿ' ಎಂದೇ ಹೆಸರಾದನು. ಮುನಿಜನರನಂತೂ ಮಣ್ಣು ಮುಕ್ಕಿಸಿದ ಹೆಣ್ಣಿನ ರೂಪು, ಸಾಮಾನ್ಯವಾದುದಲ್ಲ. "ಹೆಣ್ಣೇ ಲೋಕದ ಕಣ್ಣು" ಎಂಬ ಮಾತಂತಿರಲಿ; ಮಡದಿಯನು ಎಡೆಬಿಡದೆ ಬಿಡದಪ್ಪಿ ಕಡು ಸಂತಸಂಬಡುವ ಮೃಡದೇವ, ತನ್ನೆಡಗಡೆಯ ಒಡಲನೆಲ್ಲವ, ಆ ಮಡದಿಗಾಗಿಯೇ ಮೀಸಲಾಗಿರಿಸಿ, 'ಅರ್ಧನಾರೀಶ'ನೆನಿಸಿದನು. ಇಂಥ ಹೆಣ್ಣನೂ ಮಣ್ಣಿನಿಂದಾದ ಗೊಂಬೆ ಎಂದರಿದ ಶಿವರುದ್ರಯೋಗಿಯ ಧೃಡ ವೈರಾಗ್ಯಶ್ರೀ, ಅದೆಷ್ಟು ಧೀರವಾದದ್ದು ! ಸಾರವಾದದ್ದು !! ಅಗಸ್ತ್ಯಮಹರ್ಷಿಯು ಅಟಕಸಡಳವಾದ ಘೋರ ಕಾನನದ ಮಧ್ಯೆ ನೆಲಸಿ, ಗೆಡ್ಡೆ ಗೆಣಸು, ಗಾಳಿ ನೀರುಗಳ ಸೇವಿಸಿ, ಸಾಗರವನೀಂಟಿದುದೇನೂ ದೊಡ್ಡದಲ್ಲ. ಭುವಿಯೊಳು ಬಾಳುತ, ಭುಕ್ತಿಯ ತೊರೆಯದೆ, ಮೆರೆಯುವ ಈ ಗುರುವರ್ಯ, ಹಾಗೂ ಆ ಅಗಸ್ತ್ಯ ಮಹರ್ಷಿ ಇವರಿಬ್ಬರಲ್ಲಿ, ಯಾರ ಇಂದ್ರಿಯಜಯು ಮಿಗಿಲಾದದ್ದಾಗುವದು ಎಂಬುದನ್ನು ಬಲ್ಲಿದರು ಭಾವಿಸಲಿ !

ಒಂದಾನೊಂದುಸಾರೆ ಸೂರಕೋಡು ಗ್ರಾಮಸ್ಥರಲ್ಲಿ ಪರಸ್ಪರ ದ್ವೇಷಾಸೂಯೆ ಬಲಿತು, ಎರಡು ಪಂಗಡಗಳಾದವು. ಹಳ್ಳಿಯ ಪೊಳ್ಳುಗರಾದ ಒಂದು ಪಂಗಡದ ಕೇಡಿಗರು, ಶಿವರುದ್ರ ಶಿವಯೋಗಿಯನ್ನು ನಿರ್ನಿಮಿತ್ತ ನಿಂದಿಸುತ್ತ, ಬಾಯಿಗೆ ಬಂದಂತೆ ಬೊಗಳುತ್ತ, ಮನಬಂದಂತೆ ಮಾನಹೀನವಾಗಿ ತೆಗಳುತ್ತ, ತಮ್ಮ ಪಾಪದ ಬಲದಿಂದ ನಲಿದಾಡಿದರು. ಹಾಗೂ ಇಲ್ಲದ ವ್ಯಾಜ್ಯವನ್ನು ಕಲ್ಪಿಸಿಕೊಂಡು, ಗುರುದೇವನ ಸ್ಥಾನಮಾನ ಏನೊಂದನ್ನೂ ಯೋಚಿಸದೆ, ತಮ್ಮ ಎದುರು ಪಂಗಡದವರೊಂದಿಗೆ ಈ ಗುರುವನ್ನೂ ಅಪರಾಧಿಸ್ಥಾನದಲ್ಲಿ ಸೇರಿಸಿ ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡಿದರು. ಅಲ್ಲದೆ ಹೀಗೆ ಮಾಡಿದೆನೆಂಬ ಸ್ವಸಂತೋಷದಿಂದ, ಕೈಕೈಹೊಯ್ದು ನಗುತ್ತ ಗೇಲಿಮಾಡಿದರು. ಇದನ್ನು ನೆನೆದುಕೊಂಡರೆ ಈಗಲೂ ನನ್ನ (ಕಾವ್ಯಕರ್ತನ) ಆತ್ಮ ಸಂಕಟಪಡುವುದು. ದೌರ್ಜನ್ಯ ಪ್ರಿಯರಿಗೆ ಅಲ್ಲದ್ದಾವುದು ಸಲ್ಲದ್ದಾವುದು! ಕೀಟಕರಾದ ಕಾಟುಗ ಜನರಿದ್ದ ಊರು ಊರ್ಜಿತವಾಗುವುದೇ ? ಹುಳಿಯಿಂದ ಹಾಲು ಕೆಡುವಂತೆ, ಮುಳಿಸಿಂದ ತಪ ಅಳಿವಂತೆ, ಲೋಭದಿಂದ ಸುಗುಣ ಸರಿವಂತೆ, ಮಂಜಿನಿಂದ ತಾವರೆ ಮುಸುಕಾಗುವಂತೆ, ಗಾಳಿಯಿಂದ ಮೋಡ ಓಡುವಂತೆ, ನಿಂದೆಯಿಂದ ನಿಜಗೌರವ ನಾಶವಾಗುವಂತೆ, ಖಳ ಸಂತಾನದಿಂದ ಕುಲಕೀರ್ತಿ ಕಳಚಿಬೀಳುವಂತೆ ಕ್ರೂರ ದುರ್ಜನರಿಂದ ಊರು ಹಾಳಾಗುವುದು. ತನ್ನ ಹಸುಳೆಯ ಮಲವ ತೆಗೆವಾಗ ಮೂಗಮುಚ್ಚಿ, ಒಲುಮೆಗಾಗಿ ಮಲವ ತೆಗೆವಳು ಹಡೆದಮ್ಮ ! ಆದರೆ ಸಂಬಂಧವೇ ಇಲ್ಲದ ನಮ್ಮಗಳ ಪಾಪರೂಪ ಮಲವ, ತಮ್ಮ ನಾಲಗೆಯಿಂದೆತ್ತಿ ನೆಕ್ಕಿ ನಿರ್ಮಲಗೊಳಿಸುವ ಈ ನಿಂದಕರು ಹಡೆದಮ್ಮನಿಗಿಂತಲೂ ಹೆಚ್ಚಿನವರೆಂದರೆ ಒಪ್ಪಲಾರರೆ ? ಪರರ ಸಿರಿಯ ಅಪಹರಿಸಿದ, ಮರೆತಾದರೂ ಪರರಿಗೆ ಕೇಡುಮಾಡಿದ, ಪರರ ಹೆಂಗಿಗೆ ಒಳಗಾದ ನಡೆವಳಿ, ಶಿವರುದ್ರಸ್ವಾಮಿಯ

ಜೀವನದಲ್ಲಿಯೇ ಇಲ್ಲ. ಹೀಗಿದ್ದರೂ ಸ್ವಾಮಿಗೆ ನಿರ್ನಿಮಿತ್ತ ಎಡರು ತೊಡರುಗಳನ್ನೊಡ್ಡಿದರು ದುರ್ಜನರು. ಎನ್ನುವಾಗ ಶಿವನಿಷ್ಠೆಯ ಮೀರಲಾರಿಗೆ ಅಳವಹುದು ? 'ಗುರುದೇವೋ ಮಹಾದೇವಃ' ಎಂದಿರುವ ಸಾಕ್ಷಾತ್ ಗುರುಸ್ವರೂಪವ, ಜಗದ ಜಡಜನರೇನ ಬಲ್ಲರು ? ಹುರಿವ ಹಂಚು, ರುಚಿಯ ಬಲ್ಲುದೇ ? ಮಂಗ ಬಲ್ಲುದೇ ಮಂಚದ ಸೊಗಸ ? ಗುರುದೇವನನ್ನು ಅಳಲಿಸಿ ಬಳಲಿಸುವೆನೆಂಬ ಈ ತಿಳಿಗೇಡಿಗಳ ಕಾರ್ಯವು, ಅಳಿಯುವವನು ಕೊಳಗವ ಬಳಲಿಸುವೆನೆಂದಂತೆ ವೃಥಾ ತಾವೇ ಬಳಲುವಂಥದು. ಆದರೂ ಸ್ವಾಮಿಯನ್ನೆನೋ ಬೆಂಬಿಡದೆ ಕಾಡಿದರು. ಈ ಕಾಟಕ್ಕೆ ಅವರ ಮೇಲೆ ಸ್ವಾಮಿಯು ಮಾತ್ರ ಕೋಪಗೊಂಡನೆಂಬ ಮಾತು ಒಂದುಕಡೆ ಹಾಗಿರಲಿ, 'ಕೋಪ'ವೆಂಬ ಶಬ್ದವು ಶಬ್ದಕೋಶದ ಪುಟದಲ್ಲಿತ್ತೇ ಹೊರತು, ಸ್ವಾಮಿಯ ಹೃದಯದಲ್ಲಿ ಎಲ್ಲಿಯೂ ಅದರ ಸುಳುವಿರಲಿಲ್ಲ: ಉಳುವಿರಲಿಲ್ಲ. ತ್ರಿಪುರ ಸಂಹಾರ ಹಾಗೂ ಕಾಮದಹನ ಮಾಡುವಲ್ಲಿ, ಮಹಾದೇವನಿಗೆ ಕೋಪೋದಯವಾಗಿತ್ತೆಂಬ ವರ್ಣನೆಯನ್ನು ಕೇಳಿದ್ದೇವೆ. ಎಂಥ ಉಪದ್ರವದಲ್ಲಿಯೂ ಶಿವರುದ್ರ ಶಿವಯೋಗಿ ಮಾತ್ರ ಕೋಪವಾದುದೇ ಇಲ್ಲ. ಈ ವಿಧವಾದ ನಡೆವಳಿಯುಳ್ಳವರೇ ಮಹಾತ್ಮರೆನಿಸುವರಲ್ಲವೆ ! ಏರಿಳಿತಗಳೊಂದು ಇಲ್ಲದೆ, ಸ್ಥಿರಶಾಂತಿ ಪರಿಪೂರ್ಣನಾದ ಈ ಶಿವಯೋಗಿಗೆ, ಏರಿಳಿತದ ಕಾಂತಿಯುಳ್ಳ ಚಂದ್ರನು ಹೇಗೆ ಸಾಮ್ಯವಾಗುವನು ?

ಇನ್ನೊಂದು ಗುರುಲೀಲೆಯನು ಬಿತ್ತರಿಸುವೆ: ಶಿವಧ್ಯಾನವಲ್ಲಿದ್ದ ಸಮಯದೊಳು ಸಹಸಾ ಭರದಿಂದೆದ್ದ ಈ ಗುರುದೇವ, ಹೊರಗೆ ಬಂದು ಮಠದಂಗಣದಲ್ಲಿ ಹುಳುಕೊರೆದು ಬಿದ್ದಿದ್ದ ಒಂದು ಎಕ್ಕದಕೋಲ ತೆಗೆದುಕೊಂಡು, ಅದನ್ನು ಅಲ್ಲಿಯೇ ನೆಟ್ಟು ಮಡಿಗಟ್ಟ ನೀರೆರೆದು ಆಶೈಸಿದನು. ಅದು ಅಲ್ಪಾವಧಿಯಲ್ಲಿಯೇ ಕುಡಿವೊಡೆದು ಪಲ್ಲವಿಸಿ ಎಲೆಯಾಗಿ ನಳನಳಿಸಿ ಬೆಳೆದು ಬಲಿದು ಹೂವಾಗಿ ಕಂಗೊಳಿಸಿತು. (ಇದರ ಬಳಿಯಲ್ಲಿಯೇ ಕೀರ್ತಿವೆತ್ತ ಈ ಸದ್ಗುರುವಿನ ವಿದೇಹ ಸಮಾಧಿ ಈಗಲೂ ವಿರಾಜಿಸುತ್ತಿದೆ.) ಒಂದು ದಿನ ಬಂದೆರಗಿದ ಭಕ್ತರನ್ನುದ್ದೇಶಿಸಿ ಭವಿಷ್ಯವ ಬೋಧಿಸಿದನು: ಮಠವಿದು— ಇನ್ನುಮುಂದೆ ಗುರುಲೀಲೆಗೆ ರಂಗಸ್ಥಳವಾಗುವುದು. ಅಲ್ಲದೆ ಸುಪ್ರಸಿದ್ಧ ಶಿವಾದ್ವೈತಶಾಸ್ತ್ರಾರ್ಥ, ರಸಭರಿತ ಪುರಾಣ ಪ್ರವಚನ, ವಾರ್ಷಿಕ ರಥೋತ್ಸವ ಇವುಗಳಿಗೆ ಆಸ್ಪದವಾಗಿ, ಬ್ರಹ್ಮಭೂತಾದಿ ರೋಗಪರಿಹಾರವೇ ಮೊದಲಾದ ಸಕಲೇಷ್ಟ ಸಿದ್ಧಿಯ ಜನ್ಮಭೂಮಿಯಾಗಿ ಮೆರೆಯುವುದು.

'ಗುರುಕರುಣೆಯಿಂದ ಕೊರಡು ಕೊನರುವುದು' ಎಂಬ ವೇದವಾಣಿ ನಿಜವೆಂಬುದು, ನಮಗೀಗ ಪ್ರತ್ಯಕ್ಷವಾಯಿತೆಂದು ಸಮಸ್ತಭಕ್ತರು ಜಯಕಾರ ಮಾಡಿದರು.

—: ೫ ನೇ ಸಂಧಿಗೆ ಸಹಾಯ ಮಾಡಿದವರು :—

( ಶ್ರೀಮತಿ ಗುರವ್ವ ಬಸಯ್ಯ ಮಠಪತಿ )

— ೬ —

ಶಿವಸುಖದ ಸುಗ್ಗಿಯಲ್ಲಿ ಮಗ್ನನಾಗಿದ್ದ ಶಿವರುದ್ರಾಚಾರ್ಯನ ಅಡಿಗಳಿಗೆ ಭಕ್ತರೈತಂದು ಪೊಡಮಟ್ಟು ಪ್ರಾರ್ಥಿಸಿದರು– "ಪೂಜ್ಯ ಗುರುದೇವಾ ! ಭೀಕರ ದೋಷಾಕರ ಭವಬಾಧೆಗಾಸತ್ತು, ಬೇಸತ್ತು, ಪಾರಾಗಲು ನಿಮ್ಮಡಿಗಳಿಗೆ ಶರಣುಹೊಕ್ಕೆವು ನಾವು. ಸ್ಥೂಲಾದಿ ತನುತ್ರಯದಲ್ಲಿ,ಅನಾದಿಯಿಂದ ನೆಲೆಸಿರುವ ಆಣವಾದಿ ಮಲತ್ರಯವನ್ನು ಶಿವದೀಕ್ಷೆಯಿಂದ ಪರಿಹರಿಸಿ ನಮ್ಮನು ಮಂತ್ರಶರೀರಗಳನ್ನಾಗಿಸಿ, ಮಂತ್ರಾರ್ಥ ಬೋಧಿಸಿ ಉದ್ಧರಿಸು ಸ್ವಾಮಿಗುರು"– ಅಯ್ಯಾ ಮುಮುಕ್ಷುಗಳೇ ! ಈ ಸಂಸಾರಾಗ್ನಿಯ ಸಂತಾಪದಿಂದ ಮುಕ್ತನಾಗುವ ಯುಕ್ತಿ, ಬಹುಜನ್ಮಕೃತ ಸುಕೃತವಿಲ್ಲದವರಿಗೆ ಸಾಧ್ಯವಿಲ್ಲ. ಸರ್ವಸಾಮಾನ್ಯವಾಗಿ ಹೇಳುವುದಾದರೆ, ಇಂಥ ಸುಕೃತಿಗಳು ಅಪರೂಪ. ಅದರಿಂದ ನೀವೇ ಪುಣ್ಯಶಾಲಿಗಳು ! ಇಂಥ ಭಕ್ತರ ಉದ್ಧಾರಕ್ಕಾಗಿಯೇ ಗುರುದೇವ ಭುವಿಗವತರಿಸಿದನು. ನಿಶ್ಚಯವಿದು. ಶುದ್ಧಸಂಪ್ರದಾಯವಿಡಿದುಬಂದ ಸನ್ಮಾನ್ಯದಾದ್ಯ ಗುರು ಪೇಳ್ದ ಧರ್ಮವೇ ಧರ್ಮ! ಇದನುಳಿದ ದುಷ್ಟದುರ್ಬೋಧಕರ ಧರ್ಮಬೋಧೆ, ಇಷ್ಟವಾದರೇನು ಅವರೆಲ್ಲ ಗುರುವಾಗುವರೇ ? ಇಲ್ಲ. ಸತಿಗೆ ಸ್ವಧರ್ಮರಹಸ್ಯವನ್ನು ಆತ್ಮಪತಿಯ ಹಾಗೆ, ಇತರರು ಅತಿಹಿತವಾಗಿ ಹೇಳಿದರೇನು ಅವರೆಲ್ಲ ಪತಿಗಳಾಗುವರೇ ? ಇಲ್ಲ. ಆದುದರಿಂದ ನಡೆವಳಿಗಳಿಂದ ದೂರಾಗಿ ಕೇವಲ ನುಡಿಜಾಣರಾದ ಗಿಳಿರಾಮರ ಕುಚೋದ್ಯದುಪದೇಶಕ್ಕೆ ಮರುಳಾಗಬಾರದು: ಮನವೆಳಸಬಾರದು. ಶುದ್ಧಸಂಪ್ರದಾಯಾಗತನಾದ ಸುಪ್ರಸಿದ್ಧ ಗುರುವನ್ನೇ ಒಡೆಯನೆಂದು ನಂಬುವುದು ನೀವೆಲ್ಲ. ಶಿವಾಗಮಸಮ್ಮತವಾದ ದೀಕ್ಷೆಯ ನಿಜಸಿದ್ಧಾಂತ ಪದ್ಧತಿಯ ಹೇಳುವೆನು ಕೇಳಿ:

ತನು ಮನ ಭಾವಗಳೇ ತನುತ್ರಯ (ಮೂರು ಶರೀರ) ವೆನಿಸಿಕೊಳ್ಳುವುವು. ಈ ಮೂರು ಶರೀರಗಳಲ್ಲಿ ಮುಸುಕಿಕೊಂಡಿರುವ ಅಹಂಭಾವದ ಅಭಿಮಾನವನ್ನೇ, ಮಲವೆಂದು ಕರೆದರು, ಶೈವಶಾಸ್ತ್ರಜ್ಞರು. ಮಲವಿದು- ಆಣವಮಲ, ಮಾಯಾಮಲ, ಕಾರ್ಮಿಕ ಮಲ– ಎಂದು ಮೂರು ತೆರನಾಗಿರುವುದರಿಂದ, ಮಲತ್ರಯವೆಂದು ಹೆಸರಾಗಿದೆ. ಆ ಮೂರು ಶರೀರಗಳಲ್ಲಿಯೂ ಈ ಮೂರು ಮಲಗಳು ಮುಸುಕಿಕೊಂಡು, ಆತ್ಮದ ನಿಜಶಕ್ತಿಯನ್ನು ತಗ್ಗಿಸಿರುವುವು. ಹೇಗೆಂದರೆ : ಭಾವವೆಂಬ ಕಾರಣಶರೀರದಲ್ಲಿ ಪರಶಿವನ ಪರಿಪೂರ್ಣರಿವಿಗೆ ಪರಮ ಸಾಧನವಾದ ಇಚ್ಛಾಶಕ್ತಿ ನೆಲಸಿರುವುದು. ಆಣವ ಮಲದ ವಾಸನಾ ಬಲದಿಂದ ಈ ಇಚ್ಛಾಶಕ್ತಿ ಸಂಕೋಚಗೊಳ್ಳಲು ಅಜ್ಞಾನ (ಅವಿದ್ಯಾ) ಮಯವಾದ ಜಡಭಾವವಾಗುವುದು–ಜೀವನಿಗೆ. ಈ ಅವಿದ್ಯಾ (ಮಾಯಾ) ಮೋಹ ವಶದಿಂದ ಜೀವನು ದೇಹವೇ ನಾನೆಂಬ ಅನೀಶ್ವರ ಬುದ್ಧಿಯುಳ್ಳವನಾಗಿ ತೋರುವ ಶರೀರಾದಿ ಅಸತ್ಯ ವಸ್ತುಗಳಲ್ಲಿ ಸತ್ಯತೆಯನ್ನು ಕಲ್ಪಿಸಿಕೊಳ್ಳುವನು.

ಇನ್ನು ಎರಡನೇಯದಾದ ಮನವೆಂಬ ಸೂಕ್ಷ್ಮ ಶರೀರದಲ್ಲಿ ನೆಲಸಿರುವ ಮಾಯಾಮಲವು, ಶಿವ ಸರ್ವಜ್ಞತೆಗೆ ಕಾರಣವಾಗಿ ಮನದಲ್ಲಿ ಬೆಳಗುತ್ತಿರುವ, ಚಿಚ್ಛ,

ಕ್ತಿಯ ಅಪಾರ ಜ್ಞಾನವನ್ನು ಅಲ್ಪಗೊಳಿಸುವುದು, ಜೀವನಾಗ ತನ್ನ ಅಖಂಡ ಜ್ಞಾನವನ್ನು ಕಳೆಸುಕೊಂಡು, ಕಿಂಚಿಜ್ಞನಾಗುವನು. ಮಾಯಾಮಲವಿದು ಆರು ತತ್ವ ಕೂಡಿಕೊಂಡಿರುವುದು.

ಮೂರನೆಯದಾದ ತನುವೆಂಬ ಸ್ಥೂಲ ಶರೀರದಲ್ಲಿ ಕಲೆತಿರುವ ಕಾರ್ಮಿಕ ಮಲವು, ಶಿವನ ಸ್ವ ಕರ್ತೃತ್ವಕ್ಕೆ ಕಾರಣವಾದ ಕ್ರಿಯಾಶಕ್ತಿಯನ್ನು ಕುಂಠಿತಗೊಳಿಸುವುದು. ಇದರಿಂದ ಜೀವನು ಕಿಂಚಿತ ಭೋಕ್ತಾರನಾಗಿ ಕರ್ಮವನುಣ್ಣುತ್ತಿರುವನು, ಈ ಕಾರ್ಮಿಕ ಮಲವು ಇಪ್ಪತ್ತೈದು ತತ್ತ್ವಮಯವಾಗಿರುವದು.

ಇಂತು ಮುತ್ತಿದ ಮೂರು ಮಲಗಳಿಂದ, ಜೀವನು ಪಶುಭಾವವುಳ್ಳವನಾಗಿ, ಹಸಿರಿಗೆಳೆಸುವ ಪಶುವಿನಂತೆ, ವಿಷಯಾಭಿಲಾಷೆಯಿಂದ ವಿಷಯ ಭವಸಾಗರದಲ್ಲಿ ಬಿದ್ದು ಸಾಲಿಟ್ಟ ಸಂತಾಪದೊಡನೆ ನಾನಾ ಜನ್ಮಗಳಲ್ಲಿ ಬಂದು ಬೆಂದು, ಬಳಲುತ್ತಿರುವನು; ತೊಳಲುತ್ತಿರುವನು.

ಈ ಮಲತ್ರಯ ನಾಶಕ್ಕೆ ಇರುವ ಒಂದೇ ಒಂದಾದ ಉಪಾಯವೆಂದರೆ; ಅದೇ ದೀಕ್ಷೆ! ಶಿವಮತಸ್ಥರಿಗೆ ಹೇಳಲ್ಪಟ್ಟ ಪರಮ ಪಾವನನಾದ ಈ ದೀಕ್ಷಾ ಸಂಸ್ಕಾರದಿಂದ, ಮಲಪಾಶ ಹರಿದು, ಶಿವಜ್ಞಾನ ಉದಯವಾಗುವುದು. ದೀಕ್ಷೆಯಿದು- ಕ್ರಿಯಾ ದೀಕ್ಷೆ ಮಂತ್ರದೀಕ್ಷೆ ವೇಧಾದೀಕ್ಷೆ ಎಂದು ಮೂರು ಬಗೆಯಾಗಿದೆ. ಎಂತೆಂದರೆ: ಸ್ಥೂಲ ಶರೀರಕ್ಕೆ ಇಷ್ಟಲಿಂಗವ ಸಂಬಂಧಿಸುವುದೇ ಕ್ರಿಯಾದೀಕ್ಷೆ ಸೂಕ್ಷ್ಮತನುವಾದ ಮನಸ್ಸಿಗೆ ಮಂತ್ರಸಂಬಂಧಿಸುವುದು ಮಂತ್ರದೀಕ್ಷೆ. ಸುಸೂಕ್ಷ್ಮ (ಕಾರಣ) ಶರೀರವಾದ ಭಾವಕ್ಕೆ, ಶಿವಕಲೆಯನ್ನು ಯೋಜಿಸುವುದೇ ವೇಧಾದೀಕ್ಷೆ.

ಒಟ್ಟಿನೊಳಗೆ, ಸಂಸಾರಹೇಯ ಬುದ್ಧಿಯುಳ್ಳ ಮುಮುಕ್ಷುವಿಗೆ ಪರಶಿವಾನುಗ್ರಹ ರೂಪವಾದ 'ಶಕ್ತಿಪಾತ' ಸಂಭವಿಸುವುದು. ಈ ಶಕ್ತಿಪಾತಶೂನ್ಯರಿಗೆ ದೀಕ್ಷಿತರಾಗುವ ಅಧಿಕಾರ ಇಲ್ಲ. ದೀಕ್ಷೆ ಇಲ್ಲದವರಿಗೆ ಮಲತ್ರಯ ನಾಶವಾಗುವುದಿಲ್ಲ. ಮಲತ್ರಯ ಮುಸುಕಿರುವವರೆಗೂ ಜ್ಞಾನರವಿ ಮೂಡುವುದಿಲ್ಲ. ಜ್ಞಾನೋದಯ ಇಲ್ಲದವರಿಗೆ ಮುಕ್ತಿಯ ಮಾತೆಂಬುದೂ ಇಲ್ಲ.

ಅಷ್ಟಾವರಣ ವಿವೇಕ, ಷಟ್‌ಸ್ಥಲಾನುಭವ, ಪಂಚಾಚಾರ ಪ್ರಭಾವ, ಪಂಚಾಕ್ಷರೀ ಮಂತ್ರೋಪದೇಶ, ಇಷ್ಟಲಿಂಗವಿಜ್ಞಾನ, ಮಂತ್ರಶರೀರ ವಿಧಾನ– ಇವುಗಳೆಲ್ಲಾ, ಶಿವದೀಕ್ಷಾ ವಿಹೀನರಿಗೇನು ಲಭಿಸುವುವೇ ? ಶಿಷ್ಯನೊಳಗೆ ಸುಪ್ತಾವಸ್ಥೆಯಲ್ಲಿದ್ದ ಪರಮ ಜ್ಞಾನ ಲಿಂಗವನ್ನು, ಗುರುವು ಇಷ್ಟಾದಿಲಿಂಗರೂಪದಿಂದ ಪ್ರತ್ಯಭಿಜ್ಞಾನ ಪಡಿಸಿದ ಬಳಿಕ, ಶಿವೋಽಹಂ ಭಾವದಿಂದ ಯಜಿಸಿ ಭಜಿಸಿ, ಶಿವಜೀವೈಕ್ಯವನ್ನು ಬೋಧಿಸುವ ವಿಧಿಯೇ ದೀಕ್ಷೆ ಎನಿಸಿಕೊಳ್ಳುವುದು. ಈ ದೀಕ್ಷಾವ್ರತವನ್ನು ವೀರಶೈವನು ಎಷ್ಟೂ ಮೀರದೆ

ಯಾವಜ್ಜೀವ ಆಚರಿಸುವುದೇ ವಿಹಿತವಾದುದು. ಎಂಬುದಾಗಿ ಶಿಷ್ಯರಿಗೆ ಉಪದೇಶಿಸಿದ ಶಿವರುದ್ರಾಚಾರ್ಯನು, ಐದು ಗುರು ಕಲಶಗಳ ಸಾಕ್ಷಿಯಾಗಿ, ಅವರಿಗೆಲ್ಲ ದೀಕ್ಷೆಯಿತ್ತು ಶಿವಸ್ವರೂಪಿಗಳನ್ನಾಗಿಸಿದನು. ದೀಕ್ಷಿತರಾದ ಶಿಷ್ಯರು ಆಗ: "ಶ್ರೀಗುರುದೇವ ! ನಿಮ್ಮ ಕಾರುಣ್ಯದಿಂದೆಮಗೆ ಜ್ಞಾನಾಂಜನ ಪ್ರಾಪ್ತವಾಯಿತು; ನಮ್ಮ ಮತ್ತಿದ ಅಜ್ಞಾನಾಂಧಕಾರ ಅಳಿಯಿತು; ಅಗಣಿತ ಪೂರ್ವಜನ್ಮಗಳಲ್ಲಿ ಮಾಂಸಶರೀರಿಗಳಾಗಿಯೇ ಇದುವರೆಗೆ ತೊಳಲಿ ಬಳಲಿ ಬಂದ ನಾವು, ಈಗದಾವ ಪುಣ್ಯಾತಿಶಯದಿಂದಲೋ, ನಿಮ್ಮಯ ಕಾರುಣ್ಯ ಪಡೆದು ಮಂತ್ರಪಿಂಡವಾದೆವು. ತಮ್ಮ ಪಾದಪದ್ಮಗಳಿಗೆಮ್ಮ ಪ್ರಣಾಮಗಳು"

೭ನೇಯ ಸಂಧಿಗೆ ಸಹಾಯ ಮಾಡಿದವರು

( ಶ್ರೀಮತಿ ಶಿವವ್ವಾ ದ್ಯಾಮಪ್ಪ ಗುಣರಡ್ಡಿ (ಗೋಜನೂರ )

— ೭ —

ಬೆಸಗೊಂಡ ಭಕ್ತರಿಗೆ ಅಷ್ಟಾವರಣದ ಸಾಮರ್ಥ್ಯವನ್ನು ಬೋಧಿಸಿದನು ಗುರುವು. ಭೂವಾದ್ಯಾದಿ ಎಂಟು ಶರೀರಗಳಿಂದ, ಶಿವ ಸಲಹುವನು ಜಗವ. ಭಕ್ತನು—ಗುರು ಲಿಂಗ ಜಂಗಮ ವಿಭೂತಿ ರುದ್ರಾಕ್ಷಿ ಮಂತ್ರ ಪಾದೋದಕ ಪ್ರಸಾದ— ಎಂಬೀ ಎಂಟು ಕವಚ, (ಅಷ್ಟಾವರಣ)ಗಳನ್ನು ಧರಿಸಿಕೊಂಡು, ಕವಿದ ಮೋಹವೃಕ್ಷವನ್ನು ಕತ್ತರಿಸುವನು. ಅಷ್ಟಾವರಣವಿದು ಶಿವಾದೇಶದಂತೆ ಲೋಕಹಿತಾರ್ಥವಾಗಿಯೇ ವ್ಯವಹರಿಸಲ್ಪಡುವುದು. ಗುರು ಇಲ್ಲದೆ ಹೋದರೆ ಜಂಗಮನೂ ಇಲ್ಲ. ಜಂಗಮ ಇಲ್ಲದಿರಲು ಪರತತ್ವ ಅಸಂಭವ ಗುರು ಜಂಗಮರ ಪ್ರಸಾದ ಪ್ರಾಪ್ತವಾಗದಿದ್ದರೆ, ಇಂದ್ರಿಯಗಳ ಉಪಟಳ ತಗ್ಗುವುದಿಲ್ಲ. ಅಷ್ಟಾವರಣಗಳೊಳಗೆ ಪೂಜ್ಯಸ್ಥಾನದಲ್ಲಿರುವವರು- ಗುರು ಲಿಂಗ ಜಂಗಮರು ! ವಿಭೂತಿ ರುದ್ರಾಕ್ಷಿ ಮಂತ್ರ— ಇವು ಮೂರು ಪೂಜೆಗೆ ಸಾಧನಗಳು. ಪೂಜಿಸಿದುದಕ್ಕೆ ಆ ಪೂಜ್ಯರಿಂದ ಪಡೆವ ಫಲ— ಪಾದೋದಕ ಮತ್ತು ಪ್ರಸಾದ ! ಈ ರೀತಿ ವೀರಶೈವಾಚಾರ್ಯರು ಉಪದೇಶಿಸಿದ್ದಾರೆ. ತ್ರಿವಿಧವಾದ ಗುರು ಲಿಂಗ ಜಂಗಮರೊಳಗೆ ನೋಡಿದರೆ, ವಾಸ್ತವಿಕವಾಗಿ ಭೇದ ಇಲ್ಲ. ಏಕೆಂದರೆ ಜಂಗಮ ನೊಪ್ಪಿ ಅಪ್ಪಿ ಅರ್ಚಿಸುವ ಲಿಂಗಮೂರ್ತಿ, 'ಗುರುದೈವಾತ್ ಪರಂನಾಸ್ತಿ' ಎಂದಿರುವ ಗುರುವರ್ಯನಿಂದಲೇ. ಆ ಜಂಗಮನಿಗೆ ಕರುಣಿಸಲ್ಪಟ್ಟಿರುವುದು. ಇದನರಿತೇ ಗುರು ಜಂಗಮರೊಳಗೆ ಪರಸ್ಪರ ಭೇದವಾದ ಸಲ್ಲದೆಂದು ಸಾರಿದವು— ಆಗಮಗಳು, "ಯೋ ಗುರುಃ ಸ ಶಿವಃ ಪ್ರೋಕ್ತೋ, ಯಃ ಶಿವಃ ಸ ಗುರುಃ ಸ್ಮೃತಃ"— ಎಂದರೆ ಯಾವನು ಗುರುವೋ ಅವನೇ— ಶಿವ ! ಶಿವನು ಯಾವನೋ ಅವನೇ ಗುರು !! ಎಂದು ಆಗಮವು ಕೈಯೆತ್ತಿ ಸಾರುವುದು. ಅಂತೆಯೇ ಹರ ಮುನಿದರೆ, ಗುರು ಕಾಯ್ವನು. ಗುರು ಮುನಿದರೆ, ಹರ ಕಾಯನು. ಎಂಬ ನಾಣ್ಣುಡಿ ಇರುವದರಿಂದ, ಗುರುವಿನ ಅಡಿ ವಿಡಿದವರಿಗೆ ಭವಭಾದೆ ಇಲ್ಲ. ಕಾರಣ ಗುರುವಿಗೆ ಸರಿಸಮಾನರುಂಟೇ? ನೀರು ಗಟ್ಟಿಗೊಂಡು ಮುತ್ತಾದ ಬಳಿಕ, ಆ ಮುತ್ತು ಮರಳಿ ಹೇಗೆ ನೀರಾಗಲಾರದೋ,

ಹಾಗೆ ಗುರು ಪುತ್ರನಾದ ಭಕ್ತನು, ಮರಳಿ ನರನಾಗುವದಿಲ್ಲ. ದುರ್ಭವವೆಂಬ ಬಳ್ಳಿಯನ್ನು ಕತ್ತರಿಸುವದಕ್ಕೂ, ಕಾಮಾದಿ ವೈರಿಗಳನ್ನು ಒತ್ತರಿಸಲಿಕ್ಕೂ, ಶಿವಸ್ವಾಯುಜ್ಯವನ್ನು ಸ್ವಾಯತ್ತೀಕರಿಸಲಿಕ್ಕೂ, ಗುರುಭಕ್ತಿಯೇ ಮೂಲಕಾರಣವಲ್ಲವೆ? ಮನೆಯೊಳಿಟ್ಟಿರುವ ಧನವ ಮಗನಿಗೆ ಹೇಗೆ ತಂದೆ ತೋರಿಸುವನೋ, ಹಾಗೆ ಶಿಷ್ಯನಿಗೆ ತನ್ನೊಳಗಡಗಿರುವ ಸಚ್ಚಿದಾನಂದ ಸ್ವರೂಪದ.ಪರವಸ್ತುವನ್ನು ಗುರು ತೋರಿಸಿಕೊಡುತ್ತಾನೆ. ಈ ಮಹಾಕಾರ್ಯ ಮತ್ತೂಳಿದವರಿಂದ ಸಾಧ್ಯನಿಲ್ಲ. ಮಾತು ಮನಂಗಳಿಂದತ್ತತ್ತ ಮೀರಿ ಪ್ರಪಂಚದತ್ತತ್ತ ಹತ್ತಂಗುಲ ಉನ್ನತಿ ಪಡೆದು ಇಂದ್ರಿಯಗಳಿಗೆಲ್ಲ ಅಗೋಚರವಾದ ಆ ಜ್ಯೋತಿರ್ಲಿಂಗವನ್ನು, ಕರತಳದಲ್ಲಿ ಕಾಣಿಸಿದ ಗುರುವು. ಪ್ರಪಂಚದಲ್ಲಿ ಅಧಿಕಾಧಿಕನಲ್ಲವೆ! ಘೋರಸಂಸಾರ ಸಾಗರದೊಳು ಪಾತುಗಾಣದೆ, ತೊಳಲಿ ಬಳಲುತ್ತಿರುವ ಪಾಪಾತ್ಮರನ್ನು ಪಾರುಗೊಳಿಸಲಿಕ್ಕೆ, ಹರಿಗೋಲಿನಂತೆ ಗುರುವೇ ಗತಿಯಾಗಿರುವನು. ಕಾಯಕಾಂತಾರದಲ್ಲಿ ಉಜ್ವಲಿಸುವ ಮಮಕಾರ ವೆಂಬ ಕಿಚ್ಚು, ಗುರುಕಾರುಣ್ಯಾಮೃತದ ಸೋಸಿ ಸುರಿಯದೆ, ಅದು ಹೇಗೆತಾನೆ ನಂದುವುದು? ಪಂಚಾಗ್ನಿ ಮಧ್ಯದ ಘೋರ ತಪ, ಪಂಚಾಕ್ಷರದ ಮಂತ್ರಜಪ, ವೇದಾಂತ ಸಿದ್ಧಾಂತಾದಿ ಸಕಲ ಕಲಾಕೌಶಲ್ಯ ಇವುಗಳಲ್ಲಿ ಪರಾಯಣರಾದವರು ಇರಬಹುದು. ಆದರೇನು ಗುರುಕಾರುಣ್ಯ ಪಡೆಯದಿದ್ದರೆ, ಇವರಿಗೇನು ಮುಕ್ತಿಯುಂಟೆ? ಇಂತು ಅಷ್ಟಾವರಣದಲ್ಲಿ ಅಂತರ್ಗತವಾಗಿ ಮೆರೆವ ಗುರು ಮಾಹಾತ್ಮ್ಯವೊಂದ ನಿಮಗೆ ಹೇಳುವೆನೀಗ:

## ರಾಘವಾಂಕನ ಕಥೆ

ಗುರುವಂಶಾಬ್ಧಿಗೆ ಪೂರ್ಣಚಂದ್ರನಾಗಿ, ಸದ್ಭಕ್ತಿ ಜ್ಞಾನವೈರಾಗ್ಯಲಕ್ಷ್ಮೀಂದ್ರನಾಗಿ, ಪಂಪಾವಿರೂಪಾಕ್ಷನ ಸಾಕ್ಷಾತ್ ಸುಪುತ್ರನೆಂದು ಹೆಸರಾದ, ಹರೀಶ್ವರ ಶಿವಾಚಾರ್ಯನು ಹಂಪೆಯಲ್ಲಿ ಇದ್ದ. ಈತನು ಪಾಪವಿಮುಕ್ತ! ಶಿವೈಕ ಸೇವಾನುರಕ್ತ! ಶಿವಾರ್ಚನಾಸಕ್ತ! ಲಿಂಗಭೋಗೋಪ ಭೋಗಯುಕ್ತ! ಶಾಪಾನುಗ್ರಹ ಶಕ್ತ! ಇಷ್ಟೇಅಲ್ಲ "ಕವಿತಾಕಾಮಿನಿಯ ಜೀವಿತೇಶ" ಎಂದು ಪ್ರಖ್ಯಾತಿಪಡೆದ ಸತ್ಕವೀಶ್ವರನೂ ಆಗಿದ್ದ. ಇವನು ಭವಿಜನರನ್ನು ಕೀರ್ತಿಸಲಿಲ್ಲ. ಯಾವನು ಷಟ್ಪದಿಸಂಪ್ರದಾಯ ಸಂಸ್ಥಾಪಕನಾಗಿ, ಗರ್ವಿತಕವಿಗಜಕಂಠೀರವನೆಂಬ ಬಿರುದಿನಿಂದ ರಾಜ್ಯಪೂಜ್ಯತೆ ಪಡೆದು, ದಿಗ್ಭರಿತ ಯಶದಿಂದ ರಾಜಿಸಿದನೋ, ಆ ಕವಿ ರಾಘವಾಂಕ ಪಂಡಿತನಿಗೆ; ಈ ಹರೀಶ್ವರ ದೇವನೇ ಗುರುವು! ರಾಘವಾಂಕ ಪಂಡಿತನೊಮ್ಮೆ ಹರಿಶ್ಚಂದ್ರಕಾವ್ಯ ರಚಿಸಿ, ಅವಗಾಹನೆಗಾಗಿ ಅದನ್ನು ಗುರುಹರೀಶ್ವರನ ಮುಂದಿರಿಸಿದನು ವಿನಯದೊಡನೆ. ಇದೇನೆಂದು ಕೇಳಿದ ಗುರುವಿಗೆ, ಹರಿಶ್ಚಂದ್ರಕಾವ್ಯವಿದು ಎನ್ನ ಕೃತಿಯೆಂದು ಬಿನ್ನವಿಸಿದ. ಹರೀಶ್ವರದೇವನು ಮರುಮಾತಾಡಲಿಲ್ಲ: ಅದನ್ನು ಕಣ್ಣೆತ್ತಿಸಹ ನೋಡಲಿಲ್ಲ ಆಗ-

ರಾಘವಾಂಕ: "ಎನ್ನ ಕಾವ್ಯವಿದು; ನಿಮ್ಮಿಂದ ಜಗದಲ್ಲಿ ಮಿಗೆಮನ್ನಣೆಯ ಪಡೆವುದೆಂದು ಮುಂದಿರಿಸಿದರೆ, ಇದನೋಡದೆ ನುಡಿಯದೆ ಮೌನಗೊಂಡಿರುವ ಭಾವವೇನು ಗುರುದೇವಾ?"

ಹರೀಶ್ವರ: "ಶಿವಪರವಾದ ಕೃತಿಯಾದರೆ ಮಾತ್ರ ಸಮ್ಮತಿಸುವೆ ಭವಪಾಶವಶರಾದ ಭವಿಗಳ ಚರಿತೆಯನೆಂದಿಗೂ ನಾನು ಸಮ್ಮತಿಸಲಾರೆ. ನನ್ನ ಪ್ರತಿಜ್ಞೆ ಇಂತಿರುವಾಗ, ಇದ ನನಗೇಕೆ ಕಾಣಿಸಿದೆ? ನೀನಿದನು ಭವಿಜನರ ಬಳಿಗೊಯ್ದು ಕೇಳಿಸಿದರೆ ಅವರೊಲಿದು ನಿನ್ನ ಮನದೊಲವಮಿಗೆನಲಿಸಿ ನುತಿಸುವರು, ಸ್ತುತಿಸುವರು"

ರಾಘವಾಂಕ: "ವಿಪುಲ ಭೂಮಂಡಲವ ಕಪಟದಿಂದಾಳಿ, ಕೊನೆಗೆ ದುರ್ನರಕ ನಿಧಿಯೊಳು ಬಿದ್ದ ಭೂಭುಜರ ಚರಿತೆಯಲ್ಲವಿದು! ನಿಜ ಸತಿಸುತರನೇ ಅಲ್ಲದೆ ತನ್ನನೂ ಪಾರ್ವತೀಶ್ವರಗೊಲಿದಿತ್ತ, ವರಹರಿಶ್ಚಂದ್ರರಾಯನ ಚರಿತ್ರೆಯ ನಾನೊರೆದೆ! ಪರಾಂಬರಿಸುವುದು. ನೀವೆಂದ ಮಾತಿಗೀಗ ಹೇಳುವೆನು- ಹಾಗಾದರೆ, ನೀವೇಕೆ ಆ ಚೋಳಾದಿ ರಾಜರ ಕೃತಿಗಳ ಮಿಗೆ ಮೆಚ್ಚಿ, ಮೇಲಾಗುವಂತೆ ರಚಿಸಿದಿರಿ?"

ಹರೀಶ್ವರ: "ಶಿವನೊಲಿದ ಸಮಯದಲಿ ಕೈವಲ್ಯವ ಬೇಡಿದವರನೇ ಬಣ್ಣಿಸಿದೆ ನಾನು! ಹರಿಶ್ಚಂದ್ರನಾದರೋ ತನಗೆ ಶಿವನೊಲಿದಾಗ, ನಿಜಸತಿ ಸುತರ, ಮತ್ತು ರಾಜ್ಯಾದಿಸಂಪದವ ಮತ್ತೆ ಬೇಡಿದನು. ಅದರಿಂದೆ ಅವನು ಆ ಭಕ್ತಕುಲದಿಂದ ಅತ್ತತ್ತ ಬಹುದೂರ"

ರಾಘವಾಂಕ: "ನೀವೆಂದ ಆ ಚೋಳಾದಿ ಭಕ್ತರು, ಎಮ್ಮ ಹರಿಶ್ಚಂದ್ರರಾಯಗೆ ಕಿರಿಯರು!" ಹೀಗೆಂದೊಡನೆ ಕುಪಿತನಾದ ಹರೀಶ್ವರನು ಹಾವುಗೆಯಿಂದಲೇ ಹೊಡೆದು ಬಿಟ್ಟ. ಇದರಿಂದ ರಾಘವಾಂಕನ ಮುಂದಿನ ಹಲ್ಲುಗಳು ಚೆಲ್ಲಾಡಿಹೋದುವು. ಆ ಒಡನೆ ಅಲ್ಲಿಂದ ಹರೀಶ್ವರನು ಹೊರಟು ಶಿವಶರಣರನ್ನು ನಿಂದಿಸಿದ ಈ ಕಡುಪಾಪಿಮುಖವ ನಾ ನೋಡಲಾರೆ ಎನ್ನುತ್ತ ತುಂಗಭದ್ರಾ ನದಿಯನ್ನು ಹೊಕ್ಕು, ಅದರ ಮಧ್ಯೆ ಮಂಡಿಸಿ ಶಿವಸಂಬಂಧ ನಿಂದೆಯನಾಲಿಸಿದ ಈ ತನುವ, ಆ ಶಿವಗೆ ಭಕ್ತಿಗಾಗಿ ಒಪ್ಪಿಸುವೆನೆಂದು ಉಜ್ಜುಗಿಸಿದ. ಆಗ ಆಕಾಶದಲ್ಲಿ ಹೊ, ಹೊ ಸೈರಿಸು— ಎಂಬ ಶಬ್ದ ಹೊಮ್ಮಿತು. ಕೇಳಿ ಅಚ್ಚರಿಸಟ್ಟು, ಹರೀಶ್ವರ ನಿಶ್ಚೇಷ್ಟನಾದ. ಅಲ್ಲಿದ್ದ ಶರಣರೆಲ್ಲ ಶಿಷ್ಯರಾಘವಾಂಕನ ಮೇಲ್ಮೆಗಾಗಿ, ಗುರುಹರೀಶ್ವರನು ಆದಿಯಿಂದಲೂ ಅದೆಷ್ಟು ಹೆಣಗಿದ! ಗುರುಕಾರುಣ್ಯದ ದೀಕ್ಷೆಯಿತ್ತು, ಸಕಲವಿದ್ಯಾ ಶಿಕ್ಷೆಯಿತ್ತು, ರಾಜ್ಯಪೂಜ್ಯತೆ-ಪಡೆಯುವಷ್ಟು ಪ್ರಭಾವಶಾಲಿಯನ್ನಾಗಿ ಮಾಡಿದ ಉಪಕಾರವೇನು ಸಾಮಾನ್ಯದ್ದೆ? ಈ ಉಪಕಾರವೀಗ, ರಾಘವಾಂಕನಲ್ಲಿ ದಾಕ್ಷಿಣ್ಯ ಇಲ್ಲದಷ್ಟು ವಿಪರೀತಗೊಂಡಿತಲ್ಲಾ! ಆದರೆ! ವಿದ್ಯಾಮದ ಏನ ಮಾಡುವುದಿಲ್ಲ? ಎಂಟು ಮದಗಳು ಉಂಟು. ಅವುಗಳೊಳಗೆ ಒಂದು ಮದ ಸೇರಿಕೊಂಡರೆ ಸಾಕು; ಅಂಥವನು ಅನ್ಯರಾರನ್ನೂ ಲೆಕ್ಕಿಸುವುದಿಲ್ಲ. ರಾಘವಾಂಕನಾದರೋ ಸರ್ವಮದ ಸಂಪನ್ನ! ಇಂಥವನು, ಅಂಥ ಬಲ್ಲಿದನಾದ ವಿದ್ಯಾಗುರುವನ್ನು, ಹುಲ್ಲಿಗಿಂತ ಕಡೆಯಾಗಿ ಕಂಡುದೇನೂ ದೊಡ್ಡಮಾತಲ್ಲ. ಈ ಹೆಮ್ಮಿನಿಂದಲೇ ತನ್ನ ಹಲ್ಲುಗಳನ್ನು ಚೆಲ್ಲಾಡಿಸಿಕೊಂಡ- ಎಂದು ಮಾತಾಡುತ್ತ ಅಲ್ಲಿದ್ದ ಶರಣರೆಲ್ಲ ಎದ್ದು ಹೋದರು,

ಯಾರಿಗೂ ದಕ್ಕದ ರಾಘವಾಂಕನು, ಪಂಪಾವಿರುಪಾಕ್ಷನಿಂದಲೇ ಹಲ್ಲುಗಳ ಪಡೆ ವೆನೆಂಬ ಆತ್ಮವಿಶ್ವಾಸದಿಂದ ಬಂದು— ಎಲೆ ಕಾರುಣ್ಯಸಿಂಧುವೆ ! ದೀನ ಬಂಧುವೆ ! ನಾಗ ಭೂಷಣನೆ ! ಭಜಕ ಪೋಷಣನೆ ! ಪರಿಪಾಲಿಸೆಲೆ ಪಂಪಾವಿರೂಪಾಕ್ಷ ! ಇಂತು ವಿಧ ವಿಧದಿಂದ, ನಯಭಯದಿಂದ, ಕೊಂಡಾಡಿ ಬೇಡಿ ನೋಡಿದ. ಶಿವನೊಲಿಮೆ ಆಗಲೇ ಇಲ್ಲ. ಈ ಅನುತಾಪದಿಂದ ಬೆಂದುನೊಂದು, ಈ ಶರೀರ ಇನ್ನೇಕೆಂದು ಪ್ರಾಣತ್ಯಾಗಕ್ಕೆ ಉದ್ಯು ಕ್ತನಾಗುತ್ತಾನೆ. ಅದೇಕಾಲಕ್ಕೆ ಆಕಶವಾಣಿಯು- "ಎಲೆ ರಾಘವಾಂಕ ! ಹರ ಮುನಿ ದರೆ ಗುರುಕಾಯ್ವನು ! ಗುರು ಮುನಿದರೆ ಹರಕಾಯ್ವನೆ ? ಇದು ಸತ್ಯ ! ಪಂಡಿತಾಗ್ರಣಿ ಯಾದ ನಿನಗೆ ಇದೇನು ತಿಳಿಯದ ಮಾತಲ್ಲ. ನೀನೀಗಲೆ ಇಲ್ಲಿಂದ ಮರಳಿ ಹೊರಳಿ, ಆ ನಿನ್ನ ವರಗುರುವಿನ ಚರಣಗಳಿಗೆ ಮನವೊಲಿದು ಎರಗಿ, ನಿನ್ನಾವರವ ಬೇಡು ಎಂದಿತು" ರಾಘವಾಂಕನಾಗ ಅದರಂತೆ ತನ್ನ ಗುರುಹರೀಶ್ವರನ ಚರಣಗಳಿಗೆರಗಿ, ಬಿಗಿ ದಪ್ಪಿ ಬೇಡಿದನು ದೈನ್ಯದಿಂದ: ಬಿಡದಪ್ಪಿ ಕಾಡಿದನು ಸೌಜನ್ಯದಿಂದ: ಎಲೆ ಮಹಾ ಮಹಿಮನೆ ! ತರಳನೂ ಅರೆಮರುಳನೂ, ಪಾಪಿಯೂ ಪಾಮರನೂ, ವಿದ್ಯಾಗರ್ವ ಪರ್ವತ ವನ್ನೇರಿದ ನಿಂದಕನೂ ಆದೆನ್ನಯ್ಯ, ಅಪರಾಧಗಳ ಅವಧರಿಸದೆ, ಕರುಣೆಯಿಂದೆನ್ನ ಕಾಯಯ್ಯ ತಂದೆ ! ನಿನ್ನ ವರಕಾಗಿ ಬಯಸಿ ನಾ ಬಂದೆ ! ಬಳ್ಳಿಗೆ ಕಾಯ ಹೊರೆಯೇ ದೇವಾ ? ಧರೆಯೊಳಗೆ ಅಸಮಗುರುವಾದ ನಿನ್ನ ಬಿಟ್ಟರೆ, ಇನ್ನೆನ್ನ ಪೊರೆಯುವವ ರುಂಟೆ ? ಎಂದು ಅಳುತ್ತ ಅಡಿವಿಡಿದು ಅಂಗಲಾಚಿದನು. ಬಿಸಿಯಿಲ್ಲದೆ ಎಂತಾದರೂ ಬೆಣ್ಣೆ ಕರಗುವುದೇ ? ಆಗ ಹರೀಶ್ವರದೇವ ಹೇಳುತ್ತಾನೆ:

ಹರೀಶ್ವರ: "ಎಲೆ ರಾಘವಾಂಕ ! ಎಲ್ಲಿ ನಿನ್ನಾ ಉತ್ತರಿಸುವ ಉದ್ಧಟತನ, ಆ ದುರಹಂಕಾರದ ದರ್ಪ, ಆ ಕೆಂಪಡರಿದ ಕಣ್ಣು, ಆ ಬಿರುನುಡಿ, ಮೂಡಿದ ಆ ಕೋಪ, ಮಾಡಿದ ಆ ಛಲ, ಖಂಡಿತವಾದ ಆ ಅಖಂಡ ಪಾಂಡಿತ್ಯ, ಸತ್ಯ ಶರಣರ ಮೇಲೆ ಸ್ವಚ್ಛಂದವಾಗಿ ಉಚ್ಚರಿಸಿದ ನಿಂದೆಯ ಆ ಅಘಟು— ಇವುಗಳೀಗ ಅದೆಲ್ಲಿ ? ಮಾಡಿದ ಪಾಪಪರಿಹಾರಕ್ಕೆ, ಪ್ರಾಯಶ್ಚಿತ್ತವಿಧಿ ವೇದದಲ್ಲಿರುವುದು ನಿಜ. ಆದರೆ ಗುರುನಿಂದಕ- ನಿಗೆ ಮಾತ್ರ, ಪರಿಹಾರವೇ ಇಲ್ಲ. ಆದುದರಿಂದ ಪೋದಲು ನೀನಿಲ್ಲಿಂದ ಹೊರಡು "

ರಾಘವಾಂಕ: "ಮುಂದರಿಯದೆ ನಿಂದಿಸಿದುದಕ್ಕಾಗಿ ಉದುರಿದುವು ಹಲ್ಲುಗಳು ಇನ್ನುಮುಂದೆ ನಿಂದಿಸಿದೆನಾದರೆ, ಸಂದಣಿಸದಿರುದುವೇ ಎನ್ನ ಬಾಯಲ್ಲಿ ಬಾಲಹುಳು ಗಳು ! ಗುರು ತಂದೆ ! ಶಿಶುವಿನ ಮೇಲೆ ವಿಷವ ಕಾರಿದಿರಿ ! ಕರುಣಂಗೆಡದಿರಿ !!" ಎಂದು ಮತ್ತೆ ಮತ್ತೆ ನಮಿಸಿ ನಯದಿಂದ ಬೇಡಿದನು. ಆದರೂ ಗುರು ಒಲಿಯಲಿಲ್ಲ. ಹತಾಶನಾಗಿ ಈ ಒಡಲನಳಿವುದೇ ಒಳಿತೆಂದು ಅಡಿವಿಡಿದ ರಾಘವಾಂಕನನ್ನು ಮನ್ನಿಸಿ, ಮುದದಿಂದ ಹೇಳಿದನಾಗ ಹರೀಶ್ವರ: "ಎಲೆ ಮುದ್ದು ರಾಘವಾ ! ಪೂಜ್ಯ ಶಿವಭಕ್ತರ ನಿಂದೆಯಿಂದ ತ್ಯಾಜ್ಯವಾಗುವುದು ಶ್ರೇಯಸ್ಸು ! ಇದನರಿತು ಇನ್ನುಮುಂದಾದರೂ ಕನ ಸಿನಲಿ ಕೂಡ ಅವರನು ನಿಂದಿಸಬೇಡಯ್ಯ ! ಶಿವನಂತೆ ಶಿವಭಕ್ತರನೂ ಮನವಾರೆ ನೆನೆ

ನೆನೆದು ಹೊಗಳು ! ಈ ರೀತಿ ಬೋಧಿಸಿದ ಗುರುಹರೀಶ್ವರನ, ಕೃಪಾವಲೋಕನದಿಂದಲೇ ಶಿಷ್ಯ ರಾಘವಾಂಕನ ಹಲ್ಲುಗಳು, ಆಗಲೇ ಒಡಮೂಡಿ ಕಂಗೊಳಿಸಿದುವು.

ಸುಖ ಸಂತೋಷ ಸಮಯದಲ್ಲಿ ಬಂಧುಜನ ಕಂಡುಂಡು ಬಂದು ಹೋಗುವರು, ಆದರೆ ನಮಗಾದ ಬಂಧನವ ಬಿಡಿಸಲು ಅವರಿಗಳವೇ ? ಬಿಡದಿರುವ ಜನನ ಮರಣ ರೂಪದ ನಮ್ಮೀ ಭವಬಂಧನವ ನಿರ್ಮೂಲಗೊಳಿಸಿ, ನಿಜಾನಂದ ಕೈವಲ್ಯವನೀವ ಗುರುವೇ, ನಿಮಗೆ ನಿಜವಾದ ಆಪದ್ಬಂಧು ! ಇಂತುನೋಡಿದರೆ ಗುರುವಿಗಿಂತ ಹಿರಿದು ಬೇರೊಬ್ಬರುಂಟೇ ?

-: ೭ ನೇ ಸಂಧಿಗೆ ಸಹಾಯ ಮಾಡಿದವರು :-

( ಶ್ರೀಮತಿ ಶಿವಲಿಂಗವ್ವ ಬಾಲಪ್ಪ ಮೂಗನೂರ ಮತ್ತು
ಶ್ರೀ ಮುರಿಗೆಪ್ಪ ಸಂಗಪ್ಪ ಹನುಮಸಾಗರ )

— ೮ —

: ಲಿಂಗ ಮಾಹಾತ್ಮ್ಯ ನಿರೂಪಣ :

ಅನೇಕ ಜನ್ಮಗಳಲ್ಲಿ ಆಚರಿಸಿದ ಅಪಾರ ಪುಣ್ಯದಿಂದ ಪಾಪ ಲೋಪವಾಗಿ, ಶುದ್ಧಾಂತಃಕರಣನಾದ ಜೀವ (ಆತ್ಮ)ನು 'ಪಿಂಡ' ಎಂದು ಹೇಳಿಸಿಕೊಳ್ಳುವನು. ಈ ಪಿಂಡನಾಯಕನಾದ ಜೀವನೇ, ಜೀವಾತ್ಮ-ಪರಮಾತ್ಮರ ಸ್ವರೂಪವನ್ನು ಬಲ್ಲವನಾಗಿರುವುದರಿಂದ 'ಪಿಂಡಜ್ಞಾನಿ' ಎನಿಸಿಕೊಂಡು, ನಿತ್ಯಾನಿತ್ಯ ವಿವೇಕದಿಂದ ಸಂಸಾರಕ್ಕೆ ಹೇಸಿ, ಶಿವತತ್ತ್ವವನ್ನರಿಯಲು ಗುರುಸನ್ನಿಧಿಗೆ ಶರಣುಹೋಗುತ್ತಾನೆ. ಆಗ ಗುರುವು ತನ್ನ ವರಹಸ್ತವನ್ನು ಶಿಷ್ಯನ ಶಿರದೊಳಟ್ಟು, ಅಲ್ಲಿಯ ಸಹಸ್ರದಳ ಕಮಲದೊಳು ಬೆಳಗುವ ಚಿತ್ಕಳೆಯ ನೋಡಿ, ನಿಜಭಾವ ದೃಷ್ಟಿಯಿಂದ ಆ ಕಳೆಯ ಸೆಳೆದು, ಇಷ್ಟರೂಪವಾದ ಶಿವಲಿಂಗಕ್ಕೆ ಆ ಚಿತ್ಕಳೆ ಮೈಗೂಡಿಸಿದ ಬಳಿಕ, ವಿಧಿಪೂರ್ವಕವಾಗಿ ಶಿಷ್ಯನ ಅಂಗಕ್ಕೆ ಆ ಲಿಂಗವ ಧರಿಸುತ್ತಾನೆ. ಹೀಗೆ ಧರಿಸಲ್ಪಟ್ಟ ಲಿಂಗವೇ- ಇಷ್ಟಲಿಂಗ ! ಈ ಲಿಂಗದಲ್ಲಿರುವ- ಪೀಠವೇ ಬಿಂದು; ಮಸ್ತಕವೇ ನಾದ; ಗೋಳಕವೇ ಕಲೆ. ಹೀಗೆ ಆ ಲಿಂಗವನ್ನು ಬಿಂದುನಾದಕಳಾತ್ಮಕವಾಗಿ ಆರಾಧಿಸಬೇಕು. ಮತ್ತು ಪಂಚಾಕ್ಷರೀ ಮಂತ್ರದಲ್ಲಿಯ ' ನ ' ' ಮಃ ' – ಎಂಬ ವರ್ಣಗಳು, ಆ ಲಿಂಗಕ್ಕೆ ಪೀಠ ಅಥವಾ ಪಾದಗಳು; ' ಶಿ ' ಎಂಬುದು ಮಧ್ಯ- ಎಂದರೆ ಹೃದಯಸ್ಥಾನ; ' ವಾ ' ' ಯ ' ಎಂಬ ವರ್ಣಗಳು ಭುಜಗಳು; ' ಓಂ ' ಕಾರವು- ಮುಖ. ಇದು ಲಿಂಗದ ಸ್ವರೂಪ. ಹೊರಗೊಳಗೆಲ್ಲ ಚರಾಚರ ಪ್ರಪಂಚವನೊಳಗೊಂಡು ಬೆಳಗುವ ಆ ಲಿಂಗ, ಷಡಕ್ಷರ (ಮಂತ್ರ) ರಚಿತವಾದುದೆನ್ನುವಾಗ, ಅದ ವರ್ಣಿಸಲಳವೇ ? ಇಂಥ ಇಷ್ಟಲಿಂಗ ನಿಷ್ಠಾಬಲದಿಂದ ಅಷ್ಟಮೂರ್ತಿಯನೊಲಿಸಿದ, ಶ್ರೇಷ್ಠ ಶರಣೆಯ ಪುಣ್ಯ ಚರಿತೆಯೊಂದ ಹೇಳುವೆನೀಗ:

## : ಕಮಲಾಯಿಯ ಕಥೆ :

ಭೂಕೈಲಾಸ ಭಕ್ತಿಯ ನಿಜನಿವಾಸ ಶಿವಶರಣರ ಆವಾಸ– ಎಂದು ಹೆಸರಾದ ಕಲ್ಯಾಣ ಪಟ್ಟಣದಲ್ಲಿ, ಭುವನ ಸುಂದರಿಯಾದ ವೇಶ್ಯೆಯೊಬ್ಬಳು ಇದ್ದಳು. ಈಕೆಯ ಹೆಸರು– ಕಮಲಾಯಿ. ಜಾತಿಯಲ್ಲಿ ವೇಶ್ಯೆಯಾದರೂ, ಆಚಾರ ರೀತಿಯಲ್ಲಿ ಇವಳು ಶಿವನಿಷ್ಠಾ ಸಂಪನ್ನೆ. ವಿಟರೊಡಗೂಟದಲ್ಲಿರುವಾಗ ಇವಳೆಂದೂ ಮಂಚಕ್ಕೆ ಲಿಂಗವನೇತು ಹಾಕಿ ಆ ಲಿಂಗದ ಮೇಲೆ ಕೈಯೊಂದನಿಟ್ಟು, ರತಿಕ್ರೀಡೆ ಮಾಡುತ್ತಿದ್ದಳು. ಇವಳ ಶಿವಲಿಂಗ ನಿಷ್ಠೆಯನ್ನು ಭುವನಕ್ಕೆ ಬೆರೆಸಬೇಕೆಂದು ಬಯಸಿದನು- ಶಿವ. ಸರಿ, ಕಪಟ ನಾಟಕಕ್ಕೆ ತಕ್ಕ ಶಿವನ ವಿಟವೇಷವೂ ಮೆರೆಯಿತು. ಕಪಟ ನಾಟಕದ ವಿಟನಾದ ಶಿವನು, ವೇಶ್ಯಾ ಜನರ ಶಿರೋರತ್ನದಂತಿರುವ ಕಮಲಾಯಿಯ ಮಹಮನೆಯ ಮುಂದೆ ಜವದಿಂದ ಇಳಿದ. ಕಮಲಾಯಿಯ ಮನದನುವಿನಂತೆ, ಶಿವಸೇವೆಗೆ ಅನುಕೂಲವಾಗಿ ನಡೆವ ಸಾಕಷ್ಟು ಸಖೀಜನರು, ಅಲ್ಲಿ ಸದಾ ಸಿದ್ಧವಿದ್ದರು. ಅಪರೂಪವಾಗಿ ಆಗಮಿಸಿದ ಈ ವಿಟನನ್ನು, ಅತ್ಯಾದರದಿಂದ ಬರಮಾಡಿಕೊಂಡಳು ಒಳಗೆ. ಮಂಚದ ಮೇಲೆ ಮಂಡಿಸಿದಬಳಿಕ, ರತಿವಿಲಾಸಕ್ಕೆ ಉಚಿತವಾದ ಉಪಚಾರವೂ ನಡೆಯಿತು. ಮೇಲ್ವರಿದ ಮೋಹದಿಂದ, ಮದನಕದನಕ್ಕೆ ಮನಉಬ್ಬಿ ಮೈ ಅಪ್ಪಿಕೊಂಡು ಮುದ್ದಾಡಿದಳು– ಕಮಲಾಯಿ ! ಇವಳೊಡನೆ ರಮಿಸಿದಂತೆ ಶಿವ ನಟಿಸಿದನು. ಕಮಲಾಯಿ ಈಗ ಆರು– ಇಂದ್ರಿಯಗಳಿಗಾದ .ಸುಖವ, ಆರು ಲಿಂಗಗಳಿಗೆ ಸಲಿಸಿ ಸುಖಿಸಿದಳು. ಬಳಿಕ ಎಂದಿನಂತೆಯೇ ಅವಳು, ಮಂಚಕ್ಕೆ ಲಿಂಗವ ನೇತುಹಾಕಿ ನಿದ್ರಿಸಿದಳು. ಆಗ ಲಿಂಗದ ಮೇಲಿದ್ದ ಅವಳ ಕರವ, ಮೆಲ್ಲಗೆ ಸರಿಸಿದ ಶಿವನು, ಆ ಲಿಂಗವನ್ನೇ ಎತ್ತಿಕೊಂಡು ಹೋಗಿ ನೋಡುವಲ್ಲಿ; ಆ ಇಷ್ಟಲಿಂಗದೊಳಗೆ ಕಮಲಾಯಿಯ ಪ್ರಾಣ, ಅಗಲದಂತೆ ಇತ್ತು. ಇದಕಂಡ ಶಿವಗೆ ಮೆಚ್ಚಾಯಿತು ! ಈ ಸುದ್ದಿಯ ಸಾರಿ ಹೇಳುವಂತೆ ಕೋಳಿ ಕೂಗಿತ್ತಾಗ. ಕಮಲದ ಕಳವಳ ಸರಿವಂತೆ ಮುಸುಕಿದ್ದ ಮಬ್ಬು ಮಾಯವಾಯಿತು. ಈಕೆಯ ಲಿಂಗನಿಷ್ಠೆಯ ಸತ್ವ ಪರೀಕ್ಷೆಗಾಗಿ, ಈಗಲೀಗ ಬರಲಿರುವ ಬಸವ ಮಹಾನು ಭಾವನನ್ನು, ನಾನೂ ನೋಡುವೆನೆಂದು ಬಂದಂತೆ– ಉದಯವಾದನು ರವಿಯು ಪೂರ್ವ ದಿಕ್ಕಿನಲಿ ! ಆದರೂ ಕಮಲಾಯಿ ಏಳಲಿಲ್ಲ.

ಶಿವಸೇವೆಗೆ ಸಿದ್ಧಪಡಿಸಿದ ಸಖಿಯರು, ಇಂದೇಕೆ ಇಷ್ಟು ತಡ–ಎಂದು ತೆರೆಯ ಸರಿಸುತ ಬಂದು ನೋಡುವಲ್ಲಿ; ಶವ ಮಾತ್ರ ಕಾಣಿಸಿತು. ಹಾಸಿಗೆಯ ಮೇಲೆ. ಮೈಮುಟ್ಟಿ ನೋಡಿದರು. ತಣ್ಣಗಾಗಿತ್ತು. ಉಸಿರನಾಲೈದರು; ಉಷ್ಣವೇ ಇಲ್ಲ. ಕಂಡು ಹವ್ವನೆ ಹಾರಿ ಕಂಗೆಟ್ಟು ಬಾಯ್ಬಿಟ್ಟು-ಹಾ ಕಮಲಾಯಿ ! ಏನಾದೆ ತಾಯಿ!– ಎಂದು ಮೇಲ್ವಾಯ್ದು ಗೋಳಿಡುತ, ಕಣ್ಣೀರ ಸುರಿಸಿದರು ಹರಿಸಿದರು–ಸಖಿಯರೆಲ್ಲ. ಭವಿಸಂಗ ಕನಿಸಿನೊಳು ನಿನಗಾಯಿತೋ ! ಏನು ಗುರುಲಿಂಗ ನಿಂದೆಯನು ಆಲಿಸಿದೆಯೊ ! ಆ ಆರುತಿಂಗಳಿಗೆ ಮೀರದೆ; ಕೂಟದ ಸುಖವ ಸಲಿಸುವ ಪರಿಪಾಟಿಯು ತಾ

ತಪ್ಪಿತೆಂದು ತಸುವ ತೊರೆದೆಯೋ!– ಹೇಳೆಂದು ಗೆಳತಿಯರೆಲ್ಲ ಅತ್ತತ್ತು ಅಳವಳಿದು ಹಾಗರೆದರು. ಅಷ್ಟು, ಹೊತ್ತಿಗಾಗಲೆ ಈ ಸುದ್ದಿಯ ಕೇಳಿದ ಬಸವಣ್ಣ ಗಣಂಗಳು ಸಮೇತ ಕಮಲಾಯಿಯ ಮಹಮನೆಗೆ ಬಂದ. ಅರಿಯಲಾಗದ ಅದ್ಭುತದ ಮರಣ ಇದೇನೆಂದು, ಶಿವಜ್ಞಾನದಿಂದ ಅವಲೋಕಿಸಿದ ಬಸವಣ್ಣನು, ಇದು ಸತ್ಯಶರಣನಾದ ಹಡಪದಪ್ಪಣ್ಣನಿಂದಲ್ಲದೆ ಅನ್ಯರಿಂದಾಗದೆಂದು, ಅವನೆಡೆಗೆ ಅಪ್ಪಣ್ಣನನ್ನು ಕಳಿಸಿದ. ಆಗ ಹಡಪದಪ್ಪಣ್ಣ ನಗೆಮೊಗದಿಂದ ನಿರೂಪಿಸಿದನು:"ಆಕೆಯ ಲಿಂಗವ ಕಮಲಾಯಿಯ ಕೂಟಕ್ಕೈತಂದ ಕಪಟವಿಟನಾದ ಶಿವ, ಕದ್ದೊಯ್ದ ಕಾರಣದಿಂದ ಇಂತಾಗಿದೆ. ಆ ಲಿಂಗ ವೀಗ ಸಂಗತವಾದರೆ ಆಕೆಗೆ ಪ್ರಾಣ ಕೂಡುವದು" ಎಂದ. ಆ ಒಡನೆ ಬಂದ ಅಪ್ಪಣ್ಣನು, ಇದ ಬಸವಣ್ಣನಿಗೆ ತಿಳಿಸಿದ, ಆಗ ಬಸವಣ್ಣನ ಕೋರಿಕೆಯಂತೆ, ಶಿವನು ಆ ಲಿಂಗವ ಆಕೆಯ ದೇಹಕ್ಕೆ ಕರುಣಿಸಿದ ಆ ಕ್ಷಣ ಪ್ರಾಣ ಬಂದ ಕಮಲಾಯಿ ಎದ್ದು ನಮಿಸಿದಳು:– ಆ ಗಣಕುಲಕ್ಕೆಲ್ಲ. ಬಸವಾದಿ ಪ್ರಮಥರು ಆಗ–ಎಲೆ ತಾಯಿ ಕಮಲಾಯಿ ! "ಶರಣಸತಿ ಲಿಂಗಪತಿ" ಮತ್ತು "ಲಿಂಗಭೋಗೋಪ ಭೋಗಿ" ಎಂಬ ಆಗಮ ಸಿದ್ಧಾಂತವ ಸ್ಥಿರಗೊಳಿಸಿದ ಎಲೆ ಧರ್ಮದೇವಿ ! ನೀನೇ ಲಿಂಗಾನುಭಾವಿ ! ನಿನ್ನ ಚರಿತ್ರೆ ವಿಮಲವಾದುದು. ನಿನ್ನ ಭಕ್ತಿ ಭದ್ರವಾದುದು. ನಿನ್ನ ಶಾಂತಿ ಸಮಗ್ರವಾದುದು ನಿನಗೆ ಗೆಲವಾಗಲಿ; ಶಿವನೊಲವಾಗಲಿ !" ಎಂದು ಕೊಂಡಾಡುತ್ತಿರುವಲ್ಲಿ ; ಮುನ್ನಿನ ವಿಟರೂಪವ ತೊರೆದು ಸನ್ನುತ ನಿಜರೂಪದಿಂದ: ಶಿವ ಕಮಲಾಯಿಗೆ ಪ್ರತ್ಯಕ್ಷನಾದನು. ಘೋಷಿಸುವ ದೇವ ದುಂದುಭಿಯ ನಾದ, ಸೂಸುವ ಹೂವಿನಳೆಯೊಳಗೆ, ಕಮಲಾಯಿಯನ್ನು ಪ್ರೀತಿಮಿಗೆ ಪುಷ್ಪಕ ವಿಮಾನದಲ್ಲಿ ಕರೆದುಕೊಂಡು ಹೋದ ಶಿವನು ಆಕೆಗೆ ರುದ್ರಕನ್ಯಾ ಪದವಿಯನ್ನಿತ್ತನು.

–: ಈ ಸಂಧಿಗೆ ಸಹಾಯ ಮಾಡಿದವರು :–

( ಶ್ರೀಮತಿ ಪಾರ್ವತೆವ್ವ ಮಲ್ಲಪ್ಪ ನಾಗರಡ್ಡಿ )

— ೬ —

## ಜಂಗಮ ಮಾಹಾತ್ಮ್ಯ ನಿರೂಪಣ :

ಮರಕ್ಕೆ ಬಾಯಿ-ಬೇರು ಎಂದು, ತಳಕ್ಕೆ ನೀರ ಎರೆದರೆ, ಮೇಲಣ ಕೊಂಬೆ ರೆಂಬೆಗಳೆಲ್ಲ ತಣಿಯುವಂತೆ, ಲಿಂಗದಬಾಯಿ–ಜಂಗಮ ಎಂದು ತಣಿಸಿದರೆ, ಉಳಿದ ಜಗವೆಲ್ಲ ಮಿಗೆ ಸೊಂಪಾಗುವುದು.

ಆಚಾರಕ್ಕೆ, ಶಿವಭಕ್ತನ ಅಂಗವೇ ಆಶ್ರಯ. ಅವನ ಪ್ರಾಣಕ್ಕೆ, ಎಡೆಬಿಡದಿರುವ ಆಚಾರವೇ ಆಶ್ರಯ. ಭಕ್ತನ ಆಚಾರಸಿದ್ಧವಾದ ಪ್ರಾಣದಲ್ಲಿ, ಚಿಲಿಂಗ (ಜ್ಞಾನಲಿಂಗ ಅಥವಾ ಪ್ರಾಣಲಿಂಗ) ಪ್ರಕಾಶಿಸುವುದು. ಶಿವಯೋಗಿಯಲ್ಲಿ ದಿವ್ಯ ಶಿವಲಿಂಗ ವಿರಾಜಿಸುವುದು. ಈ ಲಿಂಗ, ಪೂಜಾದಿ ಕ್ರಿಯಾಂಗವಾಗಿ ಇರುವುದು.

ಶಿವಯೋಗಿ ಕೇವಲ ಚಿದಂಗನಾಗಿರುವನು. ಜಂಗಮನೇ ಭಕ್ತನ ಆಚಾರ ಪೂತವಾದ ಪ್ರಾಣದಲ್ಲಿ ಚಿದಂಗ (ಪ್ರಾಣಲಿಂಗ)ವಾಗಿ ಪ್ರಕಾಶಿಸುತ್ತ ಇರುವದರಿಂದ, ಜಂಗಮನು ಪ್ರಶಸ್ತವಾಗಿರುವನು, ಮಾನ್ಯವಾದ ಮಹಾವ್ರತಗಳು ಎಷ್ಟಿವೆಯೋ; ಅವುಗಳೊಳಗೆಲ್ಲಾ ಪ್ರಾಣಲಿಂಗವ್ರತವೇ ಶ್ರೇಷ್ಠ ! ಏಕೆಂದರೆ "ವ್ರತವಿದು ನನಗೆ (ಶಿವನಿಗೆ) ಪ್ರಶಸ್ತವಾದ ತನು ! ಚಿದಂಗವಾದ ಜಂಗಮವೇ ನನ್ನ ಮುಖ !!" ಎಂದು ಸಾಕ್ಷಾತ ಶಿವನೇ ತನ್ನ ವೇದವಾಣಿಯಿಂದ ಬೋಧಿಸಿದ್ದಾನೆ, ಎಂದ ಬಳಿಕ ಶಿವಯೋಗಿಗೆ ಯಾರು ಸಾಟಿಯಾಗುವರು ? ಇಂಥ ಜಂಗಮನಿಗೆ ತನು ಮನ ಧನಗಳನ್ನು ನಿರ್ವಂಚನೆಯಿಂದ ಒಪ್ಪಿಸುವ ಭಕ್ತನು ಮುಕ್ತನೆಂದು, ಶಿವಾನುಭವಿಗಳು ಹೇಳುತ್ತಾರೆ. ಸೃಷ್ಟಿ ಸ್ಥಿತಿಲಯಗಳು, ಬ್ರಹ್ಮ ವಿಷ್ಣು ರುದ್ರರಿಂದ ಹೇಗೆ ಆಗುವವೋ, ಹಾಗೆ ಭಕ್ತೋತ್ತಮನಿಗೆ ಅವು ಗುರುಲಿಂಗ ಜಂಗಮರಿಂದಲೇ ನೆರವೇರುವವು. ಇಂಥ ಜಂಗಮ ವನರ್ಚಿಸಿ ಲಿಂಗಕ್ಕೆ ಪಡೆದ ಪುಣ್ಯ ಚರಿತ್ರೆಯ ಹೇಳುವೆನು;

### ಶಿವಶರಣೆ ನಿಂಬೆಕ್ಕನ ಕಥೆ :

ಸತ್ಯ ಶಿವಾಚಾರ ಶಿವರತಿ ಸುವಿರತಿ ದಯಾ ನಯಾದಿ ಸಂಪನ್ನತೆಯಿಂದ, ನಿಂಬೆಕ್ಕ ತುಂಬ ಸನ್ಮಾನಿಸಿಯಾಗಿದ್ದಳು. ಈಕೆಯ ಜೀವನ, ಜಂಗಮ ಪೂಜೆಗೆ ಮೀಸಲಾಗಿತ್ತು. ಇವಳಿಗೆ ಮಗನೊಬ್ಬ ಇದ್ದ. ಈ ಹುಡುಗ, ಶರಣರ ದನಗಳನ್ನು ಕಾಯುವನು. ನಿಂಬೆಕ್ಕನೂ ಶರಣರ ಮನೆಗೆ ನೀರಡಕುವ ಕಾಯಕವ ಮಾಡುತ್ತಿದ್ದಳು. ಅದರಲ್ಲಿ ಬಂದಷ್ಟು ಹಣದಿಂದ, ಜಂಗಮ ಸೇವೆಯ ನಿಷ್ಟ ನಡೆಸುವಳು. ಒಂದುಸಾರೆ ಶಿವನೇ ಜಂಗಮನಾಗಿ ನೋಡಲು ಬಂದ. ಕಂಡೊಡನೆ ನಿಂಬೆಕ್ಕ ತುಂಬಿದ ಹರುಷದಿಂದ ಮುಂಬರಿದು ಮಣಿದಳು. ಜಂಗಮರಿಗೆ ಆಸನವಿತ್ತು ಬಳಿಕ, ಬಗೆ ಬಗೆಯ ಭಕ್ಷ್ಯ ಭೋಜ್ಯಗಳನ್ನು ಮಾಡಿಟ್ಟು, ನೀರಿಗಾಗಿ ಹೋಗಿದ್ದಳು. ಇತ್ತ ದನಕಾಯಲಿಕ್ಕೆ ಹೋಗಿದ್ದ ಹುಡುಗ ಬಂದು, ಹಸಿವಿನಿಂದ ಉರಿದೆದ್ದು, ಅವ್ವಾ ಅವ್ವಾ-ಎಂದು ಒರಲಿದ. ತಾಯಿ ಇಲ್ಲದಿರಲು ತಾನೇ ಒಳಹೊಕ್ಕು, ಇದ್ದ ಅಡುಗೆಯನ್ನು ಇಕ್ಕಿಕೊಂಡು ಉಣ್ಣುತ್ತಿದ್ದ. ಆ ವೇಳೆಗೆ ಬಂದ ನಿಂಬೆಕ್ಕ ನೋಡಿದುದೇ ತಡ, ಆವರಿಸಿದ ಕೋಪದಿಂದ–ತುಡುಗುಣಿ ನಾಯಿಯ ಒಡಿದಂತೆ ಆ ಮಗನಿಗೆ ಹೊಡೆದೇ ಬಿಟ್ಟಳು.-ಒನಕೆಯಿಂದ ! ಒಡನೆ ಮೃತಿಹೊಂದಿದ ಮಗನ ಕಾಲು ಹಿಡಿದೆಳೆದು, ಮಡಗಿದಳು ಹುಲ್ಲಮನೆಯೊಳಗೆ. ಈಗ ಮೃತಿ ಆದುದಕ್ಕಾಗಿ ಮನೆ ಬಳಿದು, ಸ್ಸೈದೊಳೆದು, ಎಂದಿನಂತೆ ಭಕ್ಷ್ಯಭೋಜ್ಯಾದಿ ಪಾಕವನ್ನು ಮತ್ತೆ ಮಾಡಿದಳು. ಲಿಂಗಾರ್ಚನೆ ಮುಗಿಸಿ, ಲಿಂಗಾರ್ಪಣಕ್ಕೆ ಎಡೆ ಮಾಡಲು, ಜಂಗಮನಿಗೆ ನಮಿಸಿ ನಿಂತಳು. ಆಗ ಜಂಗಮನು– "ನಿನ್ನ ಮಗನೆಲ್ಲಿ ನಿಂಬೆಕ್ಕ ? ಅವನಾಗಲೇ ಹಸಿವಿನ ಬಾಧೆಯಿಂದ ನಿನ್ನ ಕರೆಕರೆದು ಕಾಣದೆ, ಮನೆಯೊಳಗೆ ಹೋದ. ಕರೆ ಅವನನ್ನ ! ಬಂದ ಮಕ್ಕಳಿಗೆ ಉಣಿಸಿ ತಣಿಸದಿದ್ದರೆ, ಜನರೇನೆಂಬಾರು ! ನಾವೇನು ಮಕ್ಕಳಿಲ್ಲದವರೇ ? ಉಣಬಂದ ಕಂದನಿಗೆ, ಹಡೆದವ್ವ ಎಂತಾದರೂ ಇಕ್ಕದಿರುವಳೇ ? ನಲಿದಾಡುವ ಮಕ್ಕಳಿಲ್ಲದ ಮನೆಯದು, ಎಂದಿಗೂ ಮನೆ

ಯಲ್ಲ ! ಶಿಶುಗಳಿಲ್ಲದ ಊಟವದು ವಿಷದೂಟ ! ಸುತರಿಲ್ಲದ ಸಿರಿಯದು— ದಳ್ಳುರಿ ! ಹೀಗೆಂದ ಜಂಗಮನಿಗೆ, ನಿಂಬೆಕ್ಕ ಬಿನ್ನವಿಸಿದಳು:- ಎಲೆದೇವಾ ! ನಿನ್ನ ಠಕ್ಕಿನ ಮಾತಿಗೆ ನಾನು ಸಿಕ್ಕುವವಳಲ್ಲ. ನಾನೇನೂ ಆ ಜಡಬುದ್ಧಿಯ ಸಿರಿಯಾಳನಂತೆ, ನಿನ್ನ ಹಂಗಿನಲ್ಲಿರುವವಳಲ್ಲ. ಕಂದನ ಕಾಯುವ ಕೊಲ್ಲುವ ಸಂದೇಹವದೇಕೆ ಬೇಕು ನಿನಗೆ ? ನೀನೀವ ಅದಾವ ಘನವರವನೂ ನಾನು ಕೇಳುವುದಿಲ್ಲ. ನೀನೀಗ ಮೊದಲು ಉಣಬೇಕು ಇಲ್ಲದಿರೆ ನಿನ್ನನೀಗ ಮುಂದಕ್ಕೆ ಒಂದು ಹೆಜ್ಜೆಯನ್ನಿಡಲಿಕ್ಕೂ ಬಿಡಲಾರೆ. ನಿಮಗಾನು ನೇಮಕ್ಕಾಗಿ ಸಿದ ಪ್ರಸಾದವ, ಕದ್ದು ತಿಂದ ಕಡುಪಾಪ, ಆ ಮಗನ ಮುಗಿಸಿತು. ನೀವದಕ್ಕೆ ಸಂತಾಪಗೊಳ್ಳದೆ ಸೇವಿಸುವುದು— ಎಂದಳು. ನಿಂಬೆಕ್ಕನ ಈ ನಿರ್ಮೋಹಕ್ಕೆ ನೆಚ್ಚಿ ಮೆಚ್ಚಿದ ಶಿವನಾಗ ಕರದಲ್ಲಿ ಕಪಾಲ, ಶಿರದಲ್ಲಿ ಚಂದ್ರ, ಉರದಲ್ಲಿ ಸರ್ಪವುಳ್ಳವನಾಗಿ ನಿಜರೂಪದಿಂದ ಮೆರೆದ. ಆಗ ನಿಂಬೆಕ್ಕ ನಿವೇದಿಸುತ್ತಾಳೆ:- ಪುಸಿವೇಷದಿಂದ ಬಂದರೂ ನಿನ್ನನೇನು ನಿಂದಿಸಿದೆನೇ ನಾನು ? ಈ ಚಂದ್ರ, ತ್ರಿಶೂಲ, ಗಜಚರ್ಮಗಳನ್ನು ಕಂಡ ಬಳಿಕ ಇಂದೇನಾದರೂ ನೀನೇ ವಿಶ್ವೇಶನೆಂದು ಹೊಸತಾಗಿ ತಿಳಿದೆನೇ ನಾನು ? ಸಾಕು ಬಿಡು ಮೋಸವಿದ ! ಮೊಲೆವಾಲಿಗಾಗಿ ಅಳುವ ಕಂದನಿಗೆ, ಫಲವ ತಂದಿರಿಸುತ, ತಾಯಿ ತಾ ಮೊಲೆಯ ವಂಚಿಸುವಂತೆ, ನಿನ್ನ ನಿಜರೂಪ ತೋರಿಸುತ, ನನ್ನ ಭಕ್ತಿಸತ್ತ್ವವ ಮರೆಸಬೇಕೆಂದಿರುವೆಯಾ ಶಿವನೆ ! ನಾನಿದಕೆ ಸೋಲುವವಳಲ್ಲ. ಪೂರ್ವದಲ್ಲಿ ನೀನು— ಸಂಬಿಯಣ್ಣನೆಡೆಗೆ, ಅದಾವ ಅಂಬಿಕೆಯೊಡನೆ ಹೋಗಿದ್ದೆ ? ಸಾಮವೇದಿಗಳ ಯಾಗಕೆ ಹೋದಂದು, ಅದಾವ ಹಾವ ತೊಟ್ಟದ್ದೆ ? ಬಿಜ್ಜದೇವಿಯನು ಕಂಡಾಗ ಅದಾವ ಮೃಗ ಚರ್ಮವಿತ್ತು ? ಪಂಚಮುಖ ಎಲ್ಲಿತ್ತು, ಪಿಟ್ಟವ್ವೆಯ ಕಂಡಾಗ ? ದಭ್ರ ಭಕ್ತನಲ್ಲಿಗೆ ದಯಮಾಡಿಸಿದಂದು, ಅದಾವ ಅಭ್ರಗಂಗೆ ಇತ್ತು ? ಆದರೂ ಆ ಪುರಾತನರೆಲ್ಲ, ಆದರಿಸಲಿಲ್ಲವೆ ನಿನ್ನ ? ಅವರ ಹಾದಿಯಲಿ ನಡೆವ ಹಸುಳೆಯಾದೆನ್ನಲ್ಲಿ ಬಿಟ್ಟು ಬಿಡು ಏತಕೀ ಕಪಟಕಾರ್ಯ ? ನೀನೀಗ ಎರಡೆಣಿಸದೆ ಪೆರತಾಡದೆ ಉಣಬೇಕು ಮೊದಲು. ಇಂತೆಂದ ನಿಂಬೆಕ್ಕನ ನಿರ್ಮೋಹಕ್ಕೂ ನಲ್ಮಾತಿಗೂ ಮೆಚ್ಚಿದ ಮಹಾದೇವ, ಮನವಾರೆ ಉಂಡನು; ಮತ್ತು ಪಕ್ಕದಲ್ಲಿದ್ದ ಸಿರಿಯಾಳನನ್ನು ಕುರಿತು— ಎಲೆ ಭಕ್ತ ! ಹಿಂದೊಮ್ಮೆ ನಾ ನಿನ್ನ ಕಂದನ ಬಯಸಿದುದಕ್ಕೆ ಕೊಂಡಿಕ್ಕಿದ ನೀನು ಮತ್ತಾ ಕೈಯಲಿ ಕಂದನ ಬೇಡಿದೆ. ನಿಂಬೆಕ್ಕನಾದರೋ— ಜಂಗಮಸೇವಾ ವ್ರತಭಂಗಗೊಳಿಸಿದ ಕಂದನಕೊಂದು ಕಾಣದಂತಿರಿಸಿ, ಜಂಗಮ ತೃಪ್ತಿಯ ಮಾಡಿದಳು. ನಿಂಬಿಯ ಈ ನಿಷ್ಕಾಮ ಭಕ್ತಿಯೆತ್ತ? ನಿನ್ನಾ ಹಮ್ಮಿನ ಭಕ್ತಿಯೆತ್ತ ? ನಿಷ್ಕಾಮ ಭಕ್ತಿಗೆಂತಾದರೂ ನೀನು ಆದರ್ಶನಲ್ಲ; ಅರ್ಹನೂ ಅಲ್ಲ— ಎಂದು ನಿರೂಪಿಸಿದ ಶಿವ, ಸಿರಿಯಾಳನ ದುರಹಂಭಾವವನ್ನು ಬಿಡಿಸಿದನು. ಅನಂತರ ನಿಂಬಿಯ ಮಗನಿಗೆ ಪ್ರಾಣದಾನಮಾಡಿದ ಶಂಕರ, ಆಕೆಯನ್ನು ದೇವ ದುಂದುಭಿಯ ವಾದ್ಯದೊಡನೆ ಮೆರೆಸುತ್ತ ಕೈಲಾಸಕ್ಕೆ ಕರೆದೊಯ್ದನು. ಸಾಲೋಕ್ಯ ಸಾಮಿಪ್ಯ ಸಾರೂಪ್ಯ ಸಾಯುಜ್ಯ— ಎಂಬೀ ನಾಲ್ಕೂ ಪದವಿಗಳಿಂದಲೂ ಮೇಲಾದ ಜಂಗಮ ಸೇವಾಸಕ್ತಿಯಿಂದ, ನಿಂಬೆಕ್ಕನ ನಾಮ ನೆಲೆಗೊಂಡಿತು.

—: ೯ನೇ ಸಂಧಿಗೆ ಸಹಾಯಮಾಡಿದವರು :—

(ಶ್ರೀಮತಿ ಪಾರ್ವತೆವ್ವ ಕೋಂ. ವೀರಪ್ಪ ಹಳಕಟ್ಟಿ)

— ೧೦ —

## ಪಾದೋದಕ ಮಾಹಾತ್ಮ್ಯಂ

ಪಾದೋದಕವ ಮುಟ್ಟಿದ ಮಾತ್ರದಿಂದಲೇ ಬ್ರಹ್ಮಹತ್ಯಾದಿ ಮಹಾಪಾತಕವೆಲ್ಲ ಪಲ್ಲಟವಾಗುವುದು. ಮತ್ತು ಇದನೊಮ್ಮೆ ಕಣ್ಣಾರೆ ಕಂಡರೆ ಸಾಕು, ಸರ್ವಸೌಖ್ಯ ಸಂಪ್ರಾಪ್ತಿ ಆಗುವುದು. ಗುರು ಪಾದೋದಕವ ಸ್ಥಿರಭಕ್ತ್ಯತಿಶಯದಿಂದ ಸೇವಿಸಿ, ಶಿರದಲ್ಲಿ ತಾಳಿದರೆ ಪರ ಮುಕ್ತಿಪದ ದೊರಕುವುದು. ಪಾದೋದಕದ ಹನಿಯೊಂದನ್ನು ತಲೆಯ ಮೇಲೆತಾಳಿದೊಡನೆಯೆ; ದೊಡ್ಡದೊಡ್ಡ ನದೀನದಾದಿ ತೀರ್ಥ ಸ್ನಾನದಿಂದಾಗುವ ಸತ್ಫಲ ವೆಲ್ಲ ಸಿದ್ಧಿಯಾಗುವುದು. ಆದುದರಿಂದ ಪಾದೋದಕದ ಹನಿಯೊಂದಕ್ಕೆ, ಆ ತೀರ್ಥ ಸ್ನಾನದ ಸಮಸ್ತ ಸತ್ಫಲ, ಸರಿಸಮಾನವಾಗುವುದಿಲ್ಲ. ಗುರುಪಾದ ತೀರ್ಥದ ಮೇಲೆ ಹಾಯ್ದುಬಂದ ಮಹಾಮಾರುತನ, ತಂಪು ಕಂಪುಗಳನ್ನು ಪಾನಮಾಡಿದ ಆದಿಶೇಷನು, ಭೂಭಾರ ಹೊರುವಂಥ ಶ್ರೇಷ್ಠ ಸಾಮರ್ಥ್ಯವ ಪಡೆದುದಲ್ಲದೆ, ಶಿವನ ಮುಡಿಗೆ ಒಡವೆ ಯಾಗಿ, ಸರ್ಪರಾಜನೆಂಬ ಹೆಮ್ಮೆಯಿಂದ ಪರಿಶೋಭಿಸುತ್ತ ಇದ್ದಾನೆ. ಪೂಜ್ಯ ಗುರು ಲಿಂಗ ಜಂಗಮರ ಪಾದದಿಂದ ಜನಿಸಿದ ಕರುಣಾಜಲವು– ಪರಮ ವಿನಯವನ್ನು ವೃದ್ಧಿ ಪಡಿಸುವುದು; ಮತ್ತು ಸಮಸ್ತ ಪರಿಪೂರ್ಣತ್ವದ ಅರಿವಿಗೆ ಆಸ್ಪದವಾಗಿರುವುದು. ಹೀಗೆ ಮೂರು ಬಗೆಯಾಗಿರುವ ಈ ಪಾದೋದಕವೂ ನಿರ್ದುಷ್ಟವಾಗಿರುವುದು ನಿರ್ಮಲ ವಾಗಿರುವುದು. ಇದನ್ನು ಶಿರದಲ್ಲಿ ತಾಳುವುದರಿಂದ– ಪ್ರಾರಬ್ಧ, ಸಂಚಿತ, ಆಗಾಮಿ ಎಂಬ ಕರ್ಮತ್ರಯದ ಕಡುಪು, ಕಳೆದುಹೋಗುತ್ತದೆ.

ಪ್ರಾಣದ ಸ್ಥಿತಿಗೆ ನೀರೇ ಪರಮಾಶ್ರಯ; ಆದರೆ ಆ ನೀರು ಕೇವಲ ಭೌತಿಕವಾಗಿ ಜಡರೂಪವಾಗಿರುವುದು. ಇಂಥದನ್ನು ಸೇವಿಸುವುದರಿಂದ, ಆ ಪ್ರಾಣೇಂದ್ರಿಯಗಳೂ ಕೂಡ, ಜಡಭಾವ ಭರಿತವಾಗುವುದು ಸಹಜ. ಜಡಭಾವಮಯವಾದ ಆ ಪ್ರಾಣೇಂದ್ರಿ ಯಗಳೆಲ್ಲ ದುಸ್ಸಂಗ ದುಃಶೀಲದಲ್ಲಿ ತೊಡಗಿ, ಸನ್ಮಾರ್ಗದಿಂದ ದೂರವಾಗುವುವು; ಬೇರೆ ಯಾಗುವುವು. ಈ ಅಪಾಯದಿಂದ ಪಾರಾಗುವದಕ್ಕೆ; ಎಂದರೆ ಭೌತಿಕವಾದ ಆ ನೀರಿನ ಜಡತ್ವ ನಿವಾರಣಕ್ಕೆ, ಶ್ರೀಗುರುವಯ್ಯನ ಪಾದದಿಂದ ಸಂಭವಿಸಿದ, ದಶವಿಧ (ಹತ್ತು ತೆರ ನಾದ) ಪಾದೋದಕವೇ, ಪರಮ ಮದ್ದು; ಅಥವಾ ಪರಮೋಪಾಯವಾಗಿ ಪರಿಗಣಿಸಲ್ಪ ಟ್ಟಿದೆ, (ಎಂದರೆ ಜಡತ್ವವುಳ್ಳ ನೀರನ್ನು, ವಿಧ್ಯುಕ್ತವಾದ ಸಂಸ್ಕಾರದಿಂದ ಗುರುಪಾದ ತೀರ್ಥ ಮಾಡಿಕೊಂಡು ಸದ್ಭಾವದಿಂದ ಸೇವಿಸತಕ್ಕದ್ದೆಂದು ತಾತ್ಪರ್ಯ) ದಶವಿಧ ಪಾದೋ ದಕದಿಂದ, ದಶ ಪ್ರಾಣವಾಯುಗಳೂ ಪರಿಶುದ್ಧವಾಗುತ್ತವೆ. ಪ್ರಾಣವಾಯು ಸಂಚಲಿಸಿ ದರೆ, ಮನ ಸುಸ್ಥಿರವಾಗಿ ಇರುವುದಿಲ್ಲ. ಮನ ಸಂಚಲಿಸಿದರೆ, ಪಂಚೇದ್ರಿಯಗಳ ಕುಚೇ ಷ್ಟೆಯ ಕುಣಿತ ನಿಲ್ಲುವುದಿಲ್ಲ. ಇಂತಾದ ಪ್ರಾಣ ಮನ ಪಂಚೇಂದ್ರಿಯಗಳ, ಅವಾಂತರದ ಆಟಕ್ಕೆ ಸಿಕ್ಕ ಜೀವ(ಆತ್ಮ)ನು, ಅತಿಯಾಗಿ ಕಂದಿ ಕುಂದಿಹೋಗುವನು. ಇದುಕಾರಣ ಆ ಪ್ರಾಣವಾಯುವಿನ ಪ್ರತಾಪವನ್ನು ಮೊದಲೇ ಮರ್ದಿಸಬೇಕು. ಇದರ ಮರ್ದನಕ್ಕೆ, ಪಾದೋದಕವೇ ಪರಮ ಮದ್ದು ಕುಟಿಲ ಕುಹಕ ಕಟುಚಾಂಡಾಲನಾದರೂ ಸಹ

ಜನನ ಮರಣ ಹರಣಕ್ಕೆ ಸಮರ್ಥವಾದ, ಗುರುಪಾದೋದಕವ ಸೇವಿಸುವುದರಿಂದ, ತಪ್ಪದೆ ಶಿವಸಾಯುಜ್ಯವನ್ನು ಪಡೆಯುವನು. ಘೋರಾಪಾರವಾದ ಭವಾರಣ್ಯದೊಳಗೆ ಭಂಗಪಡುವ ಜಡಜೀವರಿಗೆಲ್ಲ, ಉತ್ತರೋತ್ತರವಾದ ಪರಮ ಶಾಂತಿಯ ನೆಲೆಯನಿತ್ತು ಸಲಹುವದಕ್ಕೂ, ಪಂಚಸೂತಕಗಳನ್ನು ಪರಿಹರಿಸುವದಕ್ಕೂ, ಗುರುಪಾದತೀರ್ಥವೇ ಪ್ರಶಸ್ತವೆನಿಸಿರುವುದು. ಗಂಗಾಧರನ ಮಂಗಳಮಸ್ತಕದಿಂದ ಭುವಿಗವತರಿಸಿ ಕಂಗೊಳಿಸುವ ದೇವಗಂಗೆ, ತನ್ನೊಳಗೆ ಮುಳುಗಿ ಮಿಂದವರ, ಹೊರಮೈಯ ಮಲವನೊಂದನೇ ಪರಿಹರಿಸುತ್ತದೆ. ಆದರೆ ಗುರುವಿನ ಪಾದಾಂಗುಷ್ಠಾಗ್ರದಿಂದ ಪುಟ್ಟಿದ ಪಾದತೀರ್ಥವು, ಜೀವರ ಹೊರಗೊಳಗೆ ಕವಿದ ಎರಡು ಬಗೆಯ ದುರ್ಮಲವನ್ನೂ ಪರಿಹರಿಸುವುದಾದುದರಿಂದ, ಇದು ಆ ದೇವಗಂಗೆಗಿಂತಲೂ ಮೇಲಾಗಿರುತ್ತದೆ. ಈ ವಿಷಯವಾಗಿ ಸಂದರ್ಭಾನುಸಾರವಾದ ಪುಣ್ಯಕಥೆಯೊಂದ ಹೇಳುವೆನು.

## ಮೋಳಿಗೆ ಮಾರಯ್ಯನ ಕಥೆ

ರಾಜ್ಯಸುಖ ಸಂಪತ್ತನ್ನೆಲ್ಲಾ ತೊರೆದ, ಮೋಳಿಗೆಯ ಮಾರಯ್ಯನೆಂಬ ಶಿವಶರಣನು- ಭಕ್ತಿ ಜ್ಞಾನ ವೈರಾಗ್ಯವೈಭವದ ಕೋಶ, ನಾಶಗೊಳಿಸಿದ ದುರ್ಭವಪಾಶ, ಶೈವಧರ್ಮ ಕಮಲ ದಿನೇಶ, ಜಂಗಮಾರ್ಚನೆಯ ಸುವಿಲಾಸ- ಎಂಬ ಘನತೆಯಿಂದ ಶೋಭಿಸಿದ, ಅಲ್ಲದೆ ಈತನು ಕಾಮಾದಿ ಅರಿಷಡ್ವರ್ಗದಿಂದ ದೂರನಾಗಿದ್ದ; ಕಾಮಾರಿಯ ಕಥಾಮೃತದಿಂದ ಪೂರನಾಗಿದ್ದ; ಭವಿಸಂಗದಿಂದ ಬಾಹಿರನಾಗಿದ್ದ; ಕಲ್ಪನಾತೀತವಾದ ದಿವ್ಯಮಹಿಮೆಗೆ ಆಧಾರನಾಗಿದ್ದನು. ದಿನದಿನವೂ ಕೊಡಲಿವಿಡಿದು ಕಾನನಕೆ ಹೋಗಿ, ಸೌದೆ (ಕಟ್ಟಿಗೆ) ಮಾಡಿ ಹೊರೆಗಟ್ಟಿ ಹೊತ್ತುತಂದು, ಅದ ಮಾರಿದ ಹಣದಿಂದ, ಜಂಗಮ ಸಂತೃಪ್ತಿ ಪಡಿಸುತ್ತ ಇದ್ದನು. ಮೋಳಿಗೆ ಮಾರಯ್ಯ. ಜಂಗಮರು ಬಸವರಾಜದೇವರ ಮಹಮನೆಯಲ್ಲಿ ಷಡ್ರಸಾನ್ನ ಭೋಜನ ಮಾಡುತ್ತಿದ್ದರೂ, ಅದರಿಂದ ತೃಪ್ತಿಪಡೆಯದೆ, ಮೋಳಿಗೆ ಮಾರಯ್ಯನ ಮಂದಿರಕೆ ಬಂದು, ಇಲ್ಲಿಯ ಅಂಬಲಿಯ ಉಂಡಬಳಿಕ, ತುಂಬ ತಣಿಯುತ್ತ ಇದ್ದರು. ಇಂತಿದ್ದ ಜಂಗಮರು ಒಂದುದಿನ ಬಸವಣ್ಣನವರ ಮುಂದೆ- ಎಲೆ ಬಸವರಾಜಾ! ನಿನ್ನ ಮಹಮನೆಯ ಮಧುರವಾದ ಷಡ್ರಸಾನ್ನವು, ಮೋಳಿಗೆ ಮಾರಯ್ಯನ ಮನೆಯ ಅಂಬಲಿಗೆ, ಎಣೆ ಅಲ್ಲವಯ್ಯಾ! ಆ ಅಂಬಲಿಯ ಸವಿದ ನಾಲಗೆಗೆ, ಮಿಕ್ಕರಸವೆಲ್ಲ ವಿರಸವಾಗುವುದು. ಇನ್ನೊಂದು ವಿಶೇಷವೆಂದರೆ: ತನ್ನ ಸೌದೆಯ (ಕಟ್ಟಿಗೆ) ಯ ಕಾಯಕದಿಂದ ಲಭಿಸುವ, ಒಂದು ಕೊಳಗ ಭತ್ತದಿಂದ, ಎಷ್ಟು ಜಂಗಮರು ಬಂದರೂ, ಅಷ್ಟರಲ್ಲಿಯೇ ತುಷ್ಟಿ ಪಡಿಸುವನು. ಅವನ ಅತ್ಯುನ್ನತ ಭಕ್ತಿಯ ಭಾಗ್ಯನರಿವುದು, ಸರ್ವೇಶನಿಗಲ್ಲದೆ ಅನ್ಯರಿಗೆ ಅಸದಳವು ಬಸವೇಶಾ ಎಂದು ಸಂತಸದಿಂದ ಹೇಳಿದರು. ಕೇಳಿದ ಬಸವೇಶ ಕೌತುಕಗೊಂಡು, ನೋಡಬೇಕೆಂಬ ಸದಿಚ್ಛೆಯಿಂದ ಮಾರಯ್ಯನ ಮನೆಗೆ ಹೋಗುತ್ತಾನೆ. ಆಗ ಮಾರಯ್ಯ ತನ್ನ ಕಾಯಕಕ್ಕೆ ಹೋಗಿದ್ದ, ಮಾರಯ್ಯನ ಸಚ್ಚಾರಿತ್ರ್ಯದ ಸತಿಯನ್ನು ಕಂಡ ಬಸವಣ್ಣನು, ಆಕೆಗೆ ಭಕ್ತಿಯಿಂದ ಬಾಗಿ ವಂದಿಸಿದ. ಬಸವರಾಜನಿಗೆ ಪ್ರತಿಯಾಗಿ ಅತಿವಿನಯದಿಂದ ಮಣಿದ

ಆ ಮಾರಯ್ಯನ ಸತಿಯು, ಕೂಡಲೆ ನೀರಕೊಟ್ಟು ಆಸನವನಿತ್ತು ಅರ್ಚನೆಯ ಮಾಡಿಸಿದಳು. ಪೂಜಾನಂತರ ಬಸವರಾಜ ದೇವನು- ಎಮ್ಮ ಶಿವನಿಗೆ ಹಸಿವಾಗಿದೆ; ಮನೆಯೊಳು ಇದ್ದುದನು ನಿವೇದಿಸು ತಾಯಿ ! ಎಂದ. ಎಡೆ ಮಾಡಿದ ಬಳಿಕ ಸಲ್ಲಿಸಿದ, ಬಸವಣ್ಣ ಮಜ್ಜನ ಪಾತ್ರೆಯ ಒತ್ತಿನಲ್ಲಿ, ಎರಡು ಸಾವಿರ ಹೊನ್ನುಗಳನ್ನು ಬೈತಿಟ್ಟು, ಎದ್ದು ಅಂಗಣಕ್ಕೆ ಬಂದು, ಆ ಮನೆಯನ್ನೆಲ್ಲ ಮುದದಿಂದ ನೋಡುತ್ತ– ಸಂಸಾರ ಘೋರಾಂಧಕಾರಕೆಲ್ಲ, ಸೂರ್ಯನಾಗಿ, ಮೆರೆವ ಮನೆ ಇದು ! ಮಹಾ ಸುಖಶಾಂತಿ ಸಂಪತ್ತಿಗೆ ಜನ್ಮಭೂಮಿಯಾದ ಮನೆ ಇದು ! ದುರಂತ ದುರ್ವಿಘ್ನ ವಾರಿದ (ಮೋಡ)ಕ್ಕೆ ಬಿರುಗಾಳಿಯಾದ ಮನೆ ಇದು ! ದುರಿತಾರಣ್ಯಕ್ಕೆ ಇಟ್ಟ ದಾವಾನಲವಾದ ಮನೆಯಿದು ! ಸಲ್ಲುವ ಮೋಕ್ಷ ಲಕ್ಷ್ಮಿಯ, ಜಿಲ್ಲಾಟಕ್ಕೆ ಆದ ಜೆಲ್ವಮನೆ ಇದು ! ಎಂದರೆ ಒಪ್ಪುವುದು.– ಎನ್ನುತ್ತ ಮನವಾರೆ ಕೊಂಡಾಡಿದ ಬಸವೇಶ, ಅಲ್ಲಿ ನಿಲ್ಲದೆ ತನ್ನ ಮನೆಗೆ ಬಂದುಬಿಟ್ಟನು.

•

ಅತ್ತ ಸೌದೆಗಾಗಿ ಹೋಗಿದ್ದ ಮಾರಯ್ಯ, ಮಧ್ಯಾಹ್ನದ ಹೊತ್ತಿಗೆ ಹೊರೆ ಹೊತ್ತುಕೊಂಡು, ಹರನ ನೆನೆವುತ್ತ, ಮನೆಯ ಬಳಿ ಬಂದು, ಆ ಹೊರೆಯ ಹಾಕಿದನು. ಬಂದ ಪತಿಯ ಪಾದಗಳನ್ನು, ಸತಿ ತೊಳೆದಳು. ಲಿಂಗ ಜಂಗಮಾರ್ಚನೆಯ ಮಾಡಿ, ನಿಜಭಕ್ತಿಯಿಂದ ಭಜಿಸುತ್ತಿದ್ದ ಶರಣ ಮಾರಯ್ಯನ ಕಣ್ಣಿಗೆ, ಆ ಹೊಳೆವ ಹೊನ್ನುಗಳು ಕಾಣಿಸಿದುವು. ನಿಜ ಸತಿಯನ್ನು ಕುರಿತು– ಇಲ್ಲಿಗೆ ಬಂದಿದ್ದವನು ಯಾರು ? ಹೊಸ ಹೊನ್ನುಗಳಿವು ಎಲ್ಲಿಯವು ? ಮಾಜದೆ ಎನಗೆ ನಿಜವ ಹೇಳು ರಮಣಿ ? ಎಂದು ಕೇಳಿದನು. ಆಗ ಸತಿಯು– ಅದಾರೋ ಒಬ್ಬಬಂದು, ಮಹಾಲಿಂಗ ಪೂಜೆಯ ಮನೋವಿನೋದದಿಂದ ಮುಗಿಸಿಕೊಂಡು, ಹೊರಟುಹೋದ ಎಂದಳು. ಮಾರಯ್ಯನು– ಹಾಗೆ ಬಂದು ಹೋದವನು ಬಸವಣ್ಣನೇ ನಿಜ. ಬೇರೊಬ್ಬನಾರೋ ಎಂದು ಭಾವಿಸಬೇಡ ನೀನು, ಏಕೆಂದರೆ ದೀನಜನನೆಲ್ಲ ಹೀಗೆ ದಾನವ ಮಾಡಿ ಸಲಹುವ ಧೀರ, ಅವನೊಬ್ಬನಲ್ಲದೆ ಬೇರಿನ್ನಾರುಂಟು ಧರೆಯೊಳಗೆ ! ಅಗಣಿತೈಶ್ವರ್ಯ ಸಂಪನ್ನನೊಲಿದು, ಕಡುಬಡವರ ಪೊರೆವುದೇನು ಅಚ್ಚರಿಯೆ ? ಬಸವನೆಂತೂ ಅಸಮ ಭಾಗ್ಯವಂತ ! ಅದರಿಂದ ಅವನು, ಪೊಡವಿಯೊಳು ಕಡುಬಡವರಾದೆಮ್ಮ ನೋಡಿ, ದಯಾಳು ದಾನಪಟು, ಕನಕ ರಾಶಿಯ ನೆಮ್ಮ ಮನೆಯಲ್ಲಿ, ಸುರಿದು ಹೋಗಿದ್ದಾನೆ. ಎಮಗೆಮ್ಮ ಕಾಯಕದಿಂದ, ಶಿವನೊಲಿದು ಕರುಣಿಸುವ ಹಣವೇ, ಸಾಕಾಗಿರುವುದು, ಬಸವನೇ ಬಲ್ಲನೀ ಕ್ರಮವ ! ನಾನೆಂತು ಬಲ್ಲೆ ? ಎಂದು ಮೂದಲ್ಲಿಸುತ್ತ, ಆ ಹೊನ್ನರಾಶಿಯನೆಲ್ಲ. ಮಾನ್ಯ ಜಂಗಮರಿಬ್ಬರಿಗೆ ಮನವಾರೆ ಅರ್ಪಿಸಿದನಾ ಮಾರಯ್ಯ ವಿನಯದಿಂದ. ಅನಂತರ ಜಂಗಮರ ಪಾದ ತೊಳೆದ ಜಲವ, ತನ್ನಾ ಸೌದೆಯ(ಕಟ್ಟಿಗೆಯ) ಹೊರೆಯಮೇಲೆ ಸಿಂಪಡಿಸಿದ. ಆಗ ಸೌದೆಯ ಹೊರೆ ಹೋಗಿ, ಸುವರ್ಣದ (ಚಿನ್ನದ) ಹೊರೆಯಾಯಿತು. ಅದರಲ್ಲಿಯ ಒಂದೊಂದು ಚಿನ್ನದ ಕೋಲನ್ನು, ಇನ್ನುಳಿದ ಜಂಗಮ ಸಮೂಹಕ್ಕೆ ಸಮರ್ಪಿಸಿದನು– ಮೋಳಿಗೆ ಮಾರಯ್ಯ. ಬಂಗಾರದ ಕೋಲನ್ನು ಹಿಡಿದ ಜಂಗಮರು ಬಂದು, ಬಸವಣ್ಣನವರಲ್ಲಿ ಜಗನ್ಮಾನ್ಯ ಮೋಳಿಗೆ ಮಾರಯ್ಯನ ಮಹಿಮೆಯನ್ನು ಪ್ರಶಂಸಿಸಿದರು. ಆಶ್ಚರ್ಯ ಹೊಂದಿದ ಬಸವಣ್ಣನು, ಮೋಳಿಗೆ ಮಾರಯ್ಯನನ್ನು– ಶಿವಸ್ವರೂಪನೇ ! ಶಿವಗಣ

ಶೋಭಿತನೇ ! ಭವ ಮರಣ ಗಿರಿವಜ್ರನೆ ! ವಿಶ್ವಕಲ್ಯಾಣ ಕಾರ್ಯ ಧುರಂಧರನೆ ! ರಕ್ಷಿಸುವುದೆನ್ನ– ನೆಂದು, ಭಯಭರಿತ ಭಕ್ತಿಯಿಂದ ಭಜಿಸಿದನು. ಆಗ ಮೋಳಿಗೆ ಮಾರಯ್ಯನು ಎಲೆ ಬಸವೇಶಾ ! ಹೇಳಲಾರದಷ್ಟು ಬಡತನವೆಡೆಗೊಂಡ ದರಿದ್ರನಾದೆನ್ನನೇಕೆ ಇಂತು ಪಾಡುವೆ ನೀನು ? ದೀನ ಜನವ, ದಾನಶೂರರೇನು ವರ್ಣಿಸುವುದುಂಟೇ ? ನಾನು ಇದುವರೆಗೆ ಕಾಣದ ಹೊಳೆಹೊಳೆವ ಹೊನ್ನುಗಳ, ನಿನ್ನ ಕೃಪೆಯಿಂದ ಕಂಡು, ನಿಬಿಡವಾದ ಬಡತನವ ನೀಗಿದೆನಯ್ಯಾ ಇಂದು. ಎನಗೆ ನೀನೊಬ್ಬನೆ ಘನದಾನಿ ! ನಿಶ್ಚಯವಿದು. ದೀನತನದಿಂದ ಹಾನಿ ಹೊಂದುವನೀ ಬಡಭಕ್ತನೆಂದು, ನೀನು ಕೃಪೆದೋರಿ ಕನಕರಾಶಿಯನಿತ್ತೆ. ನಿನ್ನಂಥ ಆಪ್ತರು ಎನಗೆ ಬೇರಿನ್ನುಂಟೇ ? ಕಾರ್ಪಣ್ಯದ ಜೀವರಿಗೆಲ್ಲ, ಕುಂದದೆ ಒಂದೆಸಮನಾಗಿ ಅರ್ಥವ ಪೂರೈಸತಕ್ಕವನು ನೀನೆಯಲ್ಲದೆ, ಮತ್ತಾರು ಬಸವೇಶಾ ? ಅಲ್ಲದೆ, ದಾನಿಗಳಲ್ಲಿ ನಿನಗೆ ಹೊಸತೊಂದು ಯಶವು ಸಲ್ಲುವುದು: ಏನೆಂದರೆ, ದೀನರಿದ್ದೆಡೆಗೆ, ನೀನೆ ಬಂದು ಒಲಿದೀಯುವೆ- ಧನರಾಶಿಯನ್ನು ! ಇದರಿಂದ ಸ್ವರ್ಗದ ಕಲ್ಪವೃಕ್ಷವೂ ಸಹ ನಿನಗೆ ಎಣೆ ಬರುವುದಿಲ್ಲ. ಎಂದು ಮೃದುವಾಗಿ ಆಕ್ಷೇಪಿಸಿದ ಮೋಳಿಗೆ ಮಾರಯ್ಯನ ನುಡಿಗೆ, ಬಸವೇಶನು ನಡುಗಿ ನಾಚಿ ಬೆಪ್ಪಾದನು. ಮತ್ತು ಮಾರಯ್ಯನ ಅಡಿದಾವರೆಯ ಅಪ್ಪಿಕೊಂಡು– ಎಲೆ ಮಹಾಮಹಿಮನೆ ! ಅಧಮನೂ ಆಶಾಲಂಪಟನೂ ದರ್ಪ ಸರ್ಪಗ್ರಾಹಿಯೂ ಐಶ್ವರ್ಯ ಗರ್ವಕಲುಷಿತನೂ ಪಶುವೂ ಆದ ಎನ್ನಲ್ಲಿ, ನೀವು ಗುಣವನರಸುವುದೇ ? ಬಳಲುವನೀ ಪ್ರಭುವೆಂದು ಎಳಸಿ, ತಣಿಸಲು ಬಗೆದೆ. ಅಯ್ಯೋ ! ನಿಮ್ಮ ನಿರ್ಧನನೆಂದು ತಿಳಿದ ಎನಗಿಂತ ಪಾಪಿ, ಓವೊ ಬೇರುಂಟೇ ? ಎನಗೆ–ಬಂಧು ನೀನೆ, ಭಾವಗಮ್ಯದೇವ ನೀನೆ ! ಸಂಗಮೇಶ ನೀನೆ, ಸೌಖ್ಯ ಸಂಪದಾಳಿ ನೀನೆ ! ನೀನೆ ಎನ್ನ ರಕ್ಷಿಸೆಂದು, ದೈನ್ಯದಿಂದ ಬೇಡಿದ. ಆಗ ಮೋಳಿಗೆ ಮಾರಯ್ಯನು, ಬಸವಣ್ಣನನ್ನು ಮನ್ನಿಸಿ, ಕೋಡಿವರಿದ ಕೃಪಾಕಟಾಕ್ಷದಿಂದ ನೋಡಿ, ತೆಗೆದಪ್ಪಿ ಬಿಗಿಯಪ್ಪಿ ಒಪ್ಪಿಕೊಂಡನು. ಸವಿನುಡಿಗಳಿಂದ ಸಂತಸವಾಂತ ಬಸವರಾಜನು, ನಿಜಮಂದಿರದತ್ತ ಹೋದನು. ದಯಾಮಯನಾದ ಮೋಳಿಗೆ ಮಾರಯ್ಯ, ಶರಣ ಜನರೊಡನೆ ಎಂದಿನಂತೆ ಸುಖವಾಗಿ ಇದ್ದ.

-: ೧೦ನೇ ಸಂಧಿಗೆ ಸಹಾಯಮಾಡಿದವರು :-

(ಶ್ರೀಮತಿ ಎಲ್ಲಮ್ಮಾ ಕೆಂಚಪ್ಪ ಗಡಗಿ ಮುಕ್ಕಾಂ. ರೋಣ)

— ೧೧ —

## ಪ್ರಸಾದ ಮಾಹಾತ್ಮ್ಯಂ

ತಾಮಸದ ತುಚ್ಛತೆಯ ತೂರಿ, ಶಿವಮಯವಾದ ಸತ್ವಭಾವವನ್ನು ಬೀರುವ, ಶಿವಪ್ರಸಾದದ ರಹಸ್ಯವನ್ನು, ಬೋಧಿಸಿದನು, ಶಿವರುದ್ರ ಗುರುವರ್ಯ:

ಶಿವ ಸಂಬಂಧವಾದ ಪ್ರಸಾದವು ಪೆಂಪಿನ ಸುಜ್ಞಾನ, ಸೊಂಪಿನ ಶಾಂತಿ, ಇಂಪಿನ ಸಮಸ್ತಸುಖ ಸೌಭಾಗ್ಯಗಳಿಗೆ ಸದನವಾಗಿದೆ; ಸಾಧನವಾಗಿದೆ. ಮತ್ತು ಚೇತನವಿತ್ತು, ಪಾಪವ ಪರಿಹರಿಸಿ, ಪಾರವಿಲ್ಲದ ಸಂಸಾರ ಸಾಗರದಿಂದ, ಪಾರುಗೊಳಿಸುವ ಪರಮ ಸಾಧನವಾಗಿದೆ. ಕಪಿಲ ಕಣಾದ (ಗೌತಮ)ರೇ ಮೊದಲಾದ ಮಹರ್ಷಿಗಳು, ಈ ಶಿವ ಪ್ರಸಾದದ ಭೋಗದಿಂದ, ದುಃಖ ಪರಂಪರೆಯ ಪರಿಹರಿಸಿಕೊಂಡು, ಪರಾತ್ಪರವಾದ ಕೈವಲ್ಯ ಪದವಿಯಲ್ಲಿ ಪರಿಶೋಭಿಸುತ್ತ ಇದ್ದಾರೆ.

ಶತಕೋಟಿ ಯಜ್ಞವ ಮಾಡಿ, ಮಿತಿಮೀರಿದ ಧರಾ ಧನಕನಕಗಳನ್ನು ದಾನ ಮಾಡಿದ ಸತ್ಫಲವೆಲ್ಲ, ಸದ್ಭಕ್ತಿಯಿಂದ ಸೇವಿಸಿದ ಸದಾಶಿವನ ಸುಪ್ರಸಾದವೊಂದರಿಂದಲೇ ಸಿದ್ಧಿ ಆಗುವುದು. ಸೇವಿಸುವ ಶಿವಪ್ರಸಾದವ ಭುವಿಗೆ ಬೀಳಿಸಿದರೆ, ಬಂದೊದಗುವುದು ಪಾಪ. ಇದರಿಂದ ನಿರಂತರ ಪಾಪಿಯಾಗಿ; ಘೋರ ನರಕಾಬ್ಧಿಯೊಳು ಬಿದ್ದು ಜೀವಿಸು ವನು. ಜಿಲ್ಲಿದಂತೆ ಎಲ್ಲವನೊಮ್ಮೆ ಸಲ್ಲಿಸಿದವನು, ಶಿವನಪ್ಪುದು ತಪ್ಪದು. ಗುರು ಪ್ರಸಾದ ಅಸ್ಥಿಗತಪಾಪವನ್ನೆಲ್ಲ ಕಳೆವುದು. ಹರಿಬ್ರಹ್ಮರು, ಹರಪ್ರಸಾದವ ಪರಮಭಕ್ತಿ ಯಿಂದ ಸವಿದು, ದಿವ್ಯಶಕ್ತಿವಂತರಾದರು. ಅಲ್ಪವೆನಿಸಿದ ಅಣು ತೃಣಕಾಷ್ಠವಾಗಲಿ, ಅಲಂಕಾರವೆನಿಸಿದ, ವಸ್ತ್ರ ವಿಭೂಷಣ ಮಣಿ ರತ್ನಾದಿಗಳಾಗಲಿ, ಗಂಧ ತೈಲಾದಿ ಲೇಪನ ದ್ರವ್ಯವಾಗಲಿ, ರಥ ತುರಂಗಾದಿ ವಾಹನಗಳಾಗಲಿ, ಒಟ್ಟಿನಲ್ಲಿ ತಾನು ಭೋಗಿಸುವ ಯಾವ ವಸ್ತುವೇ ಆಗಲಿ, ಅದನ್ನು ಶಿವಾರ್ಪಿತ ಮಾಡದೆ ಭೋಗಿಸಿದರೆ, ಅದು ಹೇಯ ವಾದ ಮಲದಂತೆಂದು, ಶಿವಪ್ರಸಾದ ಭೋಗಿಗಳು ನಿರ್ಣಯಿಸಿದ್ದಾರೆ. ಜಂಗಮ ಸ್ವಾಮಿಯ ತೃಪ್ತಿಗೆ, ಮಹಾಲಿಂಗ ಪ್ರಸಾದವೇ ಮೂಲವಾಗಿರುತ್ತದೆ. ಇದನ್ನು ಸಮ ಗ್ರವಾಗಿ ಜಂಗಮನು ತಾನು, ಶ್ರದ್ಧೆಯಿಂದ ಸ್ವೀಕರಿಸಬೇಕು. ಅಲ್ಲದೆ ಭಿನ್ನರುಚಿಯಿಂದ ಬಿಟ್ಟು, ಬೆಂಕಿ ಮೊದಲಾದವುಗಳಿಗೆ ಇತ್ತರೆ, ಅಂಥಾ ಜಂಗಮನು ಶಿವಧರ್ಮ ದ್ರೋಹಿ ಯಾಗಿ, ದುರ್ನರರಿಗೆ ಆಗುವ ನರಕದಲ್ಲಿ ಬಿದ್ದು, ನಿರಂತರ ನರಕಿಯಾಗುವನು.

ಭೋಗಿಸುವ ಅನ್ನವು ಅಶುದ್ಧ (ತಾಮಸ) ವಾದರೆ, ಮನೋಭಾವ (ಸಂಕಲ್ಪ) ಮಲಿನವಾಗುವುದು. ಮಲಿನವಾದ ಮನ (ದುಷ್ಟಸಂಕಲ್ಪ)ದಿಂದ, ಚಂಚಲ ವೃತ್ತಿ ಯುಳ್ಳ ಪಂಚೇಂದ್ರಿಯಗಳ ಸಂಚು, ಸಾಲಿಡುತ್ತದೆ. ಇಂತಾದಾಗ ಮತಿಗತವಾಗಿ. ಪುಣ್ಯ ಪಾಪಜ್ಞಾನ, ಶೂನ್ಯವಾಗುವುದು. ಈ ಕಾರಣದಿಂದಲೇ ಶಿವಭಕ್ತರಾದವರು, ಸತ್ವಶುದ್ಧಿಗೆ ಮೂಲವಾದ ಅನ್ನವನ್ನೆಲ್ಲಾ, ಶಿವಪ್ರಸಾದವಾಗಿ ಭೋಗಿಸಬೇಕೆಂಬ ಪದ್ಧತಿ ಯನ್ನು ಅವಲಂಬಿಸಿದ್ದಾರೆ. ಗುರುಲಿಂಗ ಜಂಗಮದಿಂದಾದ ತ್ರಿವಿಧ ಪ್ರಸಾದದಲ್ಲಿರುವ ಸ್ಥೂಲರೂಪವನ್ನು ಸ್ಥೂಲವಾದ ಇಷ್ಟಲಿಂಗಕ್ಕೂ, ಸೂಕ್ಷ್ಮರಸವನ್ನು ಸೂಕ್ಷ್ಮವಾದ ಪ್ರಾಣಲಿಂಗಕ್ಕೂ, ಭಾವಗಮ್ಯವಾದ ತೃಪ್ತಿಯನ್ನು ಭಾವಲಿಂಗಕ್ಕೂ ಸಮರ್ಪಿಸಿದ ಬಳಿಕ, ಮಿಕ್ಕ ಅಖಂಡ ಪ್ರಸಾದವನ್ನು, ಶಿವಪೂಜಾ ಜೀವನದ, ಚೈತನ್ಯವೃದ್ಧಿಗೆಂಬ ನಿಶ್ಚಯದಿಂದ ಭೋಗಿಸತಕ್ಕದ್ದು. ಶಿವಾರ್ಪಿತಮಾಡಿ ಸ್ವೀಕರಿಸುವ ಪ್ರಸಾದವು, ಪವಿತ್ರ

ವೆನಿಸಿದುದರಿಂದ ಎಂಜಲೆನಿಸುವುದಿಲ್ಲ. ಶಿವಾರ್ಪಣ ಮಾಡದೆ, ಹಾಗೆಯೇ ತಿನ್ನುವ ಅನ್ನವನ್ನು ಮಾತ್ರ, ಶಿವಮತಸ್ಥರೆಲ್ಲಾ ಎಂಜಲೆಂದು ತಿಳಿಯುತ್ತಾರೆ.

ಈ ಶಿವಪ್ರಸಾದದ ವಿಚಾರವಾಗಿ ಅನುಭವವೃದ್ಧರಾದ ಆರ್ಯರ ಹೇಳಿಕೆ ಏನೆಂದರೆ 'ಬೀಜದಿಂದ ಅಂಕುರ, ಅಂಕುರದಿಂದ ಬೀಜ' ಎಂಬ ನ್ಯಾಯದಂತೆ, ಭಕ್ತಿಗೆ ಶಿವಪ್ರಸಾದವು ಶಿವಪ್ರಸಾದಕ್ಕೆ ಭಕ್ತಿಯು ಪರಸ್ಪರ ಪೂರಕವಾಗಿರುವುದು; ಪ್ರೇರಕವಾಗಿರುವುದು. ಇವೆರಡರ ಕೂಟದಿಂದ ಮುಕ್ತಿಯೆಂಬ ಮಗ ಜನಿಸುವನು ಎಂದಿದ್ದಾರೆ. ಈ ಸರಣಿ ಹಿಡಿದು, ಸಕ್ರಮದಿಂದ ಸದ್ಭಕ್ತಿಯನ್ನೂ, ಸುಪ್ರಸಾದವನ್ನೂ ಪಡೆಯುವುದೇ ಹಿತಕರವಾಗಿದೆ. ಗುರುಕೃಪೆಯಿಂದ ಲಭಿಸಿದ ಪವಿತ್ರಪ್ರಸಾದದ ಇತಿಹಾಸವನ್ನೀಗ ಹೇಳುವೆನು.

## ಗೊಬ್ಬೂರು ಬಿಬ್ಬಿ ಬಾಚಯ್ಯನ ಕಥೆ :

ಇಳಾಭಾಗದಲ್ಲಿ ಗೌರವಾರ್ಹವಾದ ಗೊಬ್ಬೂರು ಎಂಬ ಗ್ರಾಮ ಉಂಟು. ಅಲ್ಲಿ ಶಿವಭಕ್ತಾಗ್ರಣಿಯಾದ ಬಿಬ್ಬಿಬಾಚಯ್ಯನು ನೆಲೆಸಿದ್ದ. ಈತನ ಚಾರಿತ್ರ್ಯವು ಸಾರವತ್ತಾದುದು; ವೀರ್ಯವತ್ತಾದುದು. ಲಿಂಗಾಂಗ ಸಾಮರಸ್ಯ ಪುಂಗವನಾಗಿ, ಕರುಣಾಂತರಂಗನಾಗಿ, ತ್ರಿವಿಧ ಪ್ರಸಾದದಿಂದ ತೃಪ್ತನಾದ ಬಿಬ್ಬಿಬಾಚಯ್ಯನು, ಅದ್ಭುತ ಮಹಾಮಹಿಮ ಅಷ್ಟೇಅಲ್ಲ; ದುರ್ವಾದಿವಾದವನ್ನು ಭಂಜಿಸುವದರಲ್ಲಿ ಮಹಾಸಮರ್ಥನೂ ಆಗಿದ್ದ. ಇವನ ಅಲಂಕಾರವನ್ನಷ್ಟು ಕೇಳಿ: ಪ್ರಮಥ ಗಣಂಗಳ ಪ್ರಶಸ್ತ ಪಾದುಕೆಗಳ, ತುಂಡು ತುಂಡುಗಳಿಂದ ಆದ, ಒಡವೆಗಳನ್ನು ತನ್ನ ಕೈ, ಮೈ, ಭುಜ ಮಸ್ತಕಗಳಲ್ಲೆಲ್ಲಾ ಒಲವಿನಿಂದ ತಾಳಿದ್ದನು. ಮೈಗೆಲ್ಲಾ ಗುರುಚರಣ ಧೂಳಿಯನ್ನು ಧರಿಸಿಕೊಳ್ಳುತ್ತಿದ್ದ. ಜಂಗಮರ ಬೀಳುಡೆಗಳೇ ಅವನ ಉಡು ತೊಡುವ ವಸ್ತ್ರಗಳು. ಊಟವ ನೋಡಿದರೆ ಗಣಾರಾಧನೆ ನಡೆವಲ್ಲಿಗೆ ಹೋಗಿ, ಜಂಗಮರೊಕ್ಕು ಮಿಕ್ಕ ಪ್ರಸಾದವನ್ನೆಲ್ಲಾ, ಬಿಡದಂತೆ ಕೈಯಿಂದಾಯ್ದು, ಬಂಡಿಯಮೇಲೆ ತುಂಬಿಕೊಂಡು ತಂದು ಸೇವಿಸುವುದೇ ಬಿಬ್ಬಿ ಬಾಚಯ್ಯನ ವ್ರತ. ಇವನ ಈ ವಿಚಿತ್ರಾವಸ್ಥೆಯನ್ನು ಕಂಡ ಪುರಜನರು ಕುಪಿತರಾದರು; ಕೆಲವರು ಗುಜುಗುಜಿಸಿದರು, ಮತ್ತೆ ಕೆಲರು ಬಾಯಿಗೆ ಬಂದಂತೆ ನಿಂದಿಸಿದರು. ಆಗ ಒಂದು ದಿನ ಗೊಬ್ಬೂರಿನಲ್ಲಿಯೇ ನಡೆಯುತ್ತಿದ್ದ ಗಣಾರಾಧನೆಗೆ ಬಿಬ್ಬಿಬಾಚಯ್ಯನು ಉಬ್ಬಿದ ಉಲ್ಲಾಸದಿಂದ ಹೋದ. ಅಲ್ಲಿ ಮಿಕ್ಕ ಭಕ್ತಿಯಿಂದ ಮಾನ್ಯಜಂಗಮರಿಗೆ ಮಣಿದು, ಅವರ ಮಿಕ್ಕ ಪ್ರಸಾದವನ್ನೆಲ್ಲಾ ಎಂದಿನಂತಾಯ್ದು, ತಂದಿಕ್ಕಿದನು ಬಂಡಿಯೊಳಗೆ. ಪ್ರಸಾದದ ರಥ ಸಾಗಿತು. ಅದರ ಮುಂದುಗಡೆ ಮುಂದೈಸಿದ ಶಿವಭಕ್ತ ಸಂದಣಿ, ಸಂಭ್ರಮದಿಂದ ಆಡುತ ಪಾಡುತ ಜಯಕಾರ ಮಾಡುತ್ತಿತ್ತು. ಹಾರಾಡುವ ಧ್ವಜ, ತೋರಿ ಥಳಥಳಿಸುವ ಬೆಳ್ಗೊಡೆ, ಪೂರೈಸಿ ಭೋರ್ಗರೆವ ವಿವಿಧ ವಾದ್ಯಗಳ ಕಳಕಳ ಧ್ವನಿ, ದಿಕ್ಕೆಂಟ ತುಂಬಿ ತುಳುಕಿತು. ಇಂಥ ಸಂಭ್ರಮದೊಡನೆ, ಪ್ರಸಾದದ ರಥೋತ್ಸವ, ಪಥವಿಡಿದು ಪುರ ಪ್ರವೇಶಮಾಡುತ್ತ ಇರುವಲ್ಲಿ:

ಪ್ರಸಾದದ ಪೆರ್ಮೆಯನರಿಯದೆ ಪರಿತಪಿಸುತ್ತಿದ್ದ ಬಲ್ಪಿನ ಬಾಹ್ಮಣರು, ಪಥವಿಡಿದು ಬಂದಾ ರಥವ ತಡೆಗಟ್ಟಿ, ರಥವಿದು ಊರ ಹೊಗಲಾಗದು; ಅವಸರವೇಕಿಂತು ನಿಲ್ಲು ! ಅಂಥ ಅದ್ಭುತವಿದೇನು ಹೇಳು ! ಮಿಗೆ ಮೆಚ್ಚಿದ ನೀಚರ ನೆರವಿಯ ಸೇರಿಸಿಕೊಂಡು, ಮನಬಂದಂತೆಲ್ಲಾ ಮೆರೆದಾಡುತ್ತಿರುವೆ. ಹೀಗೆ ಆಚರಿಸುತ್ತಿರುವ ಮಹೋತ್ಸವವೇನಾದರೂ–ಭಾವಿಸಿದ ಕಾರ್ಯ ಕೈಗೂಡಿದುದಕ್ಕೋ ? ಅಥವಾ ಭಕ್ತನೇನಾದರೂ ಅಳಿದು ಹೋದುದಕ್ಕೋ ? ಮತ್ತಾವುದಾದರೂ ಅವಸರದ ಒಸಗೆಯೋ ? ಇಲ್ಲವೆ ಶೂರವೈರಿಯನ್ನು ಸದೆದಿಕ್ಕಿದ, ವೀರವಿಕ್ರಮ ದ್ಯೋತಕವಾದುದೋ ? ಏನಿದು, ಹೇಸದೆ ಹೆದರದೆ ಶೂದ್ರೋಚ್ಛಿಷ್ಟವ ನೀನು ತಿನ್ನುವುದಲ್ಲದೆ, ಅದರ ರಥೋತ್ಸವವನ್ನೇ ತಂದು, ಶುದ್ಧರಾದ ಹಾರುವರ ಊರ ಕೇರಿಯನ್ನೆಲ್ಲಾ, ಹಸಗೆಡಿಸಲು ಹವಣಿಸುತ್ತಿರುವೆ. ಈಗ ನಮ್ಮೀ ಒಳ್ಳೆಯ ಮಾತಿಗೆ, ಸುವಿವೇಕಿಯಾದರೆ ನೀನು ತಡವಾಡದೆ ತೊಲಗುವುದು ಇಲ್ಲಿಂದ-ಎಂದರು. ಕೇಳಿದೊಡನೆ ರೋಷ ಭೀಷಣನಾದ ಬಿಬ್ಬಿಬಾಚರಸನು ಛಡ ಛಡ (ಅತ್ಯನುಚಿತ) ಪಾಪ ಕರ್ಮರಿರಾ! ಘೋರಾಪಾರ ದುಷ್ಕಲ ದೂಷಿತರಿರಾ!! ಗೌತಮಾದಿ ಮಹರ್ಷಿಗಳ ಶಾಪಹತರಾಗಿ, ಪಾಪನಿರತರಾದ ನೀವು ನೈಜವನರಿಯಲು ಅರಿದೆ, ಮಾನ್ಯವೂ ಮಹೋದಾತ್ತವೂ ಆದ ವೀರಶೈವವ ಸೇರದೆ, ಏಕಿಂತು ಉಬ್ಬಿ ನಡೆಯುವಿರಿ ? ಶಿವನ ಭಕ್ತರೇನು ಜಗದೊಳಗೆ ಜಾವಳ (ಶೂದ್ರ)ರೇ ? ಕುಲಜರೆಂಬ ನೀವು ಕುಲಗೆಟ್ಟ ಸತಿಯೊಂದಿಗೆ (ಎಂದರೆ ದೀಕ್ಷಾದಿ ವೇದೋಕ್ತ ಸಂಸ್ಕಾರವೊಂದೂ ಇಲ್ಲದೆ ಕುಲಹೀನಳಾದವಳೊಂದಿಗೆ) ಕೂಡಿ ನಲಿದಾಡಿ ಬಾಳುತ್ತ ಇರುವಾಗ, ವೇಧಾ ಮನು ಕ್ರಿಯೆಗಳೆಂಬ ದೀಕ್ಷಾತ್ರಯದಿಂದ, ಸ್ತ್ರೀ ಪುರುಷರ ಮೂರು ದೇಹಗಳಲ್ಲಿ ಮುಸುಕಿರುವ ಮೂರು ಮಲವನೀಗಿ (ಎಂದರೆ ಮಾಂಸ ಪಿಂಡವ ನೀಗಿ ಮಂತ್ರ ಪಿಂಡಿಗಳಾಗಿರುವ) ನಿರ್ಮಲವಾದ ನಿರ್ದುಷ್ಟ ಶಿವಭಕ್ತ ಸಂತಾನವನ್ನು, ಕುಲಹೀನರೆಂದು ಆಡಿಕೊಳ್ಳುವುದು ಇದೆಷ್ಟು ಆಶ್ಚರ್ಯ ! ಗುರುಪ್ರಸಾದದ ಪವಿತ್ರತೆಯನರಿಯಲಾರದೆ, ಯಾವನು ಎಂಜಲೆನ್ನುವನೋ. ಅವನೇ ದುರ್ಜೀವಿ. ಅಂಥವನು ಜನ್ಮಜನ್ಮದಲ್ಲಿ ನರಕದ ಮನೆಯೊಳಗೆ ಜೀವಿಸುವುದು ಸಿದ್ಧಾಂತ. ಆದುದರಿಂದ ಭವಿಕುಲವೆಂಬ ಅರಣ್ಯಕ್ಕೆ ದಾವಾನಲವಾದ ಶಿವಪ್ರಸಾದವಿದನ್ನು; ಜೋಕೆ ಮುಟ್ಟದಿರಿ: ತಡೆಗಟ್ಟದಿರಿ ನೀವು-ಎಂದ. ಆಗ ಕಿಡಿಕಿಡಿಯಾದ ಬ್ರಾಹ್ಮಣರೆಲ್ಲಾ ಸೇರಿ, ಮಾರಾ ಮೋರಿಯ ಹೋರಾಟಕ್ಕೆ ಅಣಿಯಾದರು. ಭವಾರಣ್ಯಕ್ಕೆ ಬೇಗೆಯಾದ ಶಿವಪ್ರಸಾದವನ್ನು, ಬಿಬ್ಬಿಬಾಚಯ್ಯ ತನ್ನ ಕೈಯಿಂದ ಮೊಗೆದೆತ್ತಿ–ಪಟ್ಟಣವಿದನ್ನು ಸುಟ್ಟುರುಹು; ಎಚ್ಚರಿಕೆ–ಎಂದು ಕೆದರಿಬಿಟ್ಟ ! ಆ ಕ್ಷಣವೇ ಅದು, ಅಗ್ನಿಯಾಗಿ ಹರಡಿ ಆವರಿಸಿ ಹೊಗೆಬೀರಿ ಹೊತ್ತಿಮುತ್ತಿ, ಛಟ ಛಿಟಿಲೆಂದು ಛಟಪಟಿಸಿ ಕೆಂಗಿಡಿಗೆದರಿ, ಆಕಾಶದತ್ತ ಭೋರನೆ ಹೊಮ್ಮಿ ಹೊಡಕರಿಸಿ, ಬುರ್‌ಭುರ್ ಭುಗಿಲೆಂಬ ದಳ್ಳುರಿಯ ಜ್ವಾಲಾಮಾಲೆ, ಮುಸಗಿ ನಾಲಗೆಚಾಚಿ ತ್ರಿಪುರವನೊಮ್ಮೆ ಮುತ್ತಿದ, ಹರನ ಹಣೆಗಣ್ಣ ಅಗ್ನಿಯಂತೆ, ಊರನಾವರಿಸಿತು ಕ್ಷಣಾರ್ಧದಲ್ಲಿ. ಆಗ ಊರಲ್ಲೆಲ್ಲಾ ಯಾರ ಬಾಯಲ್ಲಿ ನೋಡಿದರೂ, ಎಲೆಲೆಲೆಲೇ ಬೆಂಕಿ ಬಂದುದು, ಬೆಂದುದು ನಿಲ್ಲಲೀಯದು, ತಲ್ಲಣಗೊಳಿಸುವುದು: ನಿಲ್ಲದೋತು, ಅಲ್ಲಿ ಓಡು. ಅಯ್ಯೋ ನೋಡಲ್ಲಿ

ಮನೆ ಬೆಂದಿತು, ಧನ ಧಾನ್ಯಗಳ ತೆಗೆಯೋ, ಎಳೆಮಕ್ಕಳನೆತ್ತಿಕೋ–ಎಂಬ, ಹಾರುವರ ಆರ್ತಧ್ವನಿ ಪೂರಾಯವಾಗಿತ್ತು. ಹರನ ಹಣೆಗಣ್ಣಿಂದ, ಉರಿವ ತ್ರಿಪುರವ ನೋಡಿದ ದೇವತೆಗಳು ಹರುಷಗೊಂಡಂತೆ ಊರ ಮುತ್ತಿದ ಶಿವಪ್ರಸಾದದುರಿಯ ಕಂಡಭಕ್ತರು, ಬಲು ಹರುಷಪಟ್ಟರು. ಹೊತ್ತಿದುರಿಯನ್ನು ಹತ್ತಿಕ್ಕುವುದಕ್ಕಾಗಿ ಮಾಡಿದ ವಿಪ್ರರ ಪ್ರಯತ್ನವೆಲ್ಲಾ–ಗುಡ್ಡಕ್ಕೆ ಕಲ್ಲ ಹೊತ್ತಂತೆ–ವಿಫಲವಾಯಿತು. ಭಂಗಪಟ್ಟು ಬಣ್ಣಗೆಟ್ಟು ಬೆಪ್ಪಾದ ಬ್ರಾಹ್ಮಣರು, ಭರದಿಂದ ಬಂದು ಬಿಬ್ಬಿಬಾಚಯ್ಯನ ಅಡಿಗೆರಗಿ, ತಡೆಯದೆ ಬೇಡಿದರು ಇಂತು: ಕಂದನ ಅಪರಾಧವನ್ನು ತಂದೆ ಮನ್ನಿಸುತ ಮುದ್ದಾಗಿ ಪಾಲಿಸುವಂತೆ, ಇಂದೆಮ್ಮ ತಪ್ಪುಗಳ ಮನ್ನಿಸುತ, ಎಲೆ ಶರಣಾಗತ ಬಂಧುವೆ ! ದೀನಜನರಿಗಾದ ಹಾನಿಯನ್ನೆಲ್ಲ ಕಳೆಯಯ್ಯಾ ಕರುಣೀ ! ಅಗೋ ನೋಡಲ್ಲಿ, ಅಮಳಪ್ರಸಾದದಗ್ನಿಗೆ ಅಗ್ರಹಾರವೆಲ್ಲಾ ಆಹುತಿಯಾಗುತ್ತಿದೆ ದೀಪಕ್ಕೆರಗಿದ ಜಿಟ್ಟೆಗಳಂತೆ, ದ್ವಿಜ ಸಮಾಜ ಬೆಂದು ನೊಂದು ಕರಿಮುರಿಗೊಳ್ಳುತ್ತಿದೆ. ಮೋಸಗಾರರೂ ಈಶಭಕ್ತನಿಂದ ಕಷ್ಟ ಆದ, ಎಮ್ಮಲ್ಲಿ ಲೇಸನರಸದೆ. ನಿಮ್ಮ ಸುಗುಣವ ಮೆರೆಸಿ, ಪರಿಪಾಲಿಸುವುದು ಎನ್ನುತ್ತ, ಮತ್ತೆ ನಮಿಸಿದರು. ಆಗ ಶಿವಶರಣರ ಶಿರೋಮಣಿಯಾದ ಬಿಬ್ಬಿಬಾಚಯ್ಯನು ಬ್ರಾಹ್ಮಣರಿಗೆ ಅಭಯವಿತ್ತು, ಅಗ್ನಿಯಾಕಾರವ ಧರಿಸಿದ ದಿವ್ಯಪ್ರಸಾದದ ತೇಜವನ್ನು ಬರಮಾಡಿಕೊಂಡು, ಅದನ್ನು ತನ್ನಾ ಶಿರದೊಳಗೆ ಅಡಗಿಸಿದ. ಮತ್ತು ಸುಟ್ಟುಪಟ್ಟಣವನ್ನೆಲ್ಲಾ ಮುನ್ನಿನಂತೆ ಸೃಷ್ಟಿಸಿ, ಕೆಟ್ಟಳಿದ ಜೀವಿಗಳಿಗೆ ಅಸುವ ಇತ್ತು, ಪಾಲಿಸಿದನು ಬಿಬ್ಬಿಬಾಚಯ್ಯ.

೧೧ನೇ ಸಂಧಿಗೆ ಸಹಾಯಮಾಡಿದವರು

**(ಶ್ರೀಮತಿ ಎಲ್ಲವ್ವಾ ಶಿವಲಿಂಗಪ್ಪ ಕಾತರಕಿ)**

— ೧೨ –

## ವಿಭೂತಿ ಮಹಾತ್ಮ್ಯಂ :

ಪರಶಿವನ ಐದು ಮುಖಗಳೊಳಗೆ ಒಂದೊಂದು ಮುಖದಿಂದ, ಒಂದೊಂದು ಬಣ್ಣದ, ಬೇರೆ ಬೇರೆ ಹೆಸರಿನ ಐದು ಗೋವುಗಳು ಜನಿಸಿದುವು. ಆ ಆ ಗೋವಿನ ಗೋಮಯದಿಂದಾದ ಭಸ್ಮವು ಸಹ, ಐದು ಬಗೆಯಾಗಿ, ಬೇರೆ ಬೇರೆ ಫಲಗಳನ್ನು ಕೊಡತಕ್ಕದ್ದಾಗಿದೆ. ಇದರ ವಿವರಣೆಗಾಗಿ ಈ ಕೆಳಗಿನ ಕೋಷ್ಟಕವನ್ನು ನೋಡಿ:

| ಶಿವನ ಪಂಚ ಮುಖಗಳು– | ೧ ಸದ್ಯೋಜಾತ | ೨ ವಾಮದೇವ | ೩ ಅಘೋರ | ೪ ತತ್ಪುರುಷ | ೫ ಈಶಾನ |
|---|---|---|---|---|---|
| ಗೋವಿನ ಹೆಸರು– ಈ ಗೋವಿನ ವರ್ಣ- | ನಂದಾ ಎಂಬ ಗೋವು ಕಪ್ಪು | ಸುಭದ್ರಾ ಎಂಬಗೋವು ಬೂದ | ಸುರಭಿ ಎಂಬ ಗೋವು ಕೆಂದ | ಸುಶೀಲಾ ಎಂಬಗೋವು ಬಿಳಿಯು | ಸುಮನಾ ಗೋವು ಮಿಶ್ರ |
| ಆ ಗೋವಿನ ಗೋಮಯದಿಂದಾದ ಭಸ್ಮದ ಹೆಸರು:_ | ವಿಭೂತಿ | ಭಸಿತ | ಭಸ್ಮ | ಕ್ಷಾರ | ರಕ್ಷಾ |
| ಆ ಆ ಭಸ್ಮಧಾರಣ ಫಲ:_ | ಸರ್ವಾರ್ಥಸಿದ್ಧಿ ಸಂಪತ್ತು, ಸುಖ | ಸಾಮರ್ಥ್ಯ, ಆಜೀಯತ್ವ | ಜನ್ಮ ಮರಣ ನಾಶ, ಮುಕ್ತಿ | ಪ್ರಥಮ ಪದವಿ | ಬ್ರಹ್ಮಭೂತ ಪ್ರೇತಾದಿ ನಿವಾರಣ, ನಿರ್ವೃತ್ತಿ |

ಇಂತೀ ಭಸ್ಮದ ವಿಷಯವೆಲ್ಲ ವೇದೋಕ್ತವಾಗಿ ಇರುವುದು. ಸರ್ವಾಲಂಕಾರವಾದ ಈ ಭಸ್ಮವನ್ನು, ಯಾಜ್ಞವಲ್ಕ್ಯ, ಜಮದಗ್ನಿ, ಪರಾಶರ, ಕಶ್ಯಪ, ಅತ್ರಿ, ಅಗಸ್ತ್ಯ ಇವರೇ ಮೊದಲಾದ ಮಹರ್ಷಿಗಳು ಮತ್ತು ಹರಿ ಬ್ರಹ್ಮಾದಿ ದೇವತೆಗಳು, ವಿಶ್ವಾಸದಿಂದ ತ್ರಿಕಾಲಧಾರಣ ಮಾಡಿ, ಪರಮಾಯುಷ್ಯ ಹೊಂದಿದರು ಎಂಬ ವಿಷಯ "ಭೂತ್ಯೈ ನ ಪ್ರಮದಿತವ್ಯಂ" "ತ್ರಿಯಾಯುಷಂ ಜಮದಗ್ನೇಃ" ಇತ್ಯಾದಿ ವೇದಮಂತ್ರಗಳಿಂದ ಗೊತ್ತಾಗುತ್ತದೆ. ಅಲ್ಲದೆ "ಸ ಏಷ ಭಸ್ಮಜ್ಯೋತಿಃ" ಎಂದರೆ ಜ್ಯೋತಿ ರೂಪವಾದ ಭಸ್ಮವೇ ಆ ಶಿವನೆಂದು, ವೇದಾಗಮಗಳಲ್ಲಿ ಬಂದಿದೆ. ಯಾವನಾದರೂ, ವರ ವಿಭೂತಿಯ ಧರಿಸದೆ ಪರಮುಕ್ತಿಯ ಪಡೆವೆನೆಂದುದಾದರೆ, ಮಹಾವಿಷವ ಕುಡಿದು ಬದುಕಿದೆನೆಂಬವನ ಮಾತಿನಂತೆ, ಆ ಮಾತು ನಗೆಗೇಡಾದುದೇ ಸರಿ! ಅಂದವಾದ ಭಸ್ಮವ ನಿಂದಿಸುವ ಮನುಜನು ಶಿವನಿಂದಕ. ಆ ಭಸ್ಮವನೊಲಿದು ಧರಿಸುವಾತನೇ ಲಿಂಗಧಾರಿ! ಭಸ್ಮ ಧರಿಸದ ಹಣೆ ಇನ (ಸೂರ್ಯ) ಇಲ್ಲದ ದಿನದಂತೆ, ತಾವರೆ ಇಲ್ಲದ ತಣ್ಗೊಳದಂತೆ, ಶಶಿ ಇಲ್ಲದ ನಿಶಿ (ರಾತ್ರಿ) ಯಂತೆ ಅಮಂಗಳವಾದುದು. ತೀರ್ಥ ಸ್ನಾನದಿಂದಾಗುವ ಫಲವಾದರೋ ನಿರಂತರವಾದುದಲ್ಲ; ಅಂತೆಯೇ ಕೊನೆಗದು ವ್ಯರ್ಥ. ಭಸ್ಮ ಸ್ನಾನದ ಫಲ ಶಾಶ್ವತ; ಅಂತೆಯೇ ಅದು ಸಾರ್ಥಕವಾದುದು. ಈ ಬಗೆಗೆ ನಿದರ್ಶನವಾದ ಕಥೆಯೊಂದ ಹೇಳುವೆನು:

## ವ್ಯಾಧ ದಂಪತಿಗಳ ಚಿತಾಭಸ್ಮ ವ್ರತದ ಕಥೆ:

ಸುಂದರ ನಂದನವನಗಳಿಂದ ಅಂದವಾದ ಪಾಂಚಾಳ ದೇಶದಲ್ಲಿ, ಶಿವ ಮಂದಿರಗಳು ಶಿವಭಕ್ತಶೀಲರು ಧರ್ಮಾಚಾರಲೋಲರು ನೀತಿ ನಿಪುಣರು, ಇವರೆಲ್ಲಾ ತುಂಬಿ ತುಳುಕುತ್ತ ಇದ್ದಾರೆ. ಈ ದೇಶವನ್ನಾಳುವ ಅರಸು. ಸಿಂಹಕೇತು ಮಹಾರಾಜ. ಇವನೊಮ್ಮೆ ಬೇಟೆಗೆಂದು ಬೇಟೆಗಾರರೊಡನೆ ಕಾನನಕೆ ಬಂದ. ಅಲ್ಲಿ ಒಂದು ಶಿವಲಿಂಗ ಇತ್ತು. ನೋಡಿದ ಬೇಡನದನ್ನು ಸಿಂಹಕೇತು ಮಹಾರಾಜನಿಗೆ ತೋರಿಸಿದ. ಆಗ

ಆ ಮಹಾರಾಜನು—ಭಕ್ತಿಯಿಂದ ಈ ಲಿಂಗವ ಅರ್ಚಿಸಿದರೆ ಅಖಿಲೇಷ್ಟಸಿದ್ಧಿ ಆಗುವುದು ಎಂದು ಪರಿಹಾಸದಿಂದ ನುಡಿದ. ಹಾಗಾದರೆ ಇದರ ಅರ್ಚನೆಯ ವಿಧಾನ ಹೇಗೆ—ಎಂದು ಮತ್ತೆ ಕೇಳಿದ ಬೇಡನಿಗೆ, ಹೆಣದ ಬೂದಿಯೇ ಇದರ ಪೂಜೆಗಾಗಬೇಕು; ಈ ಬೂದಿಯ ಲಿಂಗಕ್ಕೆ ಲೇಪಿಸದೆ ಎಡೆಮಾಡಬಾರದು—ಎಂದು, ಮತ್ತೂ ಹಾಸ್ಯದಿಂದಲೇ ಮಹಾರಾಜ ಹೇಳಿದ. ಬೇಡನೂ ಅದರಂತೆ ನಂಬಿ, ತನ್ನ ಸತಿಯೊಂದಿಗೆ ಆ ಲಿಂಗಪೂಜೆಯ ಕೈಕೊಂಡ. ವಿಶ್ವಸ್ತರಾದ ಭಕ್ತರಿಗೆ ವಿಪತ್ತೆಂತೇ? ಸತಿಪತಿಗಳಿಬ್ಬರೂ ಚಿತೆಯ ಬೂದಿಯ ಪ್ರತಿನಿತ್ಯ ಸಂಪಾದಿಸಿಕೊಂಡು, ಭಕ್ತಿಮಿಗೆ ಶಿವಪೂಜೆ ಮಾಡುತ್ತ ಇದ್ದರು. ಹೀಗೆ ಕೆಲಕಾಲ ಹೋಯಿತು. ಇವರ ಭಕ್ತಿ ಪರೀಕ್ಷೆಗಾಗಿಯೋ ಅಥವಾ ಭಕ್ತರ ಬಯಕೆಯ ಕರುಣಿಸಲೋಸುಗವೋ, ಅವರಿಗೊಂದು ದಿನ ಹೆಣದ ಬೂದಿ ದೊರಕ ದಂತೆ, ಶಿವ ಮಾಡುತ್ತಾನೆ. ಆಗ ವ್ರತಭಂಗ ಭಯದಿಂದ ಬಹಳವಾಗಿ ವ್ಯಥೆಪಡುತ್ತಿದ್ದ ತನ್ನ ಪ್ರಿಯನಿಗೆ, ಹೆಂಡತಿ ಹೇಳುತ್ತಾಳೆ:— ಪ್ರಿಯನೆ! ಇದಕೇಕೆ ಇಷ್ಟು ಯೋಚನೆ? ಈಗೆನ್ನ ದೇಹವನ್ನೇ ಸುಟ್ಟುಬಿಡುವೆ. ಈ ಬೂದಿಯ ನೀನು ಶಿವಗರ್ಪಿಸು—ಎಂದಳು. ಮತ್ತು ಹಾಗೆಯೇ ಆಕೆ, ಮನೆಯಲ್ಲಿ ಒಂದೆಡೆಗೆ ಅಗ್ನಿಯ ಪುಟಮಾಡಿ, ಅದರಲ್ಲಿ ಸುಟ್ಟು ಭಸ್ಮವಾದಳು. ಈ ಭಸ್ಮವ ಲಿಂಗಕ್ಕೆ ಲೇಪಿಸಿದ ಬೇಡನು, ತಲೆಗೇರಿದ ಮಿಕ್ಕ ಭಕ್ತಿಯಲ್ಲಿ ಮೈ ಮರೆತಿದ್ದ. ಈ ಸಂದರ್ಭದಲ್ಲಿ ಅವನಿಗೆ ತನ್ನ ಸತಿ ಸುಟ್ಟು ಹೋದ ಳೆಂಬ ಪರಿವೆಯೇ ಇರಲಿಲ್ಲ. ಅವನು ಎಂದಿನ ಹಾಗೆ-ಎಲೆ ಪ್ರಿಯೆ! ತಾ ಬೇಗ ನೈವೇದ್ಯವ!—ಎಂದನು. ಒಡನೆ ಆ ಸತಿ ದಿವ್ಯಕನ್ಯೆಯಂತಾಗಿ ನಮಿಸಿ ನಿಂತಳು—ಪತಿಯ ಪಕ್ಕದಲ್ಲಿ. ದಂಪತಿಗಳಾಗ ಇಂಪಾದ ಷಡ್ರಸಾನ್ನವ ಶಿವಗೆ ನಿವೇದಿಸಿದರು, ಬಳಿಕ ಅಚಲವಾದ ಅಪಾರ ಭಕ್ತಿಯಿಂದ ಶಿವನ ದಿವ್ಯ ಲೀಲಾ ಮಹಿಮೆಯ ಮನವಾರೆ ಪಾಡಿದರು. ಮೆಚ್ಚಿದ ಮಹಾದೇವ, ಪಾರ್ವತಿಯೊಂದಿಗೆ ಪ್ರತ್ಯಕ್ಷ ಆದನು. ಲಿಂಗಕ್ಕಾಗಿ ತನ್ನ ಅಂಗವನ್ನೇ ಆಹುತಿಯಿತ್ತ ಆ ವ್ಯಾಧಪತ್ನಿಯನ್ನು, ಶಿವ ಬಹಳವಾಗಿ ಕೊಂಡಾಡಿ ಮುಂದಾಡಿದನು, ಮತ್ತು ನಿಮ್ಮ ವರವ ಬೇಡುವುದು ಎನಲು, ಆ ದಂಪತಿಗಳು:— ದೇವಾಧಿದೇವನೆ! ಚಿತಾವಿಭೂತಿಯ ಈ ನಿನ್ನ ವ್ರತಕ್ಕೆ ನಮಗೆಂದಿಗೂ ಭಂಗಬರದಂತೆ ನಡೆಸುವುದು—ಎಂದು ಬೇಡಿದರು. ಅವರ ಈ ನಿರಪೇಕ್ಷಬುದ್ಧಿಗೆ ಮೆಚ್ಚಿದ ಶಂಕರ. ಅವರಿಗೆ ಕೈವಲ್ಯವಿತ್ತು ಕಾಪಾಡಿದನು. ಸಿಂಹಕೇತು ಮಹಾರಾಜನಾಗ—ನಾನು ಹಾಸ್ಯ ಕ್ಕಾಗಿ ಆಡಿದುದನ್ನೇ, ಈ ವ್ಯಾಧ ದಂಪತಿಗಳು ಸಾಧಿಸಿ ಸಿದ್ಧಿಪಡೆದರು. ನಾನೂ ಆ ನಿಜಾಚರಣೆಯಿಂದ ಶಿವಸನ್ನಿಧಿಯ ಕಾಣಬೇಕೆಂದು ಬಯಸಿ ಬಂದು, ಆ ವ್ಯಾಧ ದಂಪತಿಗಳಿಗೆ ನಮಿಸಿ, ಶಿವನ ಒಲಿಸಿ, ಶಿವಸುಖದಿಂದ ರಾಜ್ಯವಾಳಿದನು.

-: ೧೨ನೇ ಸಂಧಿಗೆ ಸಹಾಯಮಾಡಿದವರು :-

( ಶ್ರೀ ಫಕೀರಪ್ಪ ಕಡ್ಲಿ ಬಿಷ್ಟಿ )

— ೧೩ —

## ರುದ್ರಾಕ್ಷ ಮಹಾತ್ಮ್ಯಂ :

ರಾಜನೊಬ್ಬನ ಕೃಪಾ ಕಟಾಕ್ಷದ ಆಶ್ರಯದಲ್ಲಿದ್ದು ಜೀವಿಸುವ ಮಾನವರಿಗೆ, ಮಹಾಸಂಪತ್ತು ಒದಗುವುದು ನಿಶ್ಚಯ. ಎನ್ನುವಾಗ, ಹದಿನಾಲ್ಕು ಭುವನಾಧಿಪತಿಯಾದ ಶಿವನ, ಸರ್ವೋತ್ಕೃಷ್ಟವಾದ ದಿವ್ಯ ರುದ್ರಾಕ್ಷಿಯ ಆಶ್ರಯದಲ್ಲಿರುವ (ರುದ್ರಾಕ್ಷ ಧರಿಸಿದ) ಮಾನವನಿಗೆ, ಇಹ–ಪರ ಸುಖ ಶಾಂತಿ ಒದಗುವುದೇನು ದೊಡ್ಡ ಮಾತಲ್ಲ.

ತ್ರಿಪುರವ ಸುಡುವ ಸಮಯದಲ್ಲಿ, ಮೂರು ಕಣ್ಣಿಂದ ಮಹಾದೇವ ಎವೆಯಿಕ್ಕದೆ ನೋಡುವಾಗ, ಪಳಪಳನೆ ಇಳೆಗೆ ಉದುರಿದುವು ಮುವ್ವತ್ತೆಂಟು ಕಂಬನಿಗಳು. ಇವುಗಳೇ, ಭಗವಾನ್ ರುದ್ರನ ಅಂಶದಿಂದ–ಅವನ ಗುಪ್ತ ಮುಖ ಕಮಲದಂತೆ ರುದ್ರಾಕ್ಷಗಳಾದುವು ಭಕ್ತ ಹಿತಕ್ಕಾಗಿ. ಹೇಗೆಂದರೆ ರುದ್ರನ ಬಲದ ಭಾನು ನೇತ್ರದಿಂದ ಉದುರಿದ ಆ ಹನ್ನೆರಡು ಹನಿಗಳು– ಶುಭ್ರವರ್ಣ ಶೋಭಿತ ರುದ್ರಾಕ್ಷಗಳಾದುವು ಎಡದ ಚಂದ್ರ ನೇತ್ರದಿಂದ ಉದುರಿದ ಹದಿನಾರು ಹನಿಗಳು–ಕೆಂಪು ಬಿಳಿಪು ಬಣ್ಣದ ರುದ್ರಾಕ್ಷಗಳಾದುವು; ಹಣೆಯ ಅಗ್ನಿ ನೇತ್ರದಿಂದ ಉದುರಿದ ಹತ್ತು ಹನಿಗಳು– ಕಪ್ಪು ಬಣ್ಣದಿಂದೊಪ್ಪುವ ರುದ್ರಾಕ್ಷಗಳಾದುವು. ಈ ರೀತಿಯಾದ ಮುವ್ವತ್ತೆಂಟು ರುದ್ರಾಕ್ಷ ಮಣಿಗಳೆಲ್ಲ, ಪಾಪಪಲ್ಲಟ ಮಾಡಲು ದಕ್ಷವಾಗಿರುವುವು. ಇದೀ ರುದ್ರಾಕ್ಷವೇ-ಚಿನ್ನಾದ; ಅದರ ಮುಖವೇ ಚಿದ್ಬಿಂದು; ಅದರೊಳಗಿನ ನಾಳವೇ-ಚಿತ್ಕಳೆ. ಹೀಗೆ ನಾದಬಿಂದು ಕಳಾಮಯವಾದ ರುದ್ರಾಕ್ಷವನ್ನು, ಸೂತ್ರದೊಡನೆ ಧರಿಸಿದವನಾವನಾದರೂ ಭೂರುದ್ರನಾಗುವನು. ಅರಸರಾದವರು ಅಶ್ವವ ಅಂಗೀಕರಿಸುವ ಮೊದಲು, ಅದರಲ್ಲಿ ಮಂಗಳವಾಗಿ ಕಂಗೊಳಿಸುವ 'ದೇವಮಣಿ' ಮತ್ತು 'ಕಂಠಾಭರಣ'- ಈ ಎರಡು ಚಿಹ್ನೆ (ಸುಳಿ)ಗಳಿದ್ದರೆ, ಇನ್ನಾವ ದೋಷವನ್ನೂ ಅರಸದೆ, ಆ ಕುದುರೆಯ ವರಿಸುವಂತೆ, ದಿವ್ಯ ಮತ್ತು ಭವ್ಯ–ಈ ಎರಡು ಲಕ್ಷಣವುಳ್ಳ ರುದ್ರಾಕ್ಷವನ್ನು ಭಕ್ತರು ಧರಿಸುತ್ತಾನೆ, ರುದ್ರಾಕ್ಷವ ಧರಿಸಿದವನು ಪಾಖಂಡಿಯೇ ಆಗಿರಲಿ, ಪರಮೇಶ್ವರ ಅವನನ್ನು ಮೆಚ್ಚಿ ಮುಂಡಾಡುತ್ತಾನೆ. ಎನ್ನುವಾಗ ಅಹಾ ರುದ್ರಾಕ್ಷಗಳು ಎಷ್ಟು ಶ್ರೇಷ್ಠ ! ಜಪ ತಪ, ಯಜ್ಞ ಯೋಗ, ದಾನ ಧರ್ಮಾದಿ ಸಕಲ ಸತ್ಕರ್ಮ ನಿರತನಾದ ಬ್ರಾಹ್ಮಣನ ಕೊರಳಿನಲ್ಲಿ ಪವಿತ್ರ ರುದ್ರಾಕ್ಷ ಇಲ್ಲದೇ ಹೋದರೆ, ಆ ಸತ್ಕರ್ಮದಿಂದ ಅವನಿಗೆ ದುಃಖವೇ ದೊರಕುವುದು. ಸಾವಹೊತ್ತಿನೊಳು ಯಾವನಾಗಲಿ, ರುದ್ರಾಕ್ಷವ ತೇದ ನೀರ ಕುಡಿದರೆ, ರುದ್ರಲೋಕವನವನು ಹೊಂದುತ್ತಾನೆ. ನೆತ್ತಿ ಕತ್ತು ಕೈ ಕಿವಿ ಎದೆ-ಈ ಸ್ಥಾನಗಳಲ್ಲಿ ಹೋಳಾಗದ ಹುಳುಕಾಗದ ಮುಕ್ಕಾಗದ ಒಳ್ಳೆಯ ರುದ್ರಾಕ್ಷವನ್ನು. ಸಂಖ್ಯಾ ಪ್ರಕಾರ ಧರಿಸಿ ಶಿವಪೂಜೆ ಮಾಡುವಾತನು, ಹರಿ ಬ್ರಹ್ಮಾದಿ ದೇವತೆಗಳಿಂದಲೂ ಮಾನ್ಯನಾಗುತ್ತಾನೆ. ಈಗ ರುದ್ರಾಕ್ಷಗಳಿಗೆ ಸಂಬಂಧಿಸಿದ ಪುಣ್ಯಕಥೆಯೊಂದ ಹೇಳುವೆನು ಕೇಳಿ:–

### ಪುಲ್ಕಸನ ಕಥೆ :

ಮಹಾ ಪುಣ್ಯ ಕ್ಷೇತ್ರವಾದ ಕಾಶಿಯಲ್ಲಿ ಸುಜ್ಞಾನಾಶ್ರಮ ಎಂಬ ಹೆಸರಿನ ತಪಃಸಿದ್ಧನೊಬ್ಬ ಇದ್ದ. ಇವನ ಸೇವಾನಿರತನಾಗಿದ್ದ ಅಂತ್ಯಜ ಜಾತಿಯ ಪುಲ್ಕಸನು,

ಒಂದು ದಿನ ಮೃತಪಟ್ಟ. ಇವನ ಮೃತಿಕ್ರಿಯೆಗಳನ್ನು ಮುಗಿಸಿದ ಆ ತಪಸ್ವಿ, ಯಥಾ ಪ್ರಕಾರ ಸದುಪದೇಶ ಮಾಡುತ್ತಿದ್ದ. ಹೀಗಿರುವಾಗ ಒಂದು ದಿನ, ಶಸ್ತ್ರಗಳ ಇರಿತದಿಂದ ರಕ್ತ ಸೋರುತ್ತಿರುವ ಶರೀರದವನೊಬ್ಬ ಬಂದು ವಂದಿಸಿದನು ಆ ಯತಿಗೆ. ಆಗ ಯತಿಯು-ಬಂದ ಕಾರಣವ ಬೇಗ ಹೇಳಯ್ಯ-ಎನಲು, ಯಮದೂತನು-ದೇವಾ ! ಚಿತ್ರೈಸಬೇಕು ಜಗದ ಜೀವರನೆಲ್ಲ ಕೊಂಡೊಯ್ದು ಅವರವರ ಪಾಪ ಪುಣ್ಯಾನು ಸಾರವಾಗಿ, ಪುಣ್ಯಾತ್ಮರನು ಪುಣ್ಯಲೋಕಕೆ ಕಳುಹಿಸಿ, ಪಾಪಿಗಳ ಬಾಧಿಸುವ ಸಮಯ-ದಲ್ಲಿ, ದೈವದ್ರೋಹನೂ ಜಗತ್ಕಂಟಕನೂ ಆದ ಪುಲ್ಕಸನು ಕಾಶಿಯಲ್ಲಿ ದುರ್ಮರಣ ಹೊಂದಿದ. ಈ ಮಹಾ ಪಾಪಿಯನ್ನು ಯಮದೂತರಾದ ನಾವು ಎಳೆದೊಯ್ಯುತ್ತ ಇರು ವಾಗ, ಶಿವದೂತರು ಬಂದು ಅಡಹಾಯ್ದು, ಎಲಾ ಯಮದೂತರಿರಾ ! ಈ ಪರಮ ಪುಣ್ಯಶಾಲಿಯನೆಮಗೆ ಬಿಟ್ಟು ಬಿಡಬೇಕು, ಒಯ್ಯಲಾಗದು. ಎಂದು ಬೆದರಿಸಿದರು. ಅದಕ್ಕೆ ನಾವು ಪರಮ ಪಾಪಿ ಇವನು; ಇವನದಾಗಿ ಒಂದಾದರೂ ಪುಣ್ಯಕಾರ್ಯ ಉಂಟೇ ಹೇಳಿ ? ಎನ್ನುತ್ತ ಪ್ರತಿಭಟಿಸಿದೆವು. ಶಕ್ತರಾದ ಶಿವದೂತರು ಇವನಾಚರಿಸಿದ ಪುಣ್ಯ ನಿಮಗೇನು ಗೊತ್ತು ? ಇವನ ಪ್ರಾಣಹೋದ ತಾಣದಲ್ಲಿ, ಮೊಳಕಾಲು ಮಟ್ಟದ ಕೆಳಗೆ ರುದ್ರಾಕ್ಷಗಳು ಭೂಗತವಾಗಿ ತುಂಬಿರುವುವು. ಆ ಪ್ರಭಾವದಿಂದ ಈ ಪುಲ್ಕಸನ ಪಾಪವೆಲ್ಲ ಪಲ್ಲಟಗೊಂಡು, ಕೈಲಾಸ ಪದವಿ ಕರುಣಿಸಲ್ಪಟ್ಟಿದೆ; ಇವನ ಬಳಿ ಬಾರದಿರಿ ನೀವು, ಎನ್ನುತ್ತ ನಮ್ಮನ್ನೆಲ್ಲ ಎದುರಿಸಿ ಚದುರಿಸಿ, ತುಳಿದು ತಿವಿದು, ಹೊಡೆದು ಕಡಿದು ಬಿಡದೆ ಕೊಂಡೊಯ್ದರು ಅವನನ್ನು ಅತ್ತ ಕೈಲಾಸಕ್ಕೆ ! ಸಂಗತಿಯನಿದ ನಿಮಗೆ ನಿವೇದಿ ಸುವದಕ್ಕಾಗಿ ನಾನೀಗ ಬಂದೆ, ಎಂದನು. ತಪಸ್ವಿ ಆಗ, ವೇದಾಗಮಗಳೊಳಗೆ ಪ್ರತಿಪಾದಿ ತವಾಗಿರುವ ರುದ್ರಾಕ್ಷದ ಹಿರಿಮೆ, ಅತ್ಯದ್ಭುತವಾಗಿರುವುದು. ವೇದವಾಣಿ ಎಂದಿಗೂ ವಿಫಲವೇ ಅಲ್ಲ. ಇದಿರಲಿ, ಆ ಪುಲ್ಕಸನು ಪ್ರಾಣ ಪರಿತ್ಯಾಗಮಾಡಿದ ಸ್ಥಳವನೀಗ ನನಗೆ ತೋರಿಸುವೆಯಾ ಯಮದೂತ ? ನಡೆ ಅಲ್ಲಿಗೆ ನೋಡೋಣ ಬೇಗ ಎಂದನು. ಬಳಿಕ ಅವರೆಲ್ಲ ಆ ಸ್ಥಳಕ್ಕೆ ಬರಲು, ಹೂಳಿಟ್ಟ ನಿಧಿಯ ಅಂಜನಗಾರ ತೋರಿಸುಮಂತೆ, ಯಮದೂತ ಬಗೆದು ತೋರಿಸಿದನಲ್ಲಿ ರುದ್ರಾಕ್ಷವ. ನೋಡಿದ ತಪಸ್ವಿ ತಲೆದೂಗಿ, ಆ ಪುಲ್ಕಸನ ಕೊಂಡಾಡಿದ. ಅಲ್ಲಿಯ ರುದ್ರಾಕ್ಷವ ಋಷಿಯ ಮುಂದಿರಿಸಿದ ಯಮ ದೂತ ಇಂತೆಂದನು- ಋಷಿವರ್ಯ ನಾನಿದ ಧರಿಸಲಾಗದು ಏಕೆಂದರೆ ನಾನು ಯಮ ದೂತ. ಇದೆನ್ನ ಮೈಯೊಳಿದ್ದರೆ, ನನ್ನ ಸ್ಪರ್ಶವಾಗುವ ಪಾಪಿಗಳಿಗೆ ಭವಮರಣವೇ ಇಲ್ಲವಾಗುವುದು, ಅದರಿಂದಿದು ನಿಮ್ಮ ಸನ್ನಿಧಿಗೇ ಸೇರಲಿ- ಎಂದು ಕೊಟ್ಟು ಅಡಿಗೆರಗಿ ಅವನತ್ತ ಮರಳಿದನು ಯಮಪುರಿಗೆ. ಇತ್ತ ಆ ರುದ್ರಾಕ್ಷವ ಕೈಕೊಂಡ ಋಷಿ, ಭಕ್ತಿ ಯಿಂದ ಅದನ್ನು ಶಿರದೊಳಿಟ್ಟುಕೊಂಡು, ತನ್ನ ಆಶ್ರಮಕೆ ಬಂದು ನಿಜಯೋಗ ನಿರತ ನಾದನು.

—: ೧೩ನೇ ಸಂಧಿಗೆ ಸಹಾಯ ಮಾಡಿದವರು :—

**( ಶ್ರೀಮತಿ ಗುರುಲಿಂಗವ್ವ ಕಲ್ಲನಗೌಡ ಪೋಲೀಸಪಾಟೀಲ. ಕರಮುಡಿ )**

— ೧೪ —

## ಶಿವ ಮಂತ್ರ ಮಾಹಾತ್ಮ್ಯಂ :

ವಿಧಿ ನಿರ್ಮಿತವಾದ ಜಗವೆಲ್ಲ, ವಿಧಿಲೇಖವನಳಿಸುವ ದೈವಾಧೀನವಾಗಿ ಇರುವುದು; ದೈವವದು, ಮಂತ್ರವ ಭಾವಿಸುವ ಭಕ್ತರ ಆಧೀನವಾಗಿ ಇರುವುದು.

ನಮಃ + ಶಿವ + ಆಯ- ಈ ಮೂರು ಪದಗಳುಳ್ಳ ಪಂಚಾಕ್ಷರಿ ಮಂತ್ರವು 'ನಮಃ' ಎಂಬುದರಿಂದ ಜೀವವನ್ನು, 'ಶಿವ'ಎಂಬುದರಿಂದ ಲಿಂಗವನ್ನು, 'ಆಯ'ಎಂಬುದರಿಂದ ಆ ಶಿವ ಜೀವರ ಐಕ್ಯವನ್ನು ಪ್ರತಿಪಾದಿಸುತ್ತ ಲಿಂಗಾಂಗ ಸಾಮರಸ್ಯ ಅಥವಾ ಶಿವ ಜೀವೈಕ್ಯ ಪರವಾದ ಅರ್ಥವ ಸಮರ್ಥಿಸುತ್ತ ಇರುವುದು. 'ಓಂ' ಪ್ರಣವವು, ಪರಾತ್ಪರವಾದ ನಿರಾಕಾರವ ಬೋಧಿಸುತ್ತ; ಮಂತ್ರಕ್ಕೆ ಪ್ರಾಣವೇ ಆಗಿರುವುದು.

ಈ ಮಂತ್ರಜಪ ಮೂರು ವಿಧ : ಹೇಗೆಂದರೆ ಶಿವದೀಕ್ಷಿತರಿಗೆ ಕೇಳುವ ಹಾಗೆ ಉಚ್ಚರಿಸಿದರೆ 'ವಾಚಕ ಜಪ' ಇದು ಕನಿಷ್ಠ. ಇನ್ನು ತನಗೆ ಕೇಳುವಂತೆ ತುಟಿಗಳೆರಡು ಅಲುಗುವ ರೀತಿಯಲ್ಲಿ ಪಠಿಸುವುದು, 'ಉಪಾಂಶು ಜಪ, ಇದು ಮಧ್ಯಮ ಫಲವುಳ್ಳದ್ದು. ಮೂರನೆಯದು : ಮಂತ್ರಾರ್ಥವ ಮನನ ಮಾಡುತ್ತ ಮನಸ್ಸಿನಿಂದಲೆ ಭಾವಿಸುವುದು, 'ಮಾನಸ ಜಪ', ಇದು ಉತ್ತಮವಾದುದು.

ಮಂತ್ರಾರ್ಥ ಹಾಗೂ ಅದರ ಋಷಿ ಛಂದಸ್ಸು ದೇವತೆ ಬೀಜ ಶಕ್ತಿ ಶೀಲಗಳನ್ನು ಕರನ್ಯಾಸ ದೇಹನ್ಯಾಸ ಅಂಗನ್ಯಾಸಗಳನ್ನೂ, ಗುರುಮುಖದಿಂದ ಶ್ರದ್ಧಾಭಕ್ತಿಪೂರ್ವಕ ಅರಿತು ಜಪಿಸಿದರೆ ಸಫಲವಾಗುವುದು. ಗುರೂಪದೇಶ ಇಲ್ಲದೆ, ಗ್ರಂಥಗಳ ಓದಿಕೊಂಡು ಗೊಣಗಿದರೆ ಪರ್ವತಕೆ ಕೋಳಿ ಕೂಗಿದಂತೆ, ವಿಫಲವಾಗುವುದು. ಇದನೆಲ್ಲ ಅರಿತು, ವಿಧಿಪೂರ್ವಕ ಆಸನಸ್ಥನಾಗಿ, ಗಣನೆಯ ಪ್ರಕಾರ ಹೃದಯ ಕಮಲದಲ್ಲಿ ಪಠನ ಭಾವಿಸಿ ಶಿವಮಂತ್ರವ ರಹಸ್ಯವಾಗಿ ಜಪಿಸಬೇಕಲ್ಲದ್ದು. ಈ ಲಿಂಗಾಂಗ ಸಾಮರಸ್ಯದ ಸಮ್ಯಜ್ಞಾನವನ್ನು ಸದ್ಗುರುವೇ ಬಲ್ಲನಲ್ಲದೆ. ಬಾಯೊಣಗುವಂತೆ ಮಂತ್ರವ ಕೂಗುವ ನೀತಿ ಬಾಹಿರರೇನ ಬಲ್ಲರು ? ಪರಶಿವನ ಒರಲೊರಲಿ ಕರೆಯುವುದೇಕೆ ? ಕೇಳದಿರಲು ಶಿವನೇನು ಕಿವುಡನೆ ? ಅಥವಾ ನಿದ್ದೆಬಡುಕನೆ ? ನಮ್ಮ ಆತ್ಮದಲ್ಲಿ ಬೇರಾಗದಂತೆ ಸೇರಿಕೊಂಡಿರುವ ಮಾತಹರನ, ಕೂಗಿಟ್ಟು ಕರೆಯುವುದದು, ಯಾವ ನ್ಯಾಯ ? "ಮನನಾತ್ ತ್ರಾಯತ ಇತಿ ಮಂತ್ರಃ" ಎಂದರೆ ಮನನ ಮಾಡುವುದರಿಂದ ರಕ್ಷಿಸುತ್ತದೆ ಎಂಬ ಅರ್ಥವುಳ್ಳ ಮಂತ್ರವನ್ನು, ಬಹಿರಂಗವಾಗಿ ಒರಲಾಡುವುದೆಂದರೆ ಅರ್ಥವೇನು ? ಮಂತ್ರವ ಒರಲಾಡುವ ನರನಿಗಿಂತ ಬೇರೆ ಪಾಮರನುಂಟೇ ? ಹಾಗಾದರೆ ಪೂರ್ವಕಾಲದಲ್ಲಿ ಒರಲಿದವರಿಲ್ಲವೇ ? ಎಂದು ಕೇಳುವ ಜನಕ್ಕೆ, ಸ್ಮೃತಿನೇತ್ರ ಶ್ರುತಿಗಳ ಪ್ರಬಲ ಪ್ರಮಾಣದಿಂದ ಉತ್ತರಿಸುವೆನೀಗ : ಮಾನವರೊಳಗೆ ಅಧಿಕೃತರು (ಸ್ವತಂತ್ರ ಸ್ವತಂತ್ರರಾದ ದಿವ್ಯ ಪುರುಷರು) ಮತ್ತು ಅಧೀನರು ( ಸ್ವಾತಂತ್ರ್ಯವೇ ಇಲ್ಲದ ಪರಾವಲಂಬಿಗಳು ) ಎಂಬು

ದಾಗಿ ಎರಡು ವಿಧ ಉಂಟು; ಆ ಅಧಿಕೃತರ ನಡೆವಳಿಯು, ಅಧೀನರಾದವರು ನಡೆದರೆ ನಿಂದಾಸ್ಪದವಾಗದೆ ಇರುವುದೇ ? ( ಇದೇ ವಿಷಯವಾಗಿ ಚಾಣಕ್ಯ ಸೂತ್ರದಲ್ಲಿ " ನ ದೇವ ಚರಿತಂ ಚರೇತ್ " ಎಂದರೆ, ದಿವ್ಯ ಪುರುಷರ ವರ್ತನೆಯನ್ನು, ಸಾಮಾನ್ಯರು ವರ್ತಿಸಲಾಗದು. ಆದುದರಿಂದಲೇ ಬ್ರಹ್ಮದೇವ ಮಗಳ (ಸರಸ್ವತಿಯ) ಗಂಡ ಆದನೆಂದು ನಾವೂ ಆಗಲಿಕ್ಕೆ ಬರುವದಿಲ್ಲ. ಮತ್ತು ಅಗ್ನಿದೇವ ಸರ್ವ ಭಕ್ಷಕನೆಂದು ನಾವೂ ಎಲ್ಲದನ್ನೂ ಮೆಲ್ಲಲಾಗುವುದಿಲ್ಲ ಎಂದು ಚಾಣಕ್ಯ ಮಹರ್ಷಿ ನಿರೂಪಿಸಿರುವು ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು ) ಪತಿವ್ರತೆಯರ ಪಂಕ್ತಿಯಲ್ಲಿ ಪ್ರಶಸ್ತಳೆಂದಿರುವ ದ್ರೌಪದಿಗೆ ಗಂಡರೈವರೆಂದು, ನಮ್ಮ ನಾರಿಯರೂ ಎಮ್ಮ ವಾಚಿಸಿದ ರೀತಿಯಲ್ಲಿ, ಪತಿ ಗಳನ್ನು ಮಾಡಿಕೊಂಡರೆ ಪ್ರಪಂಚ ಸಮ್ಮತಿಸುವುದೇನು ? ಮಂತ್ರವ ಒರಲಾಡುತ್ತಿರು ವವರು ಇದ ಚೆನ್ನಾಗಿ ತಿಳಿದುಕೊಳ್ಳಲಿ. ಶಿವ ಮಂತ್ರವ ಕೂಗುತ್ತ ಭಜನೆ ಮಾಡುವ ವರ ವಿವೇಕವನ್ನೆಲ್ಲ; ಈ ಕಸಿಬಾಯಿಯವನಿಗೇಕೆಂದು ಸರ್ವಜ್ಞನಾದ ಶಿವ; ತೆಗೆದು ನೆಲಕ್ಕೆ ಹಾಕಿಬಿಟ್ಟನೋ ಏನೋ ! ಪತಿಯ ನಾಮವ ಸತಿಯೆಂದೂ ಹೊರಗಡೆ ಕಾಡ ಕಂಡಂತೆ ಕೂಗಾಡುವುದಿಲ್ಲ ; ಶುಭ ಶೋಭನ ಸಮಾರಂಭದಲ್ಲಿ ಹೆಸರ ಹೇಳಿಸಲು ಕುತೂಹಲರಾದವರಿಗೆ, ಅದೂ ಕಿವಿಗೆ ಕೇಳಿತೋ ಇಲ್ಲವೊ ಎನ್ನುವಷ್ಟು ಮಿಗೆ ನಾಚಿಕೆ ಯಿಂದ ನಯದಿಂದ ಒಮ್ಮೆ ಉಚ್ಚರಿಸುವಳು. ಹೀಗಿರುವಾಗ ' ಶರಣಸತಿ ಲಿಂಗಪತಿ ' ಎಂಬ ಬಿರುದಿನ ಸರಿಜೋಡಿಯಾದ ನಿಜಸ್ವಾಮಿ ನಾಮವನ್ನು, ಹೊತ್ತು ಗೊತ್ತಿಲ್ಲದೆ ಭಯ ಭಕ್ತಿ ಇಲ್ಲದೆ ಬೆಸಗೊಂಡವರಿಲ್ಲದೆ, ಕುನ್ನಿಗಳಂತೆ ಕೂಗಾಡುತ್ತಿರುವುದು ಅದೆಂಥ ಶರಣ ಸತಿ ಪಥವೋ, ಆ ಶಿವನೇ ಬಲ್ಲ ! ಶ್ರೀಗುರು ಕಾರುಣ್ಯದಿಂದ ಲಬ್ಧವಾದ ಶಿವಮಂತ್ರದ ಅನುಸಂಧಾನದಿಂದ, ಶಿವನೊಲಿಸಿದ ಕಥೆಯೊಂದ ಹೇಳುವೆನು.

## ದಾಶಾರ್ಹ ರಾಜನ ಕಥೆ :

ಮಥುರಾ ನಗರವನಾಳುವ ದೊರೆ, ದಾಶಾರ್ಹ. ಯದು ವಂಶಜನಾಗಿ ಯಶೋ ಭೂಷಣನಾದ ಈ ಭೂಪತಿ, ಕಾಶೀರಾಜನ ಕುಮಾರಿಯ ಮದುವೆ ಆದ. ರತಿ ಕೇಳಿಗೆ ಲವಲವಿಸಿ ಕರೆದನು ಆ ಲಲನೆಯು. ಆದರೂ ಸುಮ್ಮನಿದ್ದಳು ಆ ರಾಜ ಕುಮಾರಿ. ಇಂತಿದೇನೆಂದು ಕೇಳಿದ ದೊರೆಗೆ, ಆಕೆ—ಪ್ರಿಯನೆ ! ನಾನೀಗ ವ್ರತನಿರತಳಾಗಿರುವೆ. ಪುರುಷರಾದವರು ಬಸಿರಿ ರತೇಚ್ಛೆ ಇಲ್ಲದವಳು ವ್ರತಸ್ಥೆ, ಇಂಥ ಮಾನಿನಿಯರ ಮೋಹಿ ಸಲಾಗದು, ಮುಟ್ಟಲಾಗದು. ಮೀರಿ ಬಲಾತ್ಕರಿಸಿದರೆ ಹಾನಿ ಹೊಂದುವುದು,—ಎಂದು ಬಿನ್ನವಿಸಿದಳು. ಕಾಮಾತುರನಾದ ದಾಶಾರ್ಹನು ಕೇಳದೆ ಮುಟ್ಟಿಬಿಟ್ಟ. ಕಾದ ಕಬ್ಬಿ ಣವ ಮುಟ್ಟಿದಂತಾಗಿ ಮೈ ಬೆಂದು, ಬಗೆ ನೊಂದು ಬೆದರಿ,-ಕಾಂತೆ ! ನಿನ್ನ ಒಡಲೆಲ್ಲಾ ಸುಡುತ್ತಿರುವುದಲ್ಲಾ ಏನಿದಾಶ್ಚರ್ಯ ?—ಎಂದು ಕೇಳಿದನು ದೊರೆ. ಸತಿ ರಾಜ ಕುಮಾರಿ ಆಗ,-ಕೇಳು ಕಾಂತ ! ಪೂರ್ವ ಪುಣ್ಯ ಫಲದಿಂದ ದೂರ್ವಾಸ ಮಹಾ ಮುನಿಗಳು ಒಮ್ಮೆ ಎಮ್ಮ ಮನೆಗೆ ಬಂದಿದ್ದರು. ಅಂದು ಅವರು ಮಹಾ ಮಹತ್ತಾದ ಶಿವಮಂತ್ರವ, ಉಪ ದೇಶಿಸಿದರು ನನಗೆ. ಲಬ್ಧವಾದ ಶಿವ ಮಂತ್ರದಿಂದ, ಸಮೃದ್ಧವಾದ ಪಾಪವೆಲ್ಲ ಲೋಪ

ವಾಯಿತು. ನನ್ನ ಮಾಂಸ ಶರೀರ, ಆಗ ಮಂತ್ರ ಶರೀರವಾಗಿ ಮಾರ್ಪಟ್ಟಿತು. ಇದು ಕಾರಣ ಮಂತ್ರೋಪದೇಶ ಹೊಂದದವರು, ನನ್ನ ಸೋಂಕಲು ಸಾಧ್ಯವಿಲ್ಲ—ಎಂದಳು. ದಾಶಾರ್ಹನು,-ಎಲೆ ಪಾವನಾಂಗಿ ! ನೀನೀಗ ಆ ಪರಶಿವ ಮಂತ್ರವನುಪದೇಶಿಸು ನನಗೆ. ಈ ಮಾತಿಗೆ ರಾಜಕುಮಾರಿ, ಪ್ರಿಯನೆ ! ಪತಿಗೆ ಸತಿ ಬೋಧಿಸುವುದು, ಶ್ರುತಿ ಸಮ್ಮತ ವಲ್ಲ. ಆದುದರಿಂದ ಗಾರ್ಗ್ಯ ಮಹಾ ಮುನಿಯ ಸನ್ನಿಧಿಗೆ ಹೋಗೋಣ ಎಂದಳು. ಅದ ರಂತೆ ದಂಪತಿಗಳಿಬ್ಬರೂ ಆ ಮುನಿವರನ ಸನ್ನಿಧಿಗೆ ಬಂದು, ಸಾಷ್ಟಾಂಗದಿಂದ ನಮಿಸಿ, ಮನವಾರೆ ಪೂಜಿಸಿದರು. ಅನಂತರ, ಪರಮ ಪಂಚಾಕ್ಷರಿಯ ಮಂತ್ರೋಪದೇಶದಿಂದ ನನ್ನ ಪಾಪವನೆಲ್ಲ ಪರಿಹರಿಸಿ, ಪರಿಪಾಲಿಪುದೆನ್ನ ಮುನೀಶ್ವರಾ ! ಎಂದು ಕೇಳಿದನು ದಾಶಾರ್ಹ ದೊರೆ. ಗಾರ್ಗ್ಯ ಮುನಿ ಆಗ, ಕಾಳಿಂದೀ ನದಿಯ ದಡದಲ್ಲಿ ಇರುವ ಒಂದು ಮರದಡಿಯಲ್ಲಿ, ದಾಶಾರ್ಹನನ್ನು ಸಂಸ್ಕಾರ ಶುದ್ಧನನ್ನಾಗಿಸಿ, ಶಿವಸ್ಮರಣಪೂರ್ವಕ ಅವ ನಿಗೆ ಮಂತ್ರೋಪದೇಶ ಇತ್ತನು. ಆ ಒಡನೆ ದಾಶಾರ್ಹನ ದೇಹದಿಂದ ಪುರಾತನ ಪಾಪ ವೆಲ್ಲ ಕಾಗೆಗಳ ರೂಪದಿಂದ ಗುಂಪು ಗುಂಪಾಗಿ ಹೊರ ಹೊರಟು, ಧರೆಗುರುಳಿ ಅವು ಮರಣ ಹೊಂದಿದವು. ಇದ ಕಂಡ ಕೌತುಕಗೊಂಡ ದೊರೆ ಕೇಳಲು. ಗಾರ್ಗ್ಯ ಮುನಿ ಹೇಳುತ್ತಾನೆ : ಎಲೆ ಭೂರಮಣ ! ಭವ ಭವಂಗಳಲಿ ನೀನು ಮಾಡಿದ ಪಾಪಸಮೂಹ ವೆಲ್ಲ, ಈಗ ತಾಪದಿಂದ ಕಾಗೆಗಳ ಸಮೂಹವಾಗಿ, ಇರದೆ ಹೊರ ಹೊರಟು ಹೋಯಿತು. ನೀನೀಗ ನಿರ್ಮಲನಾದೆ. ನಿನ್ನ ಅಂಗದ ತುಂಬಾ ಶಿವಮಂತ್ರ ನೆಲೆಗೊಂಡಿತು ಎಂದನು. ಇದನಾಲಿಸಿದ ಆ ದಂಪತಿಗಳು ಅಚ್ಚರಿಪಟ್ಟು, ಗಾರ್ಗ್ಯ ಮುನಿಯ ಚರಣಕೆ ರಗಿ, ತಮ್ಮ ನಿಜ ನಿವಾಸವ ಸೇರಿದರು. ಅನಂತರ ಆ ರಮಣಿಯ ರತಿಲೀಲೆ ಅವನಿಗೆ ಅತಿಹಿತಕರವಾಗಿ ಪರಿಣಮಿಸಿತು. ಅಂದಿನಿಂದ ಮುಕ್ತಿಸಾಧನವಾದ ಮಂತ್ರವನವರು ನಿರಂತರ ಭಕ್ತಿಯಿಂದ ಜಪಿಸುತ್ತ, ಜೀವನ್ಮುಕ್ತಾವಸ್ಥೆಯಿಂದ ಕೃತಕೃತ್ಯರಾದರು. ಕೆಟ್ಟ ಸಂಸಾರ ವೃಕ್ಷವನ್ನು ನಿರ್ಮೂಲಗೊಳಿಸುವ, ಅಷ್ಟಾವರಣದ ಶ್ರೇಷ್ಠ ಪ್ರಭಾವವನ್ನು ಮನವಾರೆ ಅರಿತು ಆಚರಿಸುತ್ತ, ಹಿರಿದಾದ ಸ್ಥಿರವಾದ ವರ ಕೈವಲ್ಯವ ಪಡೆಯಿರಿ ಎಂದು, ಲಿಂಗಾನಂದ ಲೋಲನಾದ ಶಿವರುದ್ರ ಶಿವಾಚಾರ್ಯ, ಶಿವಭಕ್ತರಿಗೆ ನಿರೂಪಿಸಿ ದನು.

—: ೧೪ನೇ ಸಂಧಿಗೆ ಸಹಾಯ ಮಾಡಿದವರು :—

**( ಶ್ರೀಮತಿ ಗಿರಿಯವ್ವ ಬಸನಗೌಡ ಕರಿಗೌಡರ )**

— ೧೫ —

**ಶಿಷ್ಯೋದ್ಧಾರ :**

ಸೊರಕೋಡ ಊರಿನೊಳಗೆ ಸಾವಕ್ಕನೆಂಬ ವಿಧವೆ ಇದ್ದಾಳೆ. ರಾಯನಗೌಡರ ವಂಶಜಳಾದ ಈಕೆ, ಪ್ರಾಯದ ವಿಧವೆ ಆದರೂ ವಿನಯ ಭರಿತೆ ; ಧರ್ಮಚರಿತೆ. ಇವಳು

ಧರಿಸುವ ಭಸಿತ—ಗುರು ಚರಣ ಧೂಳಿ; ಜಪಿಸುವ ಮಂತ್ರವದು-ಗುರುನಾಮ; ಗುರು ಕರುಣೆಯೇ ಮುಕ್ತಿದಾಯಕವಾದುದು—ಎಂಬ ವಿಶ್ವಾಸದಿಂದ ವಿವೇಕದಿಂದ ಸದಾ ಗುರುಭಕ್ತಿ ನಿರತಳಾಗಿದ್ದಳು. ಸಾವಕ್ಕನಿಗೆ ಧನಧಾನ್ಯಗಳ ಕೊರತೆ ಇರಲಿಲ್ಲ. ಸಿರಿವಂತೆಯಾಗಿ ಹರುಷದಿಂದ ಬಾಳುತ್ತ ಇರುವಾಗ, ಒಮ್ಮೆ ಆಕೆಯ ಎಮ್ಮೆ ಒಂದು ಆಳವಾದ ಗುಂಡಿಯೊಳಗೆ ಆಚಾತುರ್ಯವಾಗಿ ಬಿದ್ದುಬಿಟ್ಟಿತು. ಕಂಡವರೆಲ್ಲ ಇನ್ನಿದು ಬದುಕುವುದಿಲ್ಲ ಎಂದರು. ಸಾವಕ್ಕ ಬಂದು ನೋಡಿದಾಗ ಆದ ಸಂತಾಪ ಅಷ್ಟಿಷ್ಟಲ್ಲ. ಅಯ್ಯೋ ಎನ್ನ ಸಿರಿಗಳಸ ಇಂದು ಸಿಡಿದೊಡೆಯಿತೇ ! ಎಂದು ಬಾಯೊಣಗುವಂತೆ ಬೊಬ್ಬೆಯಿಕ್ಕಿದಳು. ಎನ್ನ ಚಿಣ್ಣರೆಲ್ಲ ದಣ್ಣನೆ ದಣಿವಂತೆ ಉಣ್ಣುತ್ತಿರುವ ಕಾಲಕ್ಕೆ, ಇಂತು ಮಾಡಿಸಿದೆಯಾ ಹರನವತಾರದ ಗುರುವೇ ! ಎಂದು ಗೋಳಿಡುತ ಕಣ್ಣೀರ ಸುರಿಸಿದಳು. ಗುರು ತಾಯಿ, ಗುರು ತಂದೆ, ಗುರು ಬ್ರಹ್ಮ, ಗುರು ವಿಷ್ಣು, ಗುರು ಮಹೇಶ್ವರ, ಗುರುವಿಗೆ ಸರಿಸಮಾನರೇ ಇಲ್ಲ-ಎಂದರಿದ ನಾನು, ಸರ್ವಾತ್ಮನಾ ನಿನ್ನ ನಂಬಿರುವಾಗ, ಇಂತೆನಗೆ ಚಿಂತೆಯನೊದಗಿಸಿ ಸಂತೈಸದಿದ್ದರೆ, ಆ ಕುಂದು ಯಾರಿಗೆ ಸ್ವಾಮಿ ? ಚಿನ್ನವನೆಷ್ಟು ಕಾಸಿ ಕರಗಿಸಿ ಮರ್ದಿಸಿದರೂ ಮತ್ತಷ್ಟೂ ಅದರ ಬಣ್ಣ ಏರುವಂತೆ, ನನ್ನನೆಷ್ಟು ಕಾಡಿಪರೂ ನಿನ್ನ ಭಕ್ತಿ ಎನ್ನಲ್ಲಿ ಕೊರತೆಯಾಗದು ಸ್ವಾಮಿ ! ಹೀಗೆಲ್ಲ ಪರಿಪರಿಯಿಂದ ಗುರುವಿಗೆ ಮೊರೆಯಿಟ್ಟು ಆಸತ್ತು ಬೇಸತ್ತಳು. ರಾತ್ರಿ ಆಯಿತು. ಗುರು ಸ್ಮರಣ ಮಾಡಿ ಮಲಗಿದಳು. ನಿದ್ದೆ ಕವಿಯಿತು. ಕೊನೆಯ ಜಾವದ ಸಮಯ. ಕನಸಿನಲ್ಲಿ ಕಂಡ ಶ್ರೀಗುರು ಶಿವರುದ್ರಯೋಗಿ-ಎಲೆ ಮಗಳೆ ಸಾವಕ್ಕ ! ಸಾಕು ಸಾಕೀ ಸಂತಾಪ. ನಿನ್ನ ಮೆಚ್ಚಿನ ಎಮ್ಮೆ ಸಾವಿಲ್ಲದೆ ಸುಖವಾಗಿದೆ. ಕೊಟ್ಟಿಗೆಗೆ ಹೋಗಿ ನಿಟ್ಟಿಸು, ನೋಡು ಎಂದು ಎಚ್ಚರಿಸಿ ಬಚ್ಚಬಯಲಾದನು. ಆಗಲೇ ಸಾವಕ್ಕ ಸಡಗರದಿಂದ ಎದ್ದು ನೋಡುತ್ತಾಳೆ; ಅಲ್ಲಿ ಎಮ್ಮೆ ಮೆಲುಕಾಡುತ್ತ ನಿಂತಿತ್ತು. ಈ ಗುರು ಮಹಿಮೆಗೆ ಮನವಾರೆ ಮಣಿದ ಸಾವಕ್ಕನು-ಮುನ್ನ ಕಿನ್ನರಿಬ್ರಹ್ಮ ತಂದೆಯೆಂಬ ಶರಣ, ಆಡಿಗೆ ಅಸುವಿತ್ತು ಪೊರೆದುದನ್ನು, ಬಹು ಜನರ ಮುಖದಿಂದ ಕೇಳಿದ್ದೆ. ಆದರೆ ಈ ಗುರುವು ಇಂದೆಮ್ಮ ಎಮ್ಮೆಗೆ ಪ್ರಾಣವಿತ್ತು ಪಾಲಿಸಿದುದು, ನನ್ನ ಕಣ್ಣಾರೆ ಕಂಡೆ. ಒದಗಿದ್ದ ವಿಪತ್ತನ್ನು ಸದೆದಿಕ್ಕಿ ಸಲಹಿದ ಗುರುತಂದೆ, ನನಗೆ ನಿಜ ಬಂಧು !—ಎಂದು ಕೊಂಡಾಡಿದಳು. ಅಂದಿನಿಂದ ತನ್ನ ಜೀವನದ ಉದ್ದಕ್ಕೂ ಕೃತಜ್ಞಳಾಗಿ, ಶಿವರುದ್ರ ಶಿವಯೋಗಿಯ ಸದಾ ಯಜಿಸುತ್ತ ಭಜಿಸುತ್ತ ಸಾಗಿದಳು-ಸಾವಕ್ಕ.

ಇದೇ ಊರಿನೊಳಗೆ ಬಸವನಗೌಡ ಎಂಬ ತರುಣನೊಬ್ಬ 'ಮರಿಗೊಣ್ಣವರ' ಎಂಬ ಮನೆತನಕ್ಕೇ ಮಂಗಳವಾದ ಬೆಳಕಾಗಿದ್ದ. ಪರಭಾಷಾ (ಇಂಗ್ಲಿಷ್) ಪದವೀಧರನಾದ ಈತ, ಚೆಲುವಿಕೆಯಲ್ಲಿ ಕಾಮ ಸುಂದರ ! ಶಿವರುದ್ರ ಶಿವಯೋಗಿಯ ಗುರು ಮಠಕ್ಕೆ ಸೇರಿದ ಶಿಷ್ಯ ಪರಂಪರೆಯ ಮನೆತನವದು. ರೂಪಕಾಮನಾದ ಬಸವನಗೌಡನಿಗೆ, ಪಾಪವಶಾತ್ ವಕ್ರವಾಯಿತು ಮುಖ. ಇದಕ್ಕಾಗಿ ವೈದ್ಯರ ಚಿಕಿತ್ಸೆ ಸಾಕಷ್ಟಾದರೂ ಸರಿಯಾಗಲಿಲ್ಲ. ಈ ಮುಖ ವಿಕಾರದವನಿಗೆ ಇನ್ನು ಮಗಳ ಕೊಡುವರಾರು ? ಸರಿಯಾಗಿದ್ದವರನ್ನು ಸರ್ವರೂ ಮೆಚ್ಚುತ್ತಾರೆ. ಆದರೀ ಸುಕುಮಾರನಿಗೆ ಅದಾವ

ಕರ್ಮದ ಕಾಟವೋ, ಮುಖವೇ ವಿಕಾರ ಹೊಂದಿತಲ್ಲಾ !—ಎನ್ನುತ್ತ ಬಂಧು ಬಾಂಧವ ಜನ ನೊಂದುಕೊಂಡರು. ಹಲವು ದೇವರುಗಳಿಗೆ ಹರಕೆ ಮಾಡಿದ್ದಾಯಿತೇ ಹೊರತು, ಅದೇನೂ ಹಸನಾಗಲಿಲ್ಲ. ಏಕೆಂದರೆ ನಾವೇನೋ ಹರಸಬಹುದು, ಅದರೆ ಪಡೆದಷ್ಟಕ್ಕೇ ಪರಿಹಾರವಲ್ಲದೆ, ಮಿಕ್ಕಫಲ ಸಿಕ್ಕುವುದಿಲ್ಲ. ಪ್ರಾರಬ್ಧದ ತೊಡಕ ತೀರಿಸುವರಾರು ಪೊಡವಿಯೊಳಗೆ ? ವಿಷ್ಣುವೇ ಮೊದಲಾದ ದೇವತೆಗಳೆಲ್ಲ, ಪಾರುಗಾಣದೆ ಪ್ರಾರಬ್ಧವ ಅನುಭವಿಸುತ್ತ ಇರುವಾಗ, ಇನ್ನೀ ನರಗುರಿಗಳದೊಂದು ಲೆಕ್ಕವೇ ? ಶಿವ ಶಿವಾ ಭವ ಕರ್ಮವೇ ಭೀಕರವಾದುದು ! ಈ ಕರ್ಮವಿದು ಕಾಡುವಾಗ ಕಾವವರೇ ಇಲ್ಲ. ಅಂಬುಧಿಯ ಅಗಸ್ತ್ಯಮುನಿ ಕುಡಿದುಬಿಡುವಂದು, ಇದ ಬಿಡಿಸಲು ನಂದನನಾದ ಚಂದಿರನೇನು ಅಡ್ಡಬಂದನೇ ? ಈ ಚಂದ್ರನಿಗೆ ರಾಹು ಗ್ರಹಣ ಆಗುವಾಗ, ಇದ ತಪ್ಪಿಸಲು ತಂದೆಯಾದ ಅಂಬುಧಿ ಏನಾದರೂ ಬೊಬ್ಬಿಟ್ಟಿತೇ ? 'ಮಾಡಿದ್ದುಣ್ಣೋ ಮಹಾರಾಯ' ಎಂಬಂತೆ ತಮ್ಮ ತಮ್ಮ ಪ್ರಾರಬ್ಧಕ್ಕೆಲ್ಲಾ ತಾವೇ ಪಾತ್ರರಲ್ಲದೆ, ಆರಿಗೂ ಆರಿಲ್ಲ, ಎಂಬುದಾಗಿ ಆಪ್ತೇಷ್ಟರು ಮಾತಾಡುತ್ತಿದ್ದರು.

ಗುರು ಚಿಂತಾಮಣಿ ಮರೆವುತ ಮಗ್ಗುಲೊಳಿರುವಾಗ, ಇದ ಬಿಟ್ಟು ಕಾಡುಗಲ್ಲನೇ ಕೋರಿದಂತಾಯಿತ್ತು. ಅಯ್ಯೋ ನಮ್ಮ ಗುರುವನ್ನೇ ಮರೆಸಿಬಿಟ್ಟಿತಲ್ಲಾ ನಮ್ಮ ಪೂರ್ವಕರ್ಮ ! ಎಂದು ಆಗ ಮನೆ ಗುರು ಶಿವರುದ್ರಶಿವಯೋಗಿಯ ನೆನೆಯುತ್ತ! ಮಠಕ್ಕೆ ಕರೆತಂದರು ಮಗನನ್ನ. ಇವನ ವಿಕಳವಾದ ಮುಖವಿದು, ಗುರುವೇ ನಿನ್ನ ಕೃಪಾ ಬಲದಿಂದ ಮುನ್ನಿನಂತಾಗಲಿ !—ಎಂಬ ಸಂಕಲ್ಪದೊಡನೆ ಸಾಷ್ಟಾಂಗ ಮಾಡಿದ ಅವನ ತಾಯಿ, ಗುರುವರ್ಯನಿಗೆ ಪ್ರಾರ್ಥಿಸಿದಳಿಂತು:– ಗುರುವೆ ಕುಲಗುರುವೆ ಘನಗುರುವೆ ಮದ್ಗುರುವೇ ! ನೀನೊಪ್ಪುವಂತೆ ತಪ್ಪದೆ ಇಪ್ಪತ್ತೊಂದುದಿನ, ಈ ಮಗನೊಂದಿಗೆ ನಿನ್ನ ಮಠಕೆ ಬರುವೆ. ತನಯನ ಈ ರೋಗವ ನೀ ತೊಲಗಿಸದಿದ್ದರೆ, ನಾ ನಿನ್ನ ಕಂದಳಲ್ಲ; ನೀ ನನ್ನ ತಂದೆಯಲ್ಲ; ಈ ಋಣಾನುಬಂಧ ಅಂದಿಗೇ ಸೈ, ಇದು ಭಾಷೆ-ಎಂದು, ಅಂದೇ ವ್ರತ ಕೈಕೊಂಡಳು. ಗುರುತೀರ್ಥ ಬೆರೆತ ಭಸ್ಮವ, ಮಗನ ವಕ್ರ ಮುಖಕ್ಕೆ ಪ್ರತಿನಿತ್ಯ ಲೇಪಿಸುತ್ತ ಇದ್ದಳು. ಆ ಇಪ್ಪತ್ತೊಂದು ದಿನದ ಅವಧಿಯೊಳಗೇ ಮಗ ಬಸವನಗೌಡನ ಮುಖ, ಮುನ್ನಿನಂತೆ ರುಜುವಾಯಿತು. ಗುರು ಕರುಣೆಗಿಂತ ಹಿರಿದಾದ ಮದ್ದುಂಟೇ ? ಮಹಾಮಹಾ ವೈದ್ಯರ ಮುಖವನ್ನೇ ಮಬ್ಬು ಮಾಡಿದ ಈ ಮುಖರೋಗವ, ಲೀಲೆಯಿಂ ಪರಿಹರಿಸಿ ಪಾಲಿಸಿದ ಶಿವರುದ್ರಗುರುವರ್ಯನ ಮಹಿಮೆ ಅಪಾರವಾದುದು ! ಈ ಉಪಕಾರ ಸ್ಮರಣೆಗಾಗಿ ಮಠದ ಒಳಹೊರಗೆಲ್ಲಾ ಅಮೃತಶಿಲೆಗಳನ್ನು ಹೊದಿಸಿದರು—ಅವರು

-: ೧೫ನೇ ಸಂಧಿಗೆ ಸಹಾಯಮಾಡಿದವರು :-

( ಶ್ರೀಮತಿ ತಾಯವ್ವ ನಾಗಪ್ಪ ಹವಾಜಿ, ಯಮುನವ್ವ ಯಮುನಪ್ಪ ಕಡ್ಲಿಬಿಸ್ಟಿ ಮತ್ತು ಕಾಳವ್ವ ಬಾಳಪ್ಪ ಮುದಕವಿ. )

— ೧೬ —

## ಗ್ರಹೋಚ್ಚಾಟನ ಮೃತ್ಯು ನಿವಾರಣ :

ಕೊಂಗವಾಡ ಎಂಬುದೊಂದು ಊರು. ಅಲ್ಲಿ ಪಾರ್ವತಮ್ಮ ಎಂಬುವಳು ಇದ್ದಾಳೆ. ಇವಳು, ಔದಾರ್ಯಶೀಲೆ ಪತಿವರ್ಯಾನುಕೂಲೆ ಧರ್ಮಾಚಾರಲೋಲೆ ಗುಣಮಣಿ ಮಾಲೆ, ಎಂಬುದಾಗಿ ಹೆಸರಾಗಿದ್ದಳು. ಇಂಥ ಸೌಜನ್ಯಶೀಲೆಯಾದ ಇವಳಿಗೆ ಒಮ್ಮೆ ದೆವ್ವವೊಂದು ಗಂಟುಬಿದ್ದಿತು. ಅದರಿಂದಾಗುವ ಸಂಕಟವ ಅನುಭವಿಸುವದಕ್ಕಿಂತ ಸಾವುದೇ ಲೇಸು, ಎನ್ನುವಂತಾಯಿತು. ಅಂಗಾಂಗಗಳನ್ನು ಅಮಂಗಳಗೊಳಿಸುತ್ತ ಹಗಲಿರುಳೆನ್ನದೆ ಕಾಡಿಸಿ ಪೀಡಿಸಿತು. ಮೊದಲೇ ಕೋಮಲೆಯಾದ ಪಾರ್ವತಮ್ಮ, ಈಗ ಬಾಡಿದ ಬಳ್ಳಿಯಂತೆ ಕಂದಿ ಕುಂದಿದಳು, ಕಳೆಗೆಟ್ಟಳು. ಅಂಕವ ರಚಿಸಿದ ಮಂತ್ರಗಾರರಂತೂ ತಮಗೆ ತಿಳಿದ ಷ್ಟನ್ನೆಲ್ಲಾ ಮಾಡಿ ಮುಗಿಸಿದರು. ಇವರ ಬೂದಿಗೇನೂ ಭೂತವದು ಬಗ್ಗಲಿಲ್ಲ, ಬೆದರ ಲಿಲ್ಲ. ಅವರೂ ಸೋತು, ಬಂದ ದಾರಿಯನೇ ಹಿಡಿದು ನಡೆದುಬಿಟ್ಟರು. ಹತಾಶಳಾದ ಪಾರ್ವತಮ್ಮ ಅತಿಯಾಗಿ ಕಂಬನಿಗರೆವುತ್ತ, ಇನ್ನೇನು ಗತಿ ಎಂದು ತಾಳಲಾರದೆ ತಳಮ ಳಿಸಿದಳು. 'ಧರ್ಮೋ ರಕ್ಷತಿ ರಕ್ಷಿತಃ ಧರ್ಮವೇ ರಕ್ಷಿಪುದು' ಎಂಬ ಆರ್ಯೋಕ್ತಿಯಂತೆ, ಸದ್ಧ ರ್ಮಿಣಿಯಾದ ಇವಳಿಗೆ, ಧರ್ಮವೇ ದಾರಿ ತೋರಿಸಬೇಕಲ್ಲವೆ ಈಗ ? ಚಿಂತೆಯೇ ತಾನಾ ಗಿದ್ದ ಅವಳ ಅಂತರಂಗದಲ್ಲಿ, ಯಾವುದೋ ಒಂದು ಮೂರ್ತಿ, ಮಿಂಚಿನಂತೆ ಸಳಂಚಿ, -ಎಲೆ ಮಾನಿನಿಯೆ ! ಪರಿಪಾಲಿಸುವ ಪರಮ ಗುರು ಇರುವಾಗ ಬರಿದೇಕೆ ಯೋಚಿಸುವೆ? ಒಪ್ಪಾದ ಅಮೃತ ಇದ್ದೂ, ಕಪ್ಪೆಯ ಜೊಂಡಿನ ನೀರ ಅಪ್ಪಬಹುದೇ ? ಎಂದಿತು. ದಾರಿದಪ್ಪಿ ದರಿಗೆ ಬೀಳುವ ಕುರುಡನಿಗೆ, ಸಾರ ಸಜ್ಜನರು ಸತ್ಪಥವ ತೋರುವಂತೆ, ಚಿಂತಾಮಗ್ನಳಾದ ಪಾರ್ವತಮ್ಮನಿಗೆ, ಸಂತ ಗುರುವ ತೋರಿಸಿತು, ಆ ಧರ್ಮಮೂರ್ತಿ. ಪಾರ್ವತಮ್ಮನಾಕ್ಷಣವೇ, ಶಿವಸ್ವರೂಪನಾದ ಶಿವರುದ್ರ ಗುರುವಿನ ಕರ್ತೃ ಗದ್ದುಗೆಗೆ ಬಂದು ವಂದಿಸುತ್ತ, ಎನ್ನ ಬೆಂಬಿಡದೆ ಬಾಧಿಸುವ ಭೂತವನಿದ ಬಿಡಿಸಾ, ದಯಾಮಯ ಗುರುವೆ ! ಎಂದು ಮೊರೆಯಿಟ್ಟಳು. ಪೆಡಂಭೂತವದು ಅಷ್ಟಕ್ಕೇ ಹೆದರಿ,-ಇನ್ನೀ ಗುರು ಪುತ್ರರ ನೆರೆಯೊಳಗಿರುವುದೇ ನಷ್ಟವೆಂದು,-ಅರಚುತ್ತ ಕುರುಹುದೋರಿ ಪೊಡಮಟ್ಟು ಪಲಾಯನ ಮಾಡಿತು. ಮೂಡುವ ಸೂರ್ಯನ ಕಂಡು ಓಡದಿರುವುದೇ ಕತ್ತಲೆ ? ಗುರು ಕರುಣ ಮೂಡಿದ ಮೇಲೆ, ಇರುವ ಕಷ್ಟ ಉಂಟೇ ? ಭವ ಭೂತವನ್ನೇ ಭಂಗಿಸುವಾತ ನಿಗೆ, ಈ ಬಡ ಭೂತವ ಬಿಡಿಸುವುದೊಂದು ಅತಿಶಯವಲ್ಲ ! ಪ್ರಸನ್ನ ಮನಸ್ಕಳಾದ ಪಾರ್ವತಮ್ಮ, ಅಂದಿನಿಂದ ಮಠದ ವಾರ್ಷಿಕೋತ್ಸವ ಸಮಯದಲ್ಲಿ ಪ್ರತಿ ವರ್ಷ ಬಂದು ಗುರು ಗದ್ದುಗೆಗೆ ಗೌರವದಿಂದ ಅಭಿಷೇಕ ಮಾಡಿಸುವಳು, ಆರೋಗ್ಯ ಕಾಯಳಾಗಿ ಮನೆ ತುಂಬ ಮಕ್ಕಳನ್ನೂ ಪಡೆದಳು.

ಇನ್ನು ಇದೇ ಊರಿನಲ್ಲಿಯ ಲಕ್ಷ್ಮಮ್ಮ ಎಂಬ ಮತ್ತೊಬ್ಬ ಮಾನಿನಿಗೆ, ಮಾನ ಭಂಗಗೊಳಿಸುವ ಗ್ರಹವೊಂದು ಗಂಟುಬಿತ್ತು. ಆಕೆ ಮತ್ತೇನನ್ನೂ ಯೋಚಿಸದೆ, ಈ

ಗುರು ಗದ್ದುಗೆಗೆ ಶರಣು ಹೊಕ್ಕಳು. ಮರೆಹೊಕ್ಕವರ ಪೊರೆವ ಪರಮ ಗುರುವೆಂಬ ಕೀರ್ತಿಯ ಕೇಳಿ; ನಿನ್ನಡಿಯೆ ಗತಿಮತಿ ಎಂದು, ನಂಬಿ ನಾ ಬಂದೆ ಎನ್ನುತ್ತ, ಭಕ್ತಿಯಿಂ ಬಾಗಿ, ಆ ಭಸ್ಮವ ಉದ್ಧೂಳಿಸಿಕೊಂಡಳು. ಲಕ್ಷ್ಮಮ್ಮನ ಭೂತವಾಗಲೇ ಬಿಟ್ಟೋಡಿತ್ತು. ಭೂತಪತಿಯ ಸನ್ನಿಧಿಯಲ್ಲಿ ಜಡಭೂತಗಳಿಗೆಲ್ಲಿಯದು ಕಡುಪು ? ಜಡ ಶಿಲಾಕಾರದಿಂದ ತೋರಿ, ದುರ್ಜಡವ ದುರಂತಗೊಳಿಸುವುದಲ್ಲದೆ, ಚೈತನ್ಯಮಯ ಲಿಂಗರೂಪದಿಂದಲೇ ಅನನ್ಯ ಭಕ್ತರ ಆಪತ್ತ ಅಳಿಸುತ್ತ, ಕಾಮಿತಾರ್ಥವ ಕರುಣಿಸುವುದಿದು, ಕೌತುಕವಲ್ಲವೆ ! ಹರನೇ ಭಕ್ತೋದ್ಧಾರಕ್ಕಾಗಿ ಧರೆಗಿಳಿದು, ಗುರುವಾಗಿ ಪರಿಪಾಲಿಸುವನೆಂಬುದೇ ಪರಮಾರ್ಥವೆಂದು, ಪೊಡಮಟ್ಟು ಹೋದಳು ಲಕ್ಷ್ಮಮ್ಮ.

'ಹದ್ಲಿ ಎಂಬುದೊಂದು ಹಳ್ಳಿ. ಅಲ್ಲಿಯ ಕನ್ನಡ ಪಾಠಶಾಲೆಗೆ ಅಯ್ಯಪ್ಪನೆಂಬ ಮಹೇಶ್ವರನೊಬ್ಬ ಅಧ್ಯಾಪಕನಾಗಿದ್ದ. ಗುರು ಕಾರುಣ್ಯವ ಪಡೆದಿದ್ದ ಈತನು, ಆಚಾರ ಶೀಲನಾಗಿ ಶಿವಪೂಜಾಲೋಲನಾಗಿ, ಕವಿತ್ವದಲ್ಲಿಯೂ ಕೋವಿದನೆನಿಸಿದ್ದ. ಲೌಕಿಕ ಪಾರಮಾರ್ಥಿಕ ಜಾಣನಾದ ಈತ, ಸುಖ ಸಂತೋಷದಿಂದ ಇರುವಲ್ಲಿ ; ಅಲ್ಲಿಂದ ಸೂರಕೋಡಿಗೇ ವರ್ಗವಾಯಿತು ಅಯ್ಯಪ್ಪನಿಗೆ. ಬಂದ ಇವನಿಗೆ ಈ ಊರಿನಲ್ಲಿ ಒಂದು ಮನೆಯೂ ಇವನ ಆಚಾರಕ್ಕೆ ಅನುವಾದದ್ದಾಗಿ ದೊರಕಲಿಲ್ಲ. ಅದರಿಂದ ಶಿವರುದ್ರ ಶಿವಯೋಗಿಯ ಮಹಾಮಠವೇ ನೆಲೆಯಾಯಿತು. ಅಲ್ಲೊಂದು ಕಡೆ ಸಂಸಾರದೊಂದಿಗೆ ಕೆಲಕಾಲ ಇದ್ದ. ಆಗ ಅಯ್ಯಪ್ಪನ ಮಗನಿಗೆ ಕೆಟ್ಟ ಕಾಯಿಲೆ ಆಗಿ ಕೈ ಮೀರಿತು. ಆ ಮಗನಿನ್ನು ಸೈ ಎಂದೇ ಬಗೆದು, ಪ್ರಲಾಪಕ್ಕಾಗಲೇ ಪ್ರಾರಂಭಿಸಿದಳು ತಾಯಿ ;- ನಮ್ಮ ವಂಶದ ದೀಪವಾಗಿ ದೇದೀಪ್ಯನಾದ ನಿನಗಿದೇನು ಬಂತೋ ಮಗನೇ ! ಇನನಿಲ್ಲದ ಮೇಲೆ ಇರುಳಾದಂತೆ, ಮಗನಿಲ್ಲದ ಮನೆ ಮಹಾಂಧಕಾರ ! ಎತ್ತಿದ ಕೈಯ ಬಿಟ್ಟು, ಹೆತ್ತ ಹೊಟ್ಟೆಯ ಬಿಟ್ಟು, ಅಯ್ಯಯ್ಯೋ ಮೃತ್ಯುವಿಗೆ ತುತ್ತಾಗುವ ಹೊತ್ತು ನಿನಗಿದೇಕೆ ಕಂದಾ ! ಅಮ್ಮಾ ಶಂಕರಿ ! ಮಿಗೆ ಮುದ್ದಾದ ಮಕ್ಕಳು ನಿನಗೇನಿಲ್ಲವೆ ? ಎಳೆಯರ ಕಂಡು ಕಳೆಯೇರಿ ನಲಿದಾಡುವುದಿಲ್ಲವೇ ನೀನು ? ಕಂದಯ್ಯಗಳ ಕಷ್ಟವ ಕಂಡು ಕರುಳು ಕರಗದೇ ನಿನಗೆ ? ಮರುಕ ಇಲ್ಲದ ಮಕ್ಕಳೇನೋ ಉಂಟು ಧರೆಯೊಳಗೆ. ಮರುಕವಿಲ್ಲದ ಮಾತೆ ಎಲ್ಲಾದರೂ ಉಂಟೇ ? ಕೋಮಲ ಪ್ರೇಮದೊಳು ಪಿತಗಿಂತ ಮಾತೆಯೇ ಮೇಲು !—ಎಂಬ ನಾಡನುಡಿಯುಂಟು. ಭುವನೈಕ ಜನನಿಯಾದ ನೀನೇ ನಿರ್ದಯವಾದರೆ, ಸಂಕಟದಿ ಸಾವ ಮಗನ ಈಗ ಕಾವರಿನ್ನಾರು ?—ಎಂದು ರೋದಿಸುತ್ತ ಇದ್ದಳು. ಈ ಪ್ರಳಾಪವನಾಲಿಸಿದ ಮಠದ ಮನೆಯ ಗಂಗಮ್ಮನ ಕರುಳು ಕರಗಿತು ; ಕಂಬನಿಗಳು ತುಂಬಿದುವು. ಬಂದು ನೋಡಿದ ಆ ಗಂಗಮ್ಮ,—ಎಲೆ ತಂಗಿ ! ಅತ್ತುದರಿಂದ ಆಗುವುದೇನು ? ಮೊದಲು ಗುರು ಪಾದಭಸಿತವ ತಂದು ತೊಡೆಯಿರಿ; ಗುರು ಪೊರೆಯುತ್ತಾನೆ- ಎಂದು ಹೇಳಿದಳು. ಇದ ಕೇಳಿದೊಡನೆ, ಕೇಳಿ ಕೇಳಿದ್ದನ್ನೆಲ್ಲಾ ಇದುವರೆಗೆ ಮಾಡಿ ನೋಡಿ ಸಾಕಾಗಿದ್ದ ಶಿಕ್ಷಕ ಅಯ್ಯಪ್ಪನು, ಆಗಲೇ ರೇಗಿಬಿಟ್ಟ : ಯಾವ ದೇವರಿಂದೇನು ? ನಮ್ಮ ನಮ್ಮ ಕರ್ಮದ ಕಾಟವ ಯಾವ ದೇವರೂ ತಪ್ಪಿಸಲಾರ ! ಧೂಳ್ತ ಗೀಳ್ತಕ್ಕೆಲ್ಲಾ ರೋಗ ನೀಗಿ ಹೋಗಿಬಿಡುತ್ತೋ ? ಸಾಕು ; ಸುಮ್ಮನೆ ತಲೆಕೆಡಿಸಬೇಡಿ,—ಎಂದುಬಿಟ್ಟ.

ವಿವೇಕಿಯಾದ ಗಂಗಮ್ಮ ಮತ್ತೆ ಹೇಳುತ್ತಾಳೆ:-ಅರ್ಚಿಸಿಕೊಂಬ ಅಯ್ಯನಾಗಿ, ಅಯ್ಯಾಚಾರ ಪಡೆದವನಾಗಿ, ಇದರ ಮೇಲೆ ಗುರು ಪ್ರಸಾದಿಯಾಗಿ ಸುಶಿಕ್ಷಕನೂ ಆಗಿರುವೆ. ಸದಾ ಲಿಂಗಪೂಜಕನಾದ ನೀನು, ಅಯ್ಯೋ ನಾಸ್ತಿಕನಂತೆ, ನಿಜಗುರು ದೇವತಾ ಭಕ್ತಿಯನ್ನೇ ನಿಂದಿಸುವೆಯಲ್ಲಾ ! ನಿಜವಾದ ಬ್ರಹ್ಮೋಪದೇಶಿಯಾದರೆ, ಶಾಂತಿ ಶೀಲರ ಸತ್ಪಥವ ಹಿಡಿಯಬೇಕು; ಸದುಪದೇಶವ ಸಮ್ಮತಿಸಬೇಕು, ಸುಗುಣ ಸದ್ಭಕ್ತಿ ಸತ್ಕ್ರಿಯಾ ಸಂಪನ್ನನಾಗಬೇಕು. ದಯಾದಾಕ್ಷಿಣ್ಯಪರನಾಗಿ ಗತಿಇಲ್ಲದವರಿಗೆ ಹಿತವನಾಚರಿಸಬೇಕು. ಇಂತಲ್ಲದ ಬ್ರಹ್ಮೋಪದೇಶಿಯು ಭಂಗಿತನಾಗುವನಲ್ಲದೆ, ಹುಲಿಯ ಚರ್ಮವ ಹೊದೆದ ಕತ್ತೆಯಂತೆ ನಗೆಗೀಡಾಗುವನು. ಮತ್ತೆ ಮತ್ತೆ ನಿನಗೆ ಒತ್ತಿ ಹೇಳುತ್ತೇನೆ ಕೇಳು ; ಗುರುದೇವತೆಗಳಲ್ಲಿಯ ನಮ್ಮ ನಂಬುಗೆ ಎಂಥದೋ, ಅಂಥದೇ ಫಲವೆಂದು ನಂಬು ನೀನೀಗ– ಎಂದಳು. ಅಳಲುರಿಯಿಂದ ತಳಮಳಿಸುತ್ತಿದ್ದ ಅಯ್ಯಪ್ಪನಿಗೆ ಗಂಗಮ್ಮನ ಈ ಉಪದೇಶಾಮೃತವು, ತೃಷೆಯಿಂದ ತಳಮಳಿಸುವವನಿಗೆ ತಣ್ಣೀರ ಎರೆದಂತೆ ಆಯಿತು. ಕೇಳುತ್ತಿದ್ದಂತೆ ಅಯ್ಯಪ್ಪನಲ್ಲಿ ಆಸ್ತಿಕ್ಯ ಬುದ್ಧಿ ಮೊಳೆಗೊಂಡಿತು ಕಳೆಗೊಂಡಿತು. ಇದಕ್ಕಾಗಿ ಗಂಗಮ್ಮನನ್ನು ಕೃತಜ್ಞತೆಯಿಂದ ಕೊಂಡಾಡುತ್ತ, ಆದರಂತೆ ಭಸ್ಮಮಯ ತೀರ್ಥವನ್ನು ಗುರು ಗದ್ದುಗೆಯಿಂದ ತಂದು, ಪ್ರಜ್ಞೆಯಿಲ್ಲದ ಮಗನಿಗೆ ಪ್ರೋಕ್ಷಿಸಿದನು, ಅಯ್ಯಪ್ಪ. ಮಗನಾಗ ಚೇತರಿಸಿಕೊಂಡು ಸತ್ತು ಹುಟ್ಟಿದಂತಾದ.

ಗುರುಪಾದ ತೀರ್ಥ ಹಾಗೂ ದೇವಗಂಗೆ ಇವೆರಡನ್ನೂ ತಕ್ಕಡಿಯಲ್ಲಿಟ್ಟು ತೂಗಿ ನೋಡಿದಾಗ, ಗುರುಪಾದೋದಕವೇ ಘನ ಹೊಂದಿತೆಂದು, ಅಯ್ಯಪ್ಪ ಮರಮರಳಿ ನಮಿಸಿದನು. ಸೂರ್ಯನ ಕಿರಣಗಳು ಚರಾಚರ ಪ್ರಪಂಚದ ಮೇಲೆಲ್ಲಾ ಒಂದೇ ಸಮವಾಗಿ ಗೋಚರಿಸಿದರೂ, ಅವನಿಗೆ ಆಪ್ತವಾದ ಕಮಲಗಳಷ್ಟೇ ಆಗ ಅರಳುತ್ತವೆ; ಆನಂದಿಸುತ್ತವೆ. ಸರ್ವವ್ಯಾಪಿಯಾದ ಶಿವನೂ ಸಹ ವಿಶ್ವಾಸಿಗಳಿಗೆ ವೇದ್ಯನಾಗುತ್ತಾನೆ.

–: ೧೬ನೇ ಸಂಧಿಗೆ ಸಹಾಯ ಮಾಡಿದವರು :–

( ಶ್ರೀಮತಿ ಈರಮ್ಮ ಬಸಪ್ಪ ಹರಾಳಿ )

— ೧೭ —

## ಪುತ್ರಾನುಗ್ರಹ ಕಷ್ಟ ನಿವಾರಣ.

ಸೂರಕೋಡೊಳಗೆ, ಈ ಮಠದ ಶಿಷ್ಯ ಪರಂಪರೆಗೆ ಸೇರಿದ 'ಮರಿಗೊಣ್ಣನವರ' ತರುಣೀಮಣಿ ಲಿಂಗಮ್ಮ, ಗೃಹಲಕ್ಷ್ಮಿಯಂತೆ ಇದ್ದಳು. ಈಕೆ ಪುತ್ರೇಚ್ಛೆಯಿಂದ ವಿಧ್ಯುಕ್ತ ವ್ರತಗಳನ್ನೆಷ್ಟೋ ಆಚರಿಸಿದಳು. ಸಂಕಲ್ಪ ಸಿದ್ಧಿಸದೆ ಸಂತಾಪಗೊಳುತ್ತ, ಕೊನೆಗೆ ಶಿವರುದ್ರಾಚಾರ್ಯನ ಮರೆಬಿದ್ದಳು. ಗದ್ದುಗೆಗೆ ತಪ್ಪದೆ ಇಪ್ಪತ್ತೊಂದು ದಿನ ಬಂದು ತೀರ್ಥವ ಸೇವಿಸಿದಳು. ಅನಂತರ ಆದ ಮಗನನ್ನು ಮುದ್ದಾಡಿ, ಮನೆಗುರುವ ಹೊಗಳಿದಳು. ಗುರುವಿಶ್ವಾಸವುಳ್ಳವರಿಗೆ ವಿಪತ್ತುಂಟೇ?

ಇಂಥದೇ ಇನ್ನೊಂದ ಹೇಳುವೆನು;– ಸೂಟೆ ಎಂಬ ಹೆಸರಿನ ಗ್ರಾಮದಲ್ಲಿ 'ಗುಬ್ಬೇನಕೊಪ್ಪದ' ಮನೆತನದವಳಾದ ಲಕ್ಷ್ಮಮ್ಮ, ಹನ್ನೆರಡು ವರ್ಷ ಪರ್ಯಂತ ಮಕ್ಕಳಾಗದಿದ್ದುದಕ್ಕೆ ದುಃಖಿಸುತ್ತ ಇದ್ದಳು. ತರುಣಿಯ ತನುವೆಂಬ ಬಳ್ಳಿಗೆ ತನಯನೇ ಫಲ! ವಿಫಲಳಾದ ನಾನೀಗ ವಿಡಂಬಕ್ಕೆ ಈಡಾದೆ. ಉಭಯ ಕುಲಕ್ಕೂ ಸಂತಾಪವಿತ್ತ ಸೌಭಾಗ್ಯ ಹೀನೆ ನಾನು! ನನ್ನದಿನ್ನೆಂಥ ಪಾಪವೋ! ಎಂದು ನೊಂದು ಹೊತ್ತಿಗೆಯವರೆಂದಂತೆ, ಅನ್ನ ತಿನ್ನದ ಹಾಗೆ, ಒನ್ನಿಯಪೂಜೆ ನಡೆಸಿದಳು. ಬಲ್ಲವರನೆಲ್ಲಾ ಭಯ ಭಕ್ತಿಗಳಿಂದ ಬೆಸಗೊಂಡಳು. ಜಗದೊಳಗೆ ಮಗನಾಸೆ ಅದೆಷ್ಟು ಮಿಗಿಲಾಗಿರುವುದು! ಸುತರಿಲ್ಲದವರ ಸಿರಿ ಎಷ್ಟಿದ್ದರೇನು-ಪತಿ ಇಲ್ಲದವಳ ಪ್ರಾಯದ ಸಿರಿಯಂತೆ ಅದು ಪ್ರಯೋಜನವಿಲ್ಲದ್ದು; ಪ್ರಯಾಸದಾಯಕವಾದದ್ದು. ಅಲ್ಲದೆ ವಂಧ್ಯೆಯ ಮುಖವ ಸಂಧ್ಯಾ ಸಮಯದಲ್ಲಿ ಸಖೀಜನ ಸಹ ನೋಡುವುದಿಲ್ಲ. ಮಂಗಳ ಕಾರ್ಯಗಳಲ್ಲಿಂತೂ ಮಾತೆತ್ತುವುದೇ ಬೇಡ. ಮಕ್ಕಳಾಗದ ಮಾನಿನಿಯ ಕಷ್ಟ, ಜನ್ಮಕ್ಕಿಂತ, ಲೆಕ್ಕವಿಲ್ಲದ ಕಲ್ಲಾಗಿ ಬಿದ್ದಿದ್ದರೂ ಸೃಷ್ಟಿಯಲ್ಲಿ ಸುಖಉಂಟು. ಹಿಂದಾವ ಜನ್ಮದಲ್ಲಿ ಯಾರ ಹಸುಳೆಗೆ ಹಾಲಾಹಲವನ್ನಿಕ್ಕಿ ಹತಿಸಿದೆನೋ, ಆ ಪಾಪಾತ್ಮಳಾದ ಎನಗೆ ಈಗದು ಬಂದು ಬಾಧಿಸುತ್ತಿರುವುದು– ಎಂದು ಏ ನೇ ನೋ ಕಲ್ಪಿಸಿಕೊಂಡು, ಚಿಣ್ಣರ ಚಿಂತಾಗ್ನಿಯಿಂದ ಬೆಂದು, ಸುತರಿಲ್ಲದ ಸಂಸಾರದಿಂದೇನೆಂದು ಬೇಸತ್ತು ಇರುವಲ್ಲಿ: ಆ ವೇಳೆಗೆ ಬಂದ ವೃದ್ಧೆ ಒಬ್ಬಳು ಎಲೆ ಮಗಳೆ! ಸೂರಕೋಡ ಸ್ವಾಮಿಯ ಮರೆವೊಕ್ಕರೆ, ನಿನಗಿರುವ ದುರ್ವಿಧಿಯ ದುಮ್ಮಾನ ದೂರವಾಗುವುದು! ನಿನ್ನ ನಂದನನ ಬಯಕೆ ನೇರವಾಗುವುದು. !– ಎಂದಳು. ಕೇಳಿದ ಲಕ್ಷ್ಮಮ್ಮ ಹಿಗ್ಗಿದಳು. ಮತ್ತು ಗುರು ಪ್ರೇರಣೆಯಿಂದಲೇ ಈ ವೃದ್ಧೆ ಆಡಿರಬಹುದೆಂದು ಭಾವಿಸಿ-ಅಜ್ಜೀ! ನೀನಾಡಿದಂತೆ ನನ್ನಿಚ್ಛೆ ಕೈಗೂಡಿದರೆ, ಆಗ ಗುರು ಮಠಕೆ ಆ ಬಾಲನೊಡಗೂಡಿ ಲೀಲೆಮಿಗೆ ನಾ ಹೋಗಿ, ಅಲ್ಲಿ ಜಂಗಮಾರಾಧನೆಯ ಮಾಡುವೆ! ಕೈಲಾದಷ್ಟು ಕಾಣಿಕೆಯ ಕೊಡುವೆ !! ಆ ಗದ್ದುಗೆಯ ಬಳಿ ಒಂದು ಅಂದದ ತೊಟ್ಟಿಲ ಕಟ್ಟಿ, ತೂಗಿ, ಪಾಡುವೆನು ಜೊಗುಳವ ಚಂದದಿಂದ !!! ಎಂದು ಹರಸಿದಳು. ಅಂದಿನಿಂದ ಹನ್ನೊಂದು ಅಮಾವಾಸ್ಯಗಳಲ್ಲಿಯೂ ತಪ್ಪದೆ ಮಠಕ್ಕೆ ಬಂದು, ತೀರ್ಥ ಪ್ರಸಾದವ ಸ್ವೀಕರಿಸಿದ ಬಳಿಕ, ಚಿನ್ನುಳ್ಳ ಚಿಣ್ಣನ ಪಡೆದಳು ಲಕ್ಷ್ಮಮ್ಮ. ನೋಡಿ ಸಿರಿಯಾಡಿದ ಆಕೆಯ ಸಖಿಯರು– ನೀರು ಬೆಂಕಿಗಳೆರಡನ್ನೂ ಕೂಡಿಕೊಂಡಿರುವ ಕಡಲಿನಂತೆ, ನಿಗ್ರಹಾನುಗ್ರಹ ಸಮರ್ಥನಾದ ಸ್ವಾಮಿ ಶಿವರುದ್ರನಿಗೆ, ಯಾವುದು ತಾನೆ ತಡೆದೀತು! ಕಾಮಿತವನೀವ ಇಂಥ ಸ್ವಾಮಿಯನ್ನೇ, ಸದ್ಭಕ್ತಿ ಪಾಶದಿಂದ ಸೆಳೆದುಬಿಟ್ಟೆಯಲ್ಲಾ ಲಕ್ಷ್ಮಮ್ಮಾ! ಧನ್ಯಳಾ ನೀನು !!- ಎಂದರು. ಲಕ್ಷ್ಮಮ್ಮನು ಹಡೆದ ಹನ್ನೊಂದನೆಯ ತಿಂಗಳಿಗೆ, ಮಗುವಿನೊಂದಿಗೆ ಮಠಕ್ಕೆ ಬಂದು, ಮೊದಲೇ ತಾನಾಡಿದ್ದ ಹರಕೆಗಳೊಳಗೆ, ಒಂದನೂ ಬಿಡದಂತೆ ಸಡಗರದಿಂದ ಮಾಡಿ, ಹಾಡಿ ಹರಸುತ್ತ ಹೋದಳು.

'ಗಾಡಗೊಳ್ಳಿ' ನಾಮದ ಕಾಲೂರಿನಲ್ಲಿರುವ ಮರಿಗೌಡನ ಪತ್ನಿ ಬಾಳಮ್ಮನಿಗೂ ಮಕ್ಕಳೇ ಆಗಿರಲಿಲ್ಲ. ಇದಕ್ಕಾಗಿ ಗಂಡ ಮರಿಗೌಡನು– ಬಂಜೆಯ ಕೂಟ ಕಾಟವೆಂದು

JNANA SIMHASAN JNANAMANDIR
LIBRARY
Jangamawadi Math, Varanasi
Acc. No. ....3.15....



ಬಾಳಮ್ಮನನ್ನು ಮನೆಯಲ್ಲಿ ಬಾಳಲಾರದಷ್ಟು ಕೋಡಾಡಿ ಕಾಡಿಬಿಟ್ಟ. ಈ ಕಾಟವ ತಾಳಲಾರದೆ ಒಂದು ದಿನ ತವರೂರಿಗೇ (ಸೂರಕೋಡಕ್ಕೆ) ಬಂದಳು. ಬೆಳಕಳಿದ ಚಂದ್ರನಂತೆ, ನಗೆಯಿಲ್ಲದ ಮಗಳ ಮುಖ, ತೋರಿತು. ಕಾರಣವೇನೆಂದು ಕೇಳಿದಳು ತಾಯಿ. ಬಾಳಮ್ಮ ಆಗ ಮಗನನೆತ್ತಾಡದಡಕ್ಕೆ-ಮರಗ್ಯೆ; ನೀರರಿತ ಹೊಂಡ, ಗರ್ಭಿಣಿ ಆಗದವಳ ಪಿಂಡ (-ಶರೀರ)- ಇವೆರಡೂ ಒಂದೇ ! ನಾನೇನ ಮಾಡಿದರೂ ಎಷ್ಟು ಕಷ್ಟ ಪಟ್ಟರೂ ಬಂಜೆ ಎಂಬ ಕಾರಣದಿಂದ, ಗಂಡ ನನ್ನನ್ನು ಮೆಚ್ಚುವಂತಿಲ್ಲ; ಮೋಹಿಸು ವಂತಿಲ್ಲ. ಪ್ರೀತಿಯ ಮಾತಂತೂ ಕೇಳಬೇಡ. ಸುಖ ದುಃಖ ಸಮಾಚಾರವೇ ಸೊನ್ನೆ, ಅದೂ ಹೋಗಲಿ; ದುಷ್ಟ ಕಾಡು ಪ್ರಾಣಿಯಾದರೂ ಬೇಕು, ಅದಕ್ಕಿಂತ ಕಡೆಯಾಗಿ ದ್ದೇನೆ ಅವನ ಪಾಲಿಗೆ. ಸಮಯಾಸಮಯವೆನ್ನದೆ ಸದಾ ದುಡಿಸಿಕೊಳ್ಳುವುದೊಂದೇನೋ ಗೊತ್ತು ಆತನಿಗೆ ಹಾಗೆ ದುಡಿದರೂ, ಅದರ ಮೇಲೊಂದು ಕಿಡಿಮಾತು ತಪ್ಪಿದ್ದಲ್ಲ ಬಹಳ ಮಾತುಗಳಿಂಪ ಏನವ್ವಾ ! ಒಟ್ಟಿಗೆ, ಬಂಜೆಯ ಭಂಗದ ಬಾಳುವೆಗೆ ಎಣೆಯಾ ಗುವ, ಇನ್ನೊಂದು ವಸ್ತುವೇ ಇಲ್ಲ ಇಳೆಯೊಳಗೆ, ದೇವ ದಾನದ ಮಾನವರ ಮಾತಂತಿ ರಲಿ, ಖಗ ಮೃಗ ಜಾಲಕ್ಕೆಲ್ಲಾ ಪ್ರಕೃತಿಜನ್ಯವಾಗಿ, ಮಕ್ಕಳ ಮೋಹ, ಮನೆಮಾಡಿ ಕೊಂಡಿಪುವುದು–ಎಂದಳು ಬಾಳಮ್ಮ. ತಾಯಿ ಆಗ– ಇದಕೇಕೆ ಕಳವಳ ಪಡುವೆ ಬಿಡು ಮಗಳೇ! ದಯಾಮಯನಾದ ಶಿವರುದ್ರ ಗುರುವ ಬೇಡಿದರೆ, ನಿನ್ನಿಷ್ಟ ನೆರವೇರುವು ದೊಂದು ದೊಡ್ಡದಲ್ಲ. ಈಗಲೇ ನೀನು ಮುಡುಪಕಟ್ಟಿ, ಐದು ಅಮಾವಾಸ್ಯೆಗಳಲ್ಲಿ ಗದ್ದುಗೆಯ ಆರಾಧಿಸುವೆನೆಂದು ಹರಕೆ ಮಾಡಿಕೋ– ಎಂದು ಬೋಧಿಸಿದಳು. ಅದರಂತೆ ಆಚರಿಸಿದ ಬಾಳಮ್ಮನಿಗೆ, ಅಲ್ಲಿಗೆ ವರ್ಷಕ್ಕಾಗಲೇ ಸಂತಾನವಾಗಲು, ಆಗ ಸದ್ಗುರು ಸಂದರ್ಶನ ಪಡೆದು, ಹರಕೆಯನೊಪ್ಪಿಸಿ ಹರುಷದಿಂದ ಹೋದಳು ಬಾಳಮ್ಮ.

ಸೂರಕೋಡ ಸಮೀಪದಲ್ಲಿರುವ ಮದಗುಣಿಕೆ ಎಂಬ ಊರಿನಲ್ಲಿ ಮಡಿವಾಳರ ತಿಪ್ಪಮ್ಮನೆಂಬ ಕಡುಜಾಣೆ ಇದ್ದಾಳೆ. ಈಕೆಯ ಮಗನಿಗೆ ಬಾಯ್ದುಂಬ ಅಗ್ರಗಳಾಗಿ ಉಗ್ರ ಸ್ವರೂಪ ಹೊಂದಿದುವು. ಉಣ್ಣುವ ಬಾಯಿಯಲ್ಲಿ ಕೀವಾಗಿ ನೋವಾಗಿ ಸೋರುತ್ತ ಸುರಿಯುತ್ತ, ಊಟವೇ ನಿಂತು ಹೋಯಿತು. ವೈದ್ಯ ಚಿಕಿತ್ಸೆಯಿಂದ ಏನೂ ಸಾಧ್ಯವಾಗಲಿಲ್ಲ. ಅನ್ನ ಇಲ್ಲದ ಮೇಲೆ ಮಗನಿನ್ನು ಉಳಿಯಲಾರನೆಂದು, ಬಹಳವಾಗಿ ಅತ್ತತ್ತು ಆಸತ್ತ ತಿಪ್ಪಮ್ಮನು, ಗುರು ಸ್ಮರಣೆ ಮಾಡುತ್ತಿದ್ದಂತೆಯೇ ನಿದ್ರೆ ಹೋದಳು. ಕನಸಿನಲ್ಲಿ ಕಾಣಿಸಿಕೊಂಡ ಗುರು ಶಿವರುದ್ರಸ್ವಾಮಿಯು-ಶೋಕವಿದು ಸಾಕುಬಿಡು ಮಗಳೆ ! ತೆಗೆದುಕೋ ಈ ರುದ್ರಾಕ್ಷಿಯ– ಎನುತ್ತ ಆಶೀರ್ವದಿಸಿದನು. ಎದ್ದ ಬಳಿಕ ಕಂಡ ಕನಸ, ಗಂಡನಿಗೆ ಹೇಳಿದಳು. ಆಲಿಸಿ ಅತಿ ಸಂತುಷ್ಟನಾದ ಪತಿಯು-ಸತಿಯಳೆ! ನಿನ್ನ ಸಂಶಯವ ಬಿಡು. ಭವರೋಗ ನಿವಾರಕನಾದ ಆ ಮಹಾ ಗುರುವಿನ ಕೃಪಾ ಕಟಾಕ್ಷ ಇಂತಾಗಿರುವಾಗ, ಮಗನ ರೋಗವಿನ್ನು ಹೋಗುವುದು ನಿಶ್ಚಯ. ಅವನ ನಾಮಸ್ಮರಣೆಯೇ, ಇದಕ್ಕೆ ನಿಜವಾದ ಮದ್ದು ! ಎಂದು ಎಚ್ಚರಿಸಿದನು. ಈ ಮಗ ಹುಟ್ಟಿದ್ದು ಅವನ ಅನುಗ್ರಹದಿಂದಲೇ ! ಇವನ ಕಾವ ಸಾವ ಸಾಮರ್ಥ್ಯ ಆ

ಸ್ವಾಮಿಗೇ ಸೇರಿದ್ದು !—ಎಂದು ನಂಬಿದ ತಿಪ್ಪವ್ವನು, ಗುರು ಸ್ಮರಣ ಮಗ್ನಳಾಗಿರುವಾಗ ಅದು ಅಂದಿನಿಂದಲೇ ದಿನದಿನಕ್ಕೆ ಇಲ್ಲದಂತಾಗಿ, ಮಗ ಪೂರ್ಣ ಗುಣ ಹೊಂದಿದನು ಮದ್ದಿಗೆ ಮಣಿಯದ ಮಗನ ರೋಗವ, ತನ್ನ ಶುದ್ಧ ಸ್ಮರಣ ಮಾತ್ರದಿಂದಲೇ ಪರಿಹರಿಸಿದ ಗುರುವಿಗೆ, ತಿಪ್ಪವ್ವ ತನ್ನ ಕೃತಜ್ಞತೆಯ ಕಾಣಿಕೆ ಇತ್ತು, ಸುಖ ಹೊಂದಿದಳು.

—: ೧೭ನೇ ಸಂಧಿಗೆ ಸಹಾಯ ಮಾಡಿದವರು :—

**ಶ್ರೀ ಬಸನಗೌಡ ಕಲ್ಲನಗೌಡ ಮರಿಗೊಣ್ಣವರ.**

**ಶ್ರೀ ಬಸನಗೌಡ ಸಿದ್ಧನಗೌಡ ಪಾಟೀಲ ,ಸಾ।। ಸೂರಕೋಡ.**

## — ೧೮ —

ಸೂರಕೋಡೂರೊಳಗೆ ಕಲ್ಲನಗೌಡರ ಪೀಳಿಗೆಯವನಾದ ಶಿವಗೌಡ, ಸತಿಯೊಂದಿಗೆ ಸಂಪತ್ಶಾಲಿಯಾಗಿದ್ದ. ನಿಸ್ಸಂತಾನಿಯಾದ ಈತ ನಿರುಪಾಯನಾಗಿ, ಡೋಣಿ ಎಂಬ ಊರಿನೊಳಗಿದ್ದ ತನ್ನ ತನು ಸಂಬಂಧಿಯಾದ ಲಿಂಗಪ್ಪನನ್ನು, ಅಳಿಯ ಸಂತಾನವಾಗಿ ಇಟ್ಟುಕೊಂಡಿದ್ದನು. ಅಳಿಯನಿಗೆ, ಒಂದೇ ಒಂದು ಮಗು ಆಯಿತು. ಅದಕ್ಕೂ ವಿಧಿವಶದಿಂದ ಬಾಲಗ್ರಹ ಬೇರೆ ಗಂಟು ಬಿದ್ದು, ಏನಾದರೂ ಜ್ಞಾನವೇ ಬರಲಿಲ್ಲ. ಆಗ ಹಡೆದವ್ವ, ತನ್ನ ತೋಳ್ ತೊಡವಾದ ತನಯನನ್ನು, ತೊಡೆಯ ಮೇಲೆ ಹಾಕಿಕೊಂಡಳು. ಆಕೆಯ ಕಂಬನಿಗಳು ತುಂಬಿ ಧಾರಾಕಾರವಾಗಿ ಧುಮುಕುತಿದ್ದುವು. ಶೋಕಾತಿರೇಕದ ದೊಡ್ಡ ಕೂಗು ಹೊರಹೊಮ್ಮಿತು ; ಹಡಿದೊಡೆಲ ಬರಿದು ಮಾಡಿ ಅಯ್ಯೋ ನನ್ನ ಮಗನೆ, ಸಾವಿನೊಡಲ ಸೇರಿದೆಯಾ ಇಂದು ? ಎಲ್ಲಿಗೆ ಹೋದೆ ? ಈಗಲ್ಲಿ ಯಾರೊಡನಿರುವೆಯೋ ಕಂದಾ ? ಮಾತಾಡು, ಮಗನೆ ಮಾತಾಡಪ್ಪಾ ! ನಿನ್ನ ಜೋಡಿಯ ಮಕ್ಕಳು ಬಂದು ಆಡಲು ಕರೆದತೆ,ಪೀಡೆಯ ಗ್ರಹ ಹೊಡೆದು, ಮಡಿದ ನೆನ್ನಲೆ ಮಗನೇ ? ಇಂತು ಪ್ರಳಾಪಮಾಡಿ ಅಳವಳಿದು ಬಾಯಾರಿ ಮತಿ ಗತವಾಗಿ, ಅತಿಯಾಗಿ ಹಣೆಯ ಉಧ್ದಿಕೊಳ್ಳುತ್ತ, ಮಗನಳಿದ ಬಳಿಕ ನಾನುಳಿದು ಭೂ ಭಾರವಾಗಿ ಇರುವದಕ್ಕಿಂತ, ಸಾವುದೇ ಲೇಸೆಂದು ಸಹಸಾ ಪ್ರಾಣತ್ಯಾಗಕ್ಕೆ ಪ್ರಯತ್ನಿಸಿದಳು. ಅಲ್ಲಿದ್ದ ಬಂಧುಜನ ತತ್‌ಕ್ಷಣ ಅವಳನ್ನು ಹಿಡಿದು ತಡೆದರು. ಆಗ ತೀರಾ ಮುಪ್ಪಿನ ಮುದುಕಿ ಒಬ್ಬಳು- ಛೀ ಛೀ ಬಿಡು ಬಿಡಿದೇನ ಉದ್ಯೋಗಿಸಿದೆ ? ನಿನಗೇನು ಥರವಲ್ಲ. ಗುರು ಶಿವರುದ್ರನ ಗದ್ದುಗೆಗೆ ಶರಣಾಗಿ, ಹಸುಳೆಯ ಹರಣವನು ಬೇಡು. ಕೃಪೆಯಿಂದ ಕಾಯುವನು; ಇದ ನಂಬವ್ವಾ !- ಎಂದಳು ಈ ಮಾತಿಗೆ ಅಲ್ಲಿದ್ದ ಅಸೂಯಾಪರಳೊಬ್ಬಳು ತಲೆ ಅಲ್ಲಾಡಿಸುತ್ತ— ಆಯುವಿದ್ದವರನ್ನು ಔಷಧಿ ಕಾಯುವುದು ಸತ್ಯ. ಆದರೆ ಮರಣಕ್ಕೆ ಎಲ್ಲಾದರೂ ಮದ್ದುಂಟೇ ? ಮಹಿಮ ಗಿಹಿಮರ ಆಟವೇನೂ ಈ ಮರಣದ ಮುಂದೆ ಸಾಗುವುದಿಲ್ಲ. ಅದೆಲ್ಲಾ ನಮ್ಮ ಬೆಪ್ಪುತನ ಅಷ್ಟೇ !— ಎಂದಾಡಿದಳು, ಕೆಸರನ್ನೇ ಕುಡಿವ ಕಪ್ಪೆ ಅರಿವುದೇ, ತಾವರೆಯ ಮಕರಂದವ ? ಹರ ಮುನಿದರೆ ಗುರು

ಕಾಯ್ವನು–ಎಂಬ ಸತ್ಯವನ್ನು, ದೂರುವ, ಆ ದುರುಳೆಯರು ಅದೆತ್ತ ಬಲ್ಲರು ? ಗ್ರಾಮ ದೇವಿಗೆ ಬಿಟ್ಟ ಸೊಕ್ಕಿನ ಕೋಣನಂಥಾ ಜನ ಅದು ! ಯಾರ ಗಣನೆಯೂ ಇಲ್ಲದೆ ಮಲೆತು ಅಲೆಯುವ ಈ ಜನಕ್ಕೆ, ಪರಹಿತವಂತೂ ಮೊದಲೇ ನಾಸ್ತಿ; ಅದು ಹೋಗಲಿ ತಮ್ಮ ಹಿತವಾದರೂ ಬೇಡವೇ? ತಾವೂ ಕೆಡುವುದರ ಜೊತೆಗೆ; ಇತರರನೆಲ್ಲಾ ಕೆಡಿಸುವ ಈ ಕೇಡಿಗಳನ್ನು, ವಿಧಿ ಅದೇಕೆ ಹುಟ್ಟಿಸಿದನೋ ! ಇಂಥವರ ಭೇಧೋಪದೇಶ ಪ್ರಾಶಸ್ತ್ಯ ಪಡೆವುದಲ್ಲದೆ, ಬೇಗ ಪರಿಣಾಮಕಾರಿಯೂ ಆಗುತ್ತದಲ್ಲಾ ! ಇದೇನು ಚೋದ್ಯ! ಆದರೆ ಈ ದುರುಳೆಯ ಭೇದೋಪದೇಶ, ಆ ಮಗುವಿನ ಮಾತೆಯ ಮನಕ್ಕೆ ಸೊಗಸಲಿಲ್ಲ. ಏಕೆಂದರೆ ಗುರು ಶಿಷ್ಯರ ಸಂಬಂಧ, ಸೂರ್ಯ ಮತ್ತು ಸೂರ್ಯಕಿರಣಗಳಂತೆ ಅದು ಜನ್ಮತಃ ಅಭೇದ್ಯ ವಾದುದು. ಮೊದಲೇ ಹೇಳಿದ ಆ ವೃದ್ಧೆಯ ವಚನದಂತೆ, ತಾಯಿ ಆಗ-ಗುರುವೇ ಶಿವ ರುದ್ರ ಶಿವಯೋಗಿ ! ನಿನ್ನಂಥ ಶಕ್ತ ಮತ್ತೊಬ್ಬನಿಲ್ಲ. ನನ್ನ ಮಗ ಬದುಕಲಿಕ್ಕೆ, ವೃದ್ಧೆ ಎಂದಂತೆ, ನಿನ್ನ ಶ್ರೀಪಾದಭಸ್ಮತೀರ್ಥವೇ ಮದ್ದು ! ಎಂದು ಪ್ರಾರ್ಥಿಸಿದಳು. ಮತ್ತು ಅದರಂತೆ ಅದ ತಂದು ತೊಡೆಯಲು, ಅಲ್ಲಿಗೇ ಬಾಲಗ್ರಹ ಬಿಟ್ಟು ಬಿಟ್ಟಿತು, ಅನಂತರ ಆ ಮನೆಯವರು ಮಗನೊಂದಿಗೆ ಮಠಕ್ಕೆ ಬಂದು ; ಗುರಬ್ರಹ್ಮ, ಗುರುವಿಷ್ಣು, ಗುರು ಸದಾಶಿವ ಎಂಬಂತೆ ಸೃಷ್ಟಿಸ್ಥಿತಿ ಲಯಾಧಿಕಾರಿಯಾದ ಗುರುವೇ ನಿನಗಾರು ಸರಿಯೆ ? ಎಂದು ಹಾಡಿ ಹರಸುತ್ತ ಹೋದರು.

ಇನ್ನೊಂದು ಪಕ್ಕದ ಗ್ರಾಮವಾದ ಕೊಂಗವಾಡದಲ್ಲಿಯ ತಾಯಮ್ಮ ಎಂಬವಳು ತಡೆಯಾದ ಪ್ರಸವ ವೇದನೆಯಿಂದ ತತ್ತರಿಸುತ್ತ ಇದ್ದಳು. ಬಲ್ಲವರು ಮಾಡಿದ ಉಪಾ ಯವೆಲ್ಲಾ ಬರಿದಾಯಿತು. ಇನ್ನೇನು ಇರಲಾರಳೆಂದು ಹಿತಸ್ಥರೆಲ್ಲ ವ್ಯಥೆ ಮಾಡುತ್ತ, ಹೆಣ್ಣಾಗಿ ಹುಟ್ಟುವುದು ಕಷ್ಟ ! ಹುಟ್ಟಿದರೂ ಬಾಳುವೆಯಲ್ಲಿ ಪತಿಗೆ ಹಿತೆಯಾಗಿ, ನಯ ವಿನಯ ನಡೆವಳಿಯವಳು ಆಗುವುದು ಇನ್ನೂ ಕಷ್ಟ ! ಇಂತಾದರೂ ಹೆಣ್ಣಾಗಿ ಹೆರಿಗೆ ಆಗುವುದಂತು ಹಿರಿಯ ಕಷ್ಟ !! ಎಂದು ಚಿಂತಿಸುತ್ತ ಇದ್ದರು. ಆಗ ಕೂಡಿದ ಜನರೊ ಳಗೆ ಒಬ್ಬಳ ಮೈಮೇಲೆ ಗಣ ಬಂದು ( ನಿರೂಪ ಹೊಂದಿ ), ನೆರೆಯೊಳಿರುವ ಗುರುವ ಮರೆತು ಮರುಗುವುದಿದೇನು ಭ್ರಾಂತಿ ? ಆ ಗುರು ತೀರ್ಥವ ತಡಮಾಡದೆ ತಂದು, ಮೊದಲು ಕುಡಿಸಿರಿ, ಎಂದಿಷ್ಟೇ ಹೇಳಿದ ಬಳಿಕ ಆವಳ ಮೈಮೇಲಿನ ನಿರೂಪ ಬಿಟ್ಟಿತು. ಆ ಗುರುವೇ ಕರುಣಿಸಿ ಇಂತು ನುಡಿಸಿದನೆಂದು, ಅದೇ ಪ್ರಕಾರ ಆ ತೀರ್ಥವ ತಾಯಮ್ಮ ನಿಗೆ ಕುಡಿಸಿದರು. ಆಗ ಎರಡು ಮಕ್ಕಳನ್ನು ಏಕ ಕಾಲದಲ್ಲಿ ಹೆತ್ತಳು. ಈ ಮಕ್ಕಳಿಗೆ ಪಾರ್ವತಿ ಮತ್ತು ಪರಮೇಶ್ವರ, ಎಂಬ ನಾಮಕರಣ ಆಯಿತು.

ಅದೇ ಕೊಂಗವಾಡದಲ್ಲಿ ಕೋಟಲಿಂಗಪ್ಪ ಎಂಬವನು ಇದ್ದಾನೆ. ಈತನ ಸತಿ ಚೆನ್ನಮ್ಮನಿಗೆ, ಹೆರಿಗೆ ಆಗುವ ಸಮಯದಲ್ಲಿ ಗಡುಸಾದ ಗ್ರಹವೊಂದು ಹಿಡಿದು, ಹಿಂಸೆ ಮಾಡಿತು. ಇದರಿಂದ ಪ್ರಸವ ವೇದನೆಯನ್ನೂ ಅನುಭವಿಸುತ್ತ, ಎಂಟು ದಿನಗಳು ಗತಿಸಿದುವು. ಇಂತಾದರೆ ಏನಿದು, ? ಇವಳ ಜೀವವನ್ನೇ ವ್ಯರ್ಥವಾಗಿ ಕಳೆದು ಬಿಡುವು ದಲ್ಲಾ ! ಈ ಪಿಶಾಚವ ಪರಿಹರಿಸುವ ಮಾಂತ್ರಿಕರೇ ಇಲ್ಲವೆ ? ಎಂದು ಜನ ಆಡುತ್ತಿ

ರುವಲ್ಲಿ : ನಾರಿಯೊಬ್ಬಳು ಬಂದು, ಶಿವರುದ್ರ ಶಿವಯೋಗಿಯ ಹೆಸರಿನಿಂದ ಭಸ್ಮೋದಕವ ಕುಡಿಸಿದಳು ಚೆನ್ನಮ್ಮಗೆ. ಆಗ ಭೂತವದು, ಭೀತಿಯಿಂದ ಅರಚುತ್ತ ಬಿಟ್ಟು ಹೋಯಿತು. ಆ ಒಡನೆ ಚೆನ್ನಮ್ಮ ಸುಖದಿಂದ ಸುತನ ಹೆತ್ತಳು. ಮರಣ ಕಂಟಕದಿಂದ ಮುಕ್ತಳಾದ ಚೆನ್ನಮ್ಮನು, ಗುರುದೇವ ಶಿವರುದ್ರ ! ನಿನ್ನ ಪರಮೋಪಕಾರವ ನಾನೆಂತು ತೀರಿಸಲಿ ! ಗುರು ದೇವತೆಗಳು, ಪರಮ ಪುಣ್ಯಕ್ಷೇತ್ರ, ಮಂತ್ರ ತಂತ್ರ, ಇವುಗಳ ಸತ್ಯಸಾಮರ್ಥ್ಯವನ್ನು, ಕಲಿ ಮಹಿಮೆಯಿಂದ ಕೆಡು ತೆಗಳುವುದೇ ಹೊಲ್ಲ ! ನಿಮ್ಮಗಳ ಸ್ಮರಣದಿಂದಲೇ, ಕಲಿಹರಣ ಆಗುವುದು ಭಕ್ತರಿಗೆ. ಹರನ ಜಡೆಮುಡಿಯಿಂದ ಪೊಡವಿಗಿಳಿದಾ ಗಂಗೆ, ಗುರುವೆ ನಿಮ್ಮಡಿಯ ಉಂಗುಟದ ಹುಡಿಯ ಬಿಡದೆ ತೊಡೆಯಲು ತಾನೆ ಬಯಸಿ ಬಂದಿಹಳು; ಎನ್ನುವಾಗ, ಧರೆಯನುದ್ಧರಿಸ ಬಂದ ಪತಿತ ಪಾವನ ಗುರುವೆ ! ನಿಮ್ಮ ಘನವ ಬಣ್ಣಿಸುವರಾರು ? ನಿಮಗೆ ನಮೋ ನಮಸ್ತೆ ಎಂದು, ಗದ್ದುಗೆಯ ಸನ್ನಿಧಿಯಲ್ಲಿ ಗುರುಭಕ್ತಿ ಗೌರವ ಸಲ್ಲಿಸಿದಳು.

೧೮ನೇ ಸಂಧಿಗೆ ಸಹಾಯಮಾಡಿದವರು

**( ಶ್ರೀಮತಿ ಗಂಗವ್ವ ಮರಿಗೌಡ್ರ.**
**ಶ್ರೀಮತಿ ಬೋರವ್ವ ಹಿರೇಗೌಡ್ರ ಸಾ|| ಕೊಂಗವಾಡ )**

— ೧೯ —

ಬಡತನದ ಬಾಳುವೆಯಲ್ಲಿ ಹೆಸರುಳ್ಳ ಹಿರಿಯನಾದ, ಹುಸೇನಸಾಬು ಎಂಬ ಮಹಮ್ಮದೀಯನೊಬ್ಬ, ಸೂರಕೋಡ ಊರಿನವನಾಗಿ ಇದ್ದಾನೆ. ಈತನಿಗೆ ನಾನಾಸಾಬನೆಂಬ ನಂದನನುಂಟು. 'ಬಡತನದ ಭಂಗದ ಜೊತೆಗೆ ಬೊಮ್ಮಾದೇವರ ಕಾಟ ಬೇರೆ ಎಂಬಂತೆ, ಭಂಗದಲ್ಲಿರುವಾಗ ನಾನಾಸಾಬನ ಕಾಲ್ಗಳು ಇದ್ದುದಿದ್ದಂತೆ ನಿರ್ನಿದುತ್ತವಾಗಿ ಸವೆದುಬಿಟ್ಟು, ನಡೆವುದೇ ನಿಂತು ಹೋಯಿತು. ಮೊದಲೇ ಕಡುಬಡವ; ಇಂಥ ಇಲ್ಲದವನಿಗೆ ನೆರವ ನೀಡುವ ಬಲ್ಲಿದರಾರುಂಟು ? ಘನ ವಿನಯದಿಂದ ಬೇಡಿದರೂ ಕನಿಕರಪಟ್ಟು ಕೊಡುವ ಕರುಣಿಗಳಿಲ್ಲ. ಶ್ರೀಮಂತರಾದ ಸ್ನೇಹಿತರಂತು ಸ್ವಪ್ನದಲ್ಲಿಯೂ ಇಲ್ಲ. ಮಗನಿಗೆ ನೋಡಿದರೆ ಎಷ್ಟೂ ಗುಣವಾಗಲಿಲ್ಲ. ಹೀಗೆ ಹುಸೇನಸಾಬು ದಾರಿದ್ರ್ಯದಿಂದ ದಿಕ್ಕಿಲ್ಲದವನಾದರೂ, ಸತ್ಯಕ್ಕಾಗಿ ಸತ್ತರೂ ಚಿಂತೆಯಿಲ್ಲ; ಮಿಥ್ಯವನ್ನೆಷ್ಟೂ ಸಹಿಸುವವನಲ್ಲ. ಮೈಯಾರೆ ಎಡೆಬಿಡದೆ ದುಡಿಯುವುದರಲ್ಲಿ ಶೂರ ; ಸಜ್ಜನರೊಂದಿಗೆ ಸವಿಮಾತು; ದುರ್ನೀತಿ ದೂರ, ಧರ್ಮವ ಬಿಟ್ಟು ಬಾಳನು. ಇಷ್ಟೆಲ್ಲಾ ಗುಣರತ್ನಾಕರನಾಗಿದ್ದರೂ, ಈ ವಿಪತ್ತಿನಲ್ಲಿ ಅವನನ್ನು ಬಡಸಾಬಿ ಎಂದು ಯಾರೂ ನೋಡರು; ನುಡಿಸರು. ಆಗ ಹುಸೇನಸಾಬು ತನ್ನೊಳಗೆ ಎಂದು ಕೊಳ್ಳುತ್ತಾನೆ: ತವಕಿಸುವ ಬಡವರ ಸಂಕಲ್ಪದಲೆಗಳೆಲ್ಲಾ, ತುಳುಕುವ ತಾರುಣ್ಯದ ವಿಧವೆಯ ಮೊಲೆಗಳಂತೆ ಸುಮ್ಮನೆ ಮೂಡುತ್ತವೆ; ಬಾಡುತ್ತವೆ. ಹೊನ್ನುಳ್ಳ ಧನಿಕನನ್ನು ಅನ್ಯರೂ ಸಹ ತನ್ನವನೆಂಬರು ನೆಲೆಗೆಟ್ಟ ಬಡವನಿಗೆ ತನ್ನವರೂ ಕೂಡ ಅನ್ಯರಾಗುವರು. ಆಹಾ ಏನಿದಾಶ್ಚರ್ಯ! ಕುಲ ಜಾತಿ ರೂಪ ವಿದ್ಯಾ ಬಲಶಾಲಿಯಾದ ವರನಿಗೆ ತಾವಾಗಿ ಕರೆದು ಕನ್ಯೆಯ ಕೊಡು

ವಂತೆ, ಬ್ರಹ್ಮನೆನಗೆ ಒಲಿದಿತ್ತನೇ ಈ ಚೆನ್ನಾರೆ ಚೆಲುವೆಯಾದ ದಾರಿದ್ರ್ಯ ಕನ್ಯೆಯಾ ! ಲೋಕ ಕಂಟಕವಾಗಿದ್ದ ಸ್ಮರನನ್ನೂ, ಪುರ ಮೂರನ್ನೂ ಹರನು ಸುಟ್ಟುರುಹಿದ. ಆದರೆ ಈ ಒಡಲನಾವರಿಸಿ ಸುಡುವ ಕಡು ಬಡವನೆಂಬ ಬೇಗೆಯ, ಬಗೆಹರಿಸುವರನ್ನೇ ಕಾಣೆ ನಾನು. ವಿವಿಧ ವಿಷಕ್ಕೆಲ್ಲಾ ಮದ್ದುಂಟು ವೈದ್ಯರಲ್ಲಿ; ಎಡೆಬಿಡದೆ ಕಾಡುವೀ ದಾರಿದ್ರ್ಯ ವಿಷಕ್ಕೆ ಮಾತ್ರ. ಮದ್ದೇ ಇಲ್ಲ ಜಗದಲ್ಲಿ. ಮೃತ್ಯುವಾದರೂ ಒಂದು ವೇಳೆ ಬೇಕು ; ಭೀಕರದ ಬಡತನವಿದು ಯಾರಿಗೂ ಬೇಡ. ಏಕೆಂದರೆ ಮೃತ್ಯುವಿನ ವ್ಯಥೆ ಕ್ಷಣಮಾತ್ರದ್ದು; ಬಡತನದ ವ್ಯಥೆ ಯಾವಜ್ಜೀವವಾದುದು. ಹರಸಿ ವ್ರತವನಾಚರಿಸಿದರೂ, ಸಿರಿವಂತನು ಸುತನೊಬ್ಬನನ್ನೂ ಕಾಣ ! ವ್ರತಗಿತ ಏನೂ ಇಲ್ಲದ ಗತಿಗೆಟ್ಟ ಬಡವನಿಗೆ ಮಕ್ಕಳ ಸಂಖ್ಯೆ ಮಿತಿಮೀರಿದೆ. ವಿಧಿವಿಲಾಸ ವಿಚಿತ್ರವಾದುದು! ಮನೆತುಂಬ ಮಕ್ಕಳುಳ್ಳ ನನ್ನ ಸಂಸಾರವನ್ನು, ಬಲವಿಲ್ಲದ ನಾನೊಬ್ಬನೇ ನಿರ್ವಹಿಸುವುದು ಹೇಗೆ? ಅನ್ನದೊಂದ ಗುಳಿಗೇ ಈಗ ಗತಿ ಇಲ್ಲವಲ್ಲಾ ದೇವರೆ ! ಎಂಬ ಅಳಲಿಂದ ಅಲೆದಾಡುತ್ತಿರುವ ಕಾಲದಲ್ಲಿಯೇ, ಮಗನ ಕಾಲುಗಳೂ ಹೋದುವು. ಮುಂದೇನು ಗತಿ ? ಎಂಬ ಚಿಂತಾಗ್ರಹ ವಶನಾಗಿ ಇರುವಾಗ, ಉಪಾಯವೊಂದು ಹೊಳೆಯಿತು : ಗುರು ಶಿವರುದ್ರ ಸ್ವಾಮಿಯ ಗದ್ದುಗೆಗೆ ಮರೆಬಿದ್ದು ನೋಡುತ್ತೇನೆ. ನಾನೇನೋ ಹಣವಿಲ್ಲದವನು. ಗುಣಪ್ರಿಯನಾದ ಗುರುವಿಗೆ ಹಣದಿಂದೇನು ? ಬಡವರ ಬಂಧುವಾದ ಈ ಗುರುವಿನಿಂದಲ್ಲದೆ, ಬೇರಾವುದರಿಂದಲೂ ನನ್ನ ಮಗನ ಕಾಲು ಬರಲಾರವು. ಎಂದು ಯೋಚಿಸಿ. ಆಗಲೇ ಗುರು ಗದ್ದುಗೆಗೆ ಬಂದು ಗುರುವೇ ! ನನ್ನ ಬಡತನ ಇದ್ದರೂ ಇರಲಿ ; ಈಗ ನನ್ನ ಮಗನ ಕಾಲು ಹೋಗಿದ್ದುದರಿಂದ ನನ್ನ ಕುಟುಂಬಕ್ಕೆ ಜೀವನೋಪಾಯದ ಮಾರ್ಗವೇ ಇಲ್ಲವಾಗಿದೆ. ಇದಕ್ಕಾಗಿ ನಿನ್ನ ಚರಣಕ್ಕೆ ಮರೆಬಂದೆ. ದಯೆಯಿಂದ ನೋಡಿ ಮಗನ ಕಾಯಯ್ಯಾ ತಂದೆ! ಸರ್ವಾಂತರ್ಯಾಮಿಯಾದ ನೀನು ಅರಿಯದಿದು ಯಾವುದಿದೆ? ನಿತ್ಯವೂ ಹೊತ್ತಾರೆ ಪೈದೊಳೆದು ಮಗನ ಕಳುಹಿಸುವೆನು ನಿನ್ನ ಮಠಕೆ. ಕಾಲುಗಳಿಗೆ ಬಲವ ಇತ್ತು, ನಿರ್ವಿಘ್ನಗೊಳಿಸಿ ಕಾಪಾಡು ಸ್ವಾಮಿ ! ಎಂದು ಸಂಕಲ್ಪ ಮಾಡಿದ ಹುಸೇನ ಸಾಬು, ಅದರಂತೆ ನಿತ್ಯವೂ ಮಠಕ್ಕೆ ಮಗನ ಕಳಿಸುತ್ತಿದ್ದನು, ಹೀಗೆ ಆಚರಿಸುತ್ತಿದ್ದಂತೆ ಹೀಗಿ ಹೋಗಿದ್ದ ಅವನ ಕಾಲುಗಳು, ಅಲ್ಲಿಂದ ಕೆಲವು ದಿನಗಳಲ್ಲಿಯೇ ಪೂರ್ವದಂತಾಗಿ ಯಥಾಪ್ರಕಾರ ತಿರುಗಾಡಿದನು ನಿಶ್ಚೇತನವಾದ ತಿದಿಯ ಉಸಿರಿನಿಂದ ಕಬ್ಬಿಣ ಕರಗುವುದೆನ್ನುವಾಗ, ಶಿವಮಂತ್ರಮಯನಾದ ಗುರುವಿನ ಉಸಿರಿಂದ, ಪಾಪ ಬಂಧನ ಪಲ್ಲಟವಾಗದಿರುವುದೆ? ಈ ರೀತಿ, ಸ್ವಧರ್ಮ ನಿಷ್ಠರಾದ ಸರ್ವಜಾತಿ ಮತ ಪಂಥಗಳೂ, ಈ ಶ್ರೀ ಗುರುವಿಗೆ ಮರೆಬಿದ್ದು, ಸಂಕಲ್ಪ ಸಿದ್ಧಿಯ ಪಡೆದು ಪೋಗುತ್ತಿರುವರು. ಸತ್ಯೋದ್ಧಾರ ಚರಿತರಾದ ಮಹಾ ಪುರುಷರಿಗೆ " ವಸುದೈವ ಕುಟುಂಬಕಂ " ಎಂಬ ಆರ್ಯೋಕ್ತಿ ಯಥೋಚಿತವಾಗಿ ಸಲ್ಲುವುದು, ನಿಲ್ಲುವುದು. ಶಿವಮಂತ್ರಾನು ಸಂಧಾನದಿಂದ ನಿಜ ಶಕ್ತಿಯನ್ನೂ, ನಿಜಾತ್ಮ ಶಕ್ತಿಯಿಂದ ಶೈವ ತೇಜಸ್ಸನ್ನೂ, ಶೈವತೇಜಸ್ಸಿನಿಂದ ಶಿವ ಯೋಗವನ್ನೂ, ಶಿವಯೋಗದಿಂದ ಚಂದ್ರಮನ ಮೀರುವ ಶಾಂತಿಯನ್ನು ಸಂಪಾದಿಸಿಕೊಂಡ ಶಿವರುದ್ರ ಗುರುವರ್ಯನು— ಮೋಡದೊಳಗಿನ ಸೂರ್ಯನಂತೆ ತಾನೆ ತಾನಾಗಿ ಬೆಳಗುತ್ತ ಇದ್ದನು. ಇಂತಿರುವಲ್ಲಿ :

ಗುರು ಕಾರುಣ್ಯ ವಿಮಲನೂ, ಕವಿತಾ ಕುಶಲನೂ, ದೀನೋದ್ಧಾರಿಯೂ ಮಾನಿಯೂ ಆದ, ಕೊಂಗವಾಡದ ಹಿರಿಯಣ್ಣಗೌಡನು, ಒಂದುಸಾರೆ ಶಿವರುದ್ರ ಗುರುವಿನ ಸನ್ನಿಧಿಗೆ ಬಂದು, ತೆಂಗಿನ ಫಲಗಳನ್ನು ಶ್ರೀಪಾದಕ್ಕೆ ಸಮರ್ಪಿಸಿ, ಶಿವಾರ್ಚನಕ್ಕೆ ತನ್ನ ಮನೆಗೆ ಬಿಜಯಂಗೈಯಬೇಕೆಂದು, ಬಿನ್ನಹ ಮಾಡಿದನು. ಇವನೆಂದರೆ ಈ ಗುರುವಿಗೆ ನಚ್ಚಿನ ಮಗ ಇದ್ದಂತೆ, ಹಾಗೆಯೇ ಈ ಗುರುವೆಂದರೆ ಆತನಿಗೆ ಮೆಚ್ಚಿನ ತಂದೆಯಿದ್ದಂತೆ ಆಗಿ, ಆ ಪೂರ್ವದಿಂದ ಇದುವರೆಗೂ ಒಂದಾಗಿ ಬಂದ, ಇವರಿಬ್ಬರ ನಡೆವಳಿಯ ನೋಡಿದರೆ, ತಂದೆ ಮಕ್ಕಳೂ ಸಹ ಹೀಗೆ ಮರುಳಾಗುವದಿಲ್ಲ ಎನ್ನಬಹುದು ಶಿವರುದ್ರ ಶಿವಯೋಗಿಯು, ಕುಲ ಛಲ, ಜಾತಿ ವಿಜಾತಿ, ಕಿರಿಯ ಹಿರಿಯ, ರೂಪ ಪ್ರತಾಪ, ಧನ ಘನ ಎಂಬಿವುಗಳನ್ನು ಯಾರಲ್ಲಿಯೂ ಪರಿಕಿಸುತ್ತ ಇರಲಿಲ್ಲ ; ಹಮ್ಮು ಬಿಟ್ಟು ಸ್ವಾರ್ಥ ಶೂನ್ಯವಾದ ಸೊಮ್ಮಿನಿಂದ ಸಾಗಿಸುವ ಸದ್ಭಕ್ತಿಯೊಂದನ್ನೇ, ಸಮೀಕ್ಷಿಸುತ್ತ ಇದ್ದನು. ಏಕೆಂದರೆ "ಕಾಸಿನ ಲೋಭ ಸಾಸಿರ ಲೋಭವ ಕೆಡಿಸಿತ್ತು" ಎಂಬ ಗಾದೆ ಇದೆ. ಇಂಥಾ ಸ್ವಾರ್ಥ ಭಕ್ತಿಯ ಏಸು ದಿನ ಮಾಡಿದರೂ ಅದು ವ್ಯರ್ಥವೇ ಸರಿ. "ನಿಶ್ಚಂಚಲವಾದ ನಿಜ ಭಕ್ತಿಯೇ ಪಂಚಮ ಪುರುಷಾರ್ಥ" ಎಂದರಿದು ಆಚರಿಸುವ ಆ ಹಿರಿಯಣ್ಣಗೌಡನ ಪರಮ ಭಕ್ತಿಗಾಗಿ, ಅವನ ಬಿನ್ನಹವ ಒಪ್ಪಿ ಬಿಜಯಂಗೈಸಿದನು ಕೊಂಗವಾಡಕ್ಕೆ. ಆ ಊರಿನ ಭಕ್ತಜನ ಆಗ, ನಮ್ಮ ಪೂರ್ವಪುಣ್ಯವೇ ಗುರುರೂಪವಾಂತು, ತನ್ನ ಅಪಾರ ಕರುಣಾ ಪ್ರವಾಹದಿಂದ, ನಮ್ಮ ಭವತಾಪವ ತಣ್ಣಗಾಗಿಸಲು ಬಂದಿತೆಂದು ಶಿವಭಜನಾಮೇಳ ತಾಳ ವಾದ್ಯ ವೈಭವದಿಂದ ಎದುರುಗೊಂಡು ಸುಖವನ್ನು ಸ್ವಾಗತಿಸುವ ಸುಕೃತದಂತೆ, ಧರ್ಮವನ್ನೊಲಿದು ಕರೆತರುವ ದಾನದಂತೆ ಸಂಭ್ರಮದ ಸ್ವಾಗತವ ನೀಡಿ ಕರೆತಂದರು. ಶಿವಪೂಜೆ ಆಗಿ, ಶಿವಾರ್ಪಣ ಮಾಡಿ ಶಿವರುದ್ರ ಶಿವಯೋಗಿ ಮಂಡಿಸಿದ್ದನು. ಭಕ್ತಜನ ಆಗ, ಮರ್ತ್ಯದ ಮಹಾದೇವನಾದ ಮಹಾಗುರುವೆ! ನಮ್ಮ ನಮ್ಮ ಮನೆಗೆ ಮೆಲ್ಲಮೆಲ್ಲನೆ ಹಾಗೆಯೇ ಪಾದವಿಟ್ಟು ಪಾಲಿಸಬೇಕು, ಎಂದು ಪ್ರಾರ್ಥಿಸಿದರು. ಇದಕ್ಕೆ ಉತ್ತರವಾಗಿ ಅಯ್ಯಾ ಪ್ರಿಯ ಶಿಷ್ಯರೆ! ತಿಳಿದು ನೋಡಿದರೆ ದುರ್ಲಭವಾದ ದೇಹವಿದು ಮತ್ತೆ ಸಿಕ್ಕಲಾರದು, ಎಂದು ಭವಿಷ್ಯವ ಸೂಚಿಸಿದ ಶಿವರುದ್ರ ಶಿವಯೋಗಿ, ತನ್ನ ಮಠಕ್ಕೆ ಮರಳಿದನು. ಗುರುವು ಈ ಸಾರೆ ಇಂತೆಂದೊರೆದ ಮರ್ಮವೇನಿರಬಹುದೆಂದು, ಭಕ್ತರೆಲ್ಲ ವ್ಯಾಕುಲರಾಗಿ ಇದ ಅರಿಯಲು ಆತುರರಾಗಿದ್ದರು.

ಗುರುವು ಶಿವನೆಂದು, ಗುರುವನ್ನು ಮರೆವೊಕ್ಕು, ಗುರುವಿನಿಂದ ಅರಿದು, ಗುರುವಿಗೆ ಎರಗಿ, ಗುರುವಿನ ಕೃಪೆಯಿಂದ ಗುರುವಿನಲ್ಲಿ ಬೆರೆಯಬೇಕು.

—: ೯ನೇ ಸಂಧಿಗೆ ಸಹಾಯ ಮಾಡಿದವರು :—

(ಶ್ರೀಮತಿ ಸೋಲಬವ್ವಾ ಕೋರಿಮಠ, ಗಂಗವ್ವ ಕೋರಿಮಠ, ಭಾಗೀರಥಿಬಾಯಿ ದೇಸಾಯಗೌಡರ ಕೊಂಗವಾಡ)

— ೨೦ —

ಸೂರಕೋಡ ಗ್ರಾಮ ಧರೆಗೆ ಕೈಲಾಸ, ಅಲ್ಲಿ ಇರುವ ಜನರೆ ಶಿವಗಣರು, ಬಸವಾರ್ಯ ಶಿವ, ರುದ್ರಾಣಿ ಪಾರ್ವತಿ, ಶಿವರುದ್ರನೇ ಪ್ರಣವವಾಗಿ, ಭೂವಳಯ ರಂಜಿಸುವುದು. ಅಲ್ಲಿ ಮೆರೆವ ಶ್ರೀ ಮಠವು, ಮುಕ್ತ್ಯಂಗನೆಯ ಮೊಗಗನ್ನಡಿ; ಭಕ್ತಿ ಜ್ಞಾನ ವೈರಾಗ್ಯಗಳ ರತ್ನಾಕರ; ಭವ ಮರಣ ಕಾಷ್ಠಕ್ಕೆ ಬೆಂಕಿ; ಪಾಪ ಪರ್ವತದ ವಜ್ರಾಯುಧ; ಸರ್ವಾರ್ಥ ಸಿದ್ಧಿಯ ಜನ್ಮಭೂಮಿ; ಸುಖದ ನೆಲೆ; ಮಂತ್ರೋಪದೇಶದ ಮಂದಿರ; ಸಂದರ್ಶಿಸಿದ ಪಾಪಿಗಳ ಪಾಪವ ಪರಿಹರಿಸಿ ಪರಮ ಮುಕ್ತಾತ್ಮರನ್ನಾಗಿಸುವ ಪೆಂಪಿನ ಪುಣ್ಯಸ್ಥಳ, ಎಂಬ ಔನ್ನತ್ಯದಿಂದ, ವಿರಾಜಿಸುವ ಶ್ರೀ ರೇಣುಕಾಚಾರ್ಯ ಶಾಖಾಗತವಾದ ಈ ಮಹಾ ಮಠದಲ್ಲಿ, ಶಿವಯೋಗಾನಂದದಿಂದ ಶಿವರುದ್ರ ಶಿವಯೋಗಿ ಇದ್ದನು.

ಧರಾ ಮಂಡಲದೊಳಗೆ ಹರಿವ ಪರಿಪರಿಯ ನಾಮದ ನದಿಗಳೆಲ್ಲ, ಚರಾಚರ ಜೀವಜಾಲಕ್ಕೆ ಹಿರಿಯ ಸುಖ ಶಾಂತಿ ಸಮೃದ್ಧಿಯನೀಯುತ್ತ, ಸಾಗರದೊಳು ಹೇಗೆ ಸಂಗಮವಾಗುವವೋ, ಹಾಗೆ ಶಿವರುದ್ರ ಸ್ವಾಮಿಯು ಗುರು ಸಂಪ್ರದಾಯದ ಶೈವಾಚಾರವ ಬೋಧಿಸಿ, ಗುರುಪೀಠವನುದ್ಧರಿಸಿ; ದೀನರಿಗೆ ಇಷ್ಟಾರ್ಥವಿತ್ತು, ಭಕ್ತರ ಭವ ಬಂಧವ ಬಿಡಿಸಿದ ಬಳಿಕ, ಲಿಂಗೈಕ್ಯಕ್ಕೆ ಶಿವಾಜ್ಞೆ ಆಯಿತೆಂದು, ಭಕ್ತಜನರನ್ನೆಲ್ಲ ಕಾರ್ಯಾರ್ಥ ಸೇರಿಸಿದನು. ಬಲ್ಲಿದರಾದ ಕಲ್ಲನಗೌಡ, ಗೂಳಪ್ಪ, ಸಂಗನಗೌಡ, ಬಸಯ್ಯ, ರಾಯಪ್ಪ, ಬಾಬರ ಸುಬ್ಬಣ್ಣ, ಮುತ್ತಣ್ಣ, ಮಾಗುಂಡಪ್ಪ, ಲಿಂಗಪ್ಪ ಇವರೇ ಮೊದಲಾದ ಪುರ ಪ್ರಮುಖರು ಸನ್ನಿಧಿಗೆ ಸಾಷ್ಟಾಂಗ ಮಾಡಿ, ಗುರುದೇವ! ನಿನ್ನ ಮಕ್ಕಳಾದ ನಾವು, ಈಗ ನೆರವೇರಿಸಬೇಕಾದ ಕಾರ್ಯ ಯಾವುದು ನಿರೂಪಿಸಬೇಕು, ಎಂದು ಬಿನ್ನವಿಸಿದರು. ಆಗ ನಗೆ ಬೆಳಕಿನ ಮೊಗದ ಶಿವರುದ್ರ ಸ್ವಾಮಿಯು, ಮಕ್ಕಳಿರಾ! ಕೇಳಿ: ಮೃತ್ಯು ವಶವಾದ ಈ ಮಾನವ ದೇಹವನ್ನು- ಅಸ್ಥಿರವಾದ ಮಿಂಚು ಮಂಜು ಸ್ವಪ್ನಸುಖ ಇವುಗಳಿಗೆ ಹೋಲಿಸುತ್ತಾರೆ. ಆದರೆ ಮರಣ ಎಂಬುದು—ಈ ಮಾನವ ಜೀವನವೆಂಬ ವೃಕ್ಷದಲ್ಲಿ ತೋರುವ, ಸವಿ ಸೊಗಸ ಬೀರುವ-ಒಂದು ಸೊಂಪಾದ ಹಣ್ಣು! ಕರ್ಮಗತಿಗೆ ಮರಣವಿದು ವಿಶ್ರಾಂತಿ ಸ್ಥಳ! ಸತ್ಪುರ ಸತ್ತ್ವ ಪರೀಕ್ಷೆಗೆ ಈ ಮರಣವೇ ಸರಿಯಾದ ಒರೆಗಲ್ಲು! ಆದುದರಿಂದ ಈ ಮರಣ ಹೊಂದುವ ಮುನ್ನವೇ, ನರಜನ್ಮದ ಲಾಭ ಪಡೆದವನು ಧನ್ಯಾತ್ಮನು! ಮರ್ತ್ಯ ಲೋಕ ಎಂಬುದೊಂದು ಕರ್ತಾರನ ಟಂಕಸಾಲೆ ಇಲ್ಲಿ ಸಲ್ಲುವರು, ಮುಂದೆಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಎಲ್ಲಿಯೂ ಸಲ್ಲುವುದಿಲ್ಲ. ಇದು ಕಾರಣ, ಮುಪ್ಪಿಂದ ಒಪ್ಪಗೆಡುವ ಮೊದಲೇ, ತಪ್ಪದೆ ಈ ಒಡಲ, ಲೋಕೋಪಕಾರ ಕಾರ್ಯಕ್ಕೆ ಒಪ್ಪಿಸಿದರೆ, ಜನ್ಮ ಕೃತಾರ್ಥವಾಗುವುದು; ಶಿವಕೃಪೆಯೂ ಲಭಿಸುವುದು. ಅಪಾರ ಪುಣ್ಯವೆಂಬ ಹಣವತೆತ್ತು ಹರನಿಂದ, ಪಡೆದಿರುವೆವು— ಈ ನರದೇಹವ! ವಿಪುಳ ವಿತ್ತವ ತೆತ್ತು, ಮೆಚ್ಚಿ ತಂದ ಎತ್ತಿನಿಂದ, ದುಡಿಸಿಕೊಂಡು ಲಾಭ ಪಡೆಯುವಂತೆ ಅರಿವುಳ್ಳ ಈ ನರದೇಹದ ಲಾಭವ ಮಾಡಿಕೊಳ್ಳದಿದ್ದರೆ ದುಷ್ಟಮೃಗಕ್ಕಿಂತ ನಿಕೃಷ್ಟವಾಗುವುದು-ನರನ ಬಾಳುವೆ! ಹರಿಯಜರು ಸಹ ನರ ಶರೀರವ ಬಿಡದೆ ಬಯಸು

ವರು. ಇಂಥದು ನಮಗೆ ಸಂಭವಿಸಿದ ಶುಭಸಮಯದಲ್ಲಿ, ಹರಗುರುಭಕ್ತಿಯ ಭಾವಿಸದೆ ಹೋದರೆ, ಮಿಂಚು ಮಾಯವಾದ ಮೇಲೆ ಚಿಂತಿಸಿ ಫಲವೇನು ? ಎಂಬಂತೆ ಆಗುವುದು ಆದುದರಿಂದ ಈಗ ನೀವೆಲ್ಲ ಕೇಳಿ: ಈ ಊರ ಬಸವಣ್ಣ ದೇವರ ಪ್ರತಿಮೆ ಭಿನ್ನವಾಗಿದೆ. ಭಿನ್ನವಾದ ಮೂರ್ತಿ ಪೂಜಾರ್ಹವಲ್ಲ. ಒಂದು ವೇಳೆ ಪೂಜಿಸಿದರೆ, ಊರಿಗೆ ಪಾಪ ಸೇರುವುದು. ಪಾಪದಿಂದ ಎಡರು ಬಡತನ ನೆಲೆಸಿ, ಜನವೆಂದೂ ನರಳುತ್ತ ನೋಯುತ್ತ ಸುಖಶೂನ್ಯರಾಗುವರು. ಬೇಗನೆ ಬೇರೊಂದು ನೂತನ ಪ್ರತಿಮೆಯನ್ನು, ನಿಪುಣ ಕಲಾಭಿಜ್ಞರಿಂದ ನಿರ್ಮಿಸಿ ಪ್ರತಿಷ್ಠಿಸಬೇಕು ಇದನ್ನು ಪುರ ಪ್ರಮುಖರಾದ ನೀವಲ್ಲದೆ ಅದಾರು ಮಾಡುವರು? ಆತ್ಮ ಸಂತೋಷದಿಂದ ನೀವೀ ಕಾರ್ಯವ ಕೈಕೊಳ್ಳಬೇಕು ಎಂದು ನಿರೂಪಿಸಿದನು.

ಬಸವಣ್ಣನ ಪ್ರತಿಷ್ಠಿಸಲೆಂದೋ, ಅಥವಾ ಶಿವನಿತ್ತ ಶಿವೈಕ್ಯದ ಸಮಯವ ಸೂಚಿಸುವುದಕ್ಕೋ, ಇಲ್ಲವೇ ಭಕ್ತರ ಧೃಢಭಾವ ಪರೀಕ್ಷೆಗಾಗಿಯೋ, ಈ ಗುರು ನಿರೂಪದಲ್ಲಿಯ ಅಂತರ್ಭಾವ ಏನಿರಬಹುದೆಂದು ಯೋಚಿಸಿದ ಭಕ್ತರು, ಆ ಗುರು ನಿರೂಪಕ್ಕೆ ಮನ್ನಣೆಯಿತ್ತು ತಮ್ಮ ತಮ್ಮ ಮನೆಯತ್ತ ಹೋದರು.

ಮಂತ್ರಾನುಸಂಧಾನದಿಂದ, ಜಗದ್ವ್ಯಾಪಾರ ಶೂನ್ಯವಾದ ಚಿತ್ತದಲ್ಲಿ ಬೆಳಗುವ ಅಚ್ಚುಮೆಚ್ಚಿನ ಪರಂಜ್ಯೋತಿಯ ನೋಡುತ್ತ ನಲಿಯುತ್ತ, ಪುಳಕಿತನಾದ ಶಿವರುದ್ರ ಗುರುದೇವನು, ಭವಭಂಗಕರವಾದ ಮಹಾಲಿಂಗ ಸಂಗದಲ್ಲಿ ತನ್ಮಯನಾಗಿದ್ದ. ಇಂತಿರುವಲ್ಲಿ ಲಿಂಗೈಕ್ಯನಾದ ಹಿಂದಿನ ನಿಜಗುರುವು ಜಟಾ ಮುಕುಟ ಮಂಡಿತನಾಗಿ, ಶಿವ ಲಾಂಛನಧಾರಿಯಾಗಿ; ದಿಟವಲ್ಲದ ಮುಪ್ಪಿನ ಕಾಯದಿಂದ ದಾರಿಕಾರನಂತೆ ಒಮ್ಮೆಗೇ ತೋರಿ– ಎಲೆ ಮಗನೆ ಮುದ್ದು ಶಿವರುದ್ರ ! ಹಿಂದೆ ನಾನೆಂದುದೆಲ್ಲವನು, ಚೆಂದದಿಂದ ನೆರವೇರಿಸಿದೆ. ನೀನಿನ್ನು ಶಿವಸಾಯುಜ್ಯವನೈದಿ, ಲಿಂಗರೂಪವಾಗಿ ಭಕ್ತರಿಗೆ ಮಂಗಲವ ನೀಡಯ್ಯಾ– ಎಂದನು. ಆಲಿಸಿದ ಶಿವರುದ್ರಸ್ವಾಮಿ ಆಶ್ಚರಿಪಡುತ್ತ– ಏನಿದು ! ಯಾರಿವರು ? ಎಂದು ಚೆನ್ನಾಗಿ ದಿಟ್ಟಿಸಿ, ಓಹೋ ! ಪೂರ್ವದಲ್ಲಿ ಸೂರ್ಯಸಮಾನ ತೇಜದಿಂದ ತೋರಿದ ಎನ್ನ ನಿಜಗುರುವೆಂದು, ಗೊತ್ತಾದ ಕೂಡಲೆ, ಸೋಜಿಗವಾಗಿ ಸಾಷ್ಟಾಂಗ ಮಾಡಿ, ಪೂಜ್ಯ ಗುರುವರ್ಯಾ ! ನಿಮ್ಮ ಆಜ್ಞೆಯ ಮೀರುವ ಅಧಟು, ಆರಿಗೆ ಸಾಧ್ಯ ? ಆದರೂ ಅರಿಕೆ ಮಾಡುವೆನಲ್ಲದೆ, ಇದೆನ್ನ ಪ್ರತ್ಯುತ್ತರವಲ್ಲ ; ನಿಮ್ಮ ಸಾದರದ ಶಾಸನದಂತೆ, ಮಾಸದ ಅಂತ್ಯಕ್ಕೆ ನಡೆತರುವೆನಾನು– ಎಂದನು. ಮೆಚ್ಚಿದ ಆ ಗುರುವು ಮಿಂಚಿನಂತೆ ಮಾಯವಾಗಿಬಿಟ್ಟ.

ಅಂದಿನಿಂದ ಶಿವರುದ್ರ ಯತಿಯು ಮನದ ತುಂಬ ಮಂತ್ರವ ಸ್ಮರಿಸುತ್ತ, ಭವಿಷ್ಯವನ್ನು ರಹಸ್ಯವಾಗಿ ಸೂಚಿಸುತ್ತ, ಶಿವಪೂಜೆಯಲ್ಲಿ ನಿರಂತರ ನಲಿದಾಡುತ್ತ ಇರುವಾಗ ಗುರುವಿಗೆ ಅರಿಕೆಪಡಿಸಿದ ಅವಸಾನ ಸಮಯ ಸಂಭವಿಸಿತೆಂದು, ಮೌನ ಹೊಂದಿದನು. ತುಸು ದೇಹಾಲಸ್ಯ, ನಿರ್ನಿಮಿತ್ತ ತಲೆದೋರಿತು. ಈ ಸಂತಾಪದ ಸುದ್ದಿಯನ್ನು ಕೇಳಿದ

ಭಕ್ತರೆಲ್ಲ ಕಳವಳಗೊಂಡು, ವೈದ್ಯವಿಚಕ್ಷಣನೆಂದು ವಿಖ್ಯಾತನಾದ ಕೊಂಗವಾಡದ ರಾಚಣ್ಣಗೌಡನನ್ನು ತತ್‌ಕ್ಷಣ ಕರೆಸಿದರು. ಗುರುಭಕ್ತನಾದ ರಾಚಣ್ಣಗೌಡ, ಪರಿ ಪರಿಯ ಪ್ರಯೋಗಗಳಿಂದ ಪರಿಶೀಲಿಸಿದನು ; ಪ್ರಯತ್ನಿಸಿದನು. ಫಲಕಾರಿಯಾಗಲಿಲ್ಲ, ಆಗ ವಿಸ್ಮಯಹೊಂದಿದ ರಾಚಣ್ಣಗೌಡನು, ಬಿದಿರು ದಂಡದಿಂದ ಉದಧಿಯ ಆಳಿಯಲ ಳವೇ ? ಮರಣಶೀಲನಾದ ನಾನೆತ್ತ ? ಭವ ಮರಣ ಹರಣನಾದ ಗುರುವೆತ್ತ ? ಬಾಹ್ಯ ಜಾಡ್ಯ ನಿವಾರಕನಾದ ನಾನೆತ್ತ ? ಬಾಹ್ಯಾಭ್ಯಂತರ ಪಾಪಜಾಡ್ಯ ಪರಿಹಾರಕನಾದ ಗುರುವೆತ್ತ ? ಅಜಗಜಾಂತರವಿದು ! ಧರೆಯ ಮರೆಯೊಳಗಿರುವ ರಂಗಿನ ಬಂಗಾರದಂತೆ, ರಹಸ್ಯವಾಗಿ ವಿರಾಜಿಸುವ ನಿನ್ನ ವೀರ ವೈರಾಗ್ಯವ, ಹೊಗಳಲಾದೀತೆ ? ಮಹಾ ಮೋಹ ಮಾಲಿನ್ಯನಾದ ನನಗೆ, ಇದು ಅರಿವುದೆ ? ಆದಿತ್ಯನ ಕಿರಣವ ಅಂಧಕಾಣುವನೇ ? ಜನ ಸಂಗದಲ್ಲಿದ್ದೂ, ಘನ ವೈರಾಗ್ಯ ಶಾಂತಿ ಸಿದ್ಧನಾಗಿ, ಮುಕ್ತ್ಯಂಗನೆಯ ಮಂಡಪದಲ್ಲಿ ಮಂಡಿಸಿರುವ ಅಸಮಾನ ಗುರುವೇ, ಮರ್ತ್ಯದ ಮಹಾದೇವ ನೀನು ! ಎಂದು ಕೀರ್ತಿಸಿ, ನಮಿಸಿ ಗಮಿಸಿದನು ರಾಚಣ್ಣಗೌಡ.

೨೦ ನೇ ಸಂಧಿಗೆ ಸಹಾಯಮಾಡಿದವರು
( ಶ್ರೀಮತಿ ತಾಯವ್ವ ನಾಯಕನೂರ ಕೊಂಗವಾಡ )

— ೨೧ –

ಪಿಣ್ಯಾಕ ರೂಪದಿಂದ ಕಾರುಣ್ಯಶೀಲನಾದ ರೇಣುಕ ಗುರುವರೇಣ್ಯನು ಸುಳಿದಂತೆ ಗಣ್ಯನಾದ ಶಿವರುದ್ರ ಯತಿವರೇಣ್ಯನು, ಇಳೆಯೊಳು ಸುಳಿದು ನಿಜೇಷ್ಟಲಿಂಗಕಳೆಯೊಳಗೆ ಸರಿದನು ; ಬೆರೆದನು.

ಈ ಮುನ್ನ ತನಗೆ ನಿಜಗುರು ನಿರೂಪಿಸಿದ ನಿಜಲಿಂಗೈಕ್ಯದ ದಿನವದು, ಸಂದಿತೆಂದ ರಿದ ಶಿವರುದ್ರ ಯತಿವರೇಣ್ಯನು– ಪಶ್ಚಿಮ ಚಕ್ರದಲ್ಲಿ ಕೋಟಿ ಸೂರ್ಯ ಪ್ರಕಾಶಾತೀತ ವಾದ ಬೆಳಕಿನಿಂದ ಹೊಳೆಹೊಳೆವ ನಿರ್ಗುಣವೂ (ತ್ರಿಗುಣಾತೀತವಾಗಿ ಸಚ್ಚಿದಾನಂದ ಮಯವೂ) ನಿರ್ಮಲವೂ ನಿರುಪದ್ರವವೂ ನಿರವಯವವೂ ನಿತ್ಯವೂ ನಿರಂಜನವೂ ಆದ, ಜ್ಯೋತಿರ್ಮಯ ಮಹಾಲಿಂಗದೊಳಗೆ, ಶಾಲಿವಾಹನ ಶಕೆ ೧೮೫೭ (ಕ್ರಿ. ಶ, ೧೯೩೫) ನೆಯ ಅಂಗೀರಸ ಸಂವತ್ಸರ ಭಾದ್ರಪದ ಶುದ್ಧ ತ್ರಯೋದಶಿ ಶ್ರವಣಾ ನಕ್ಷತ್ರ ಅಮೃತ ಸಿದ್ಧಿ ಯೋಗಯುತವಾದ ಸೋಮವಾರ ಪ್ರಾತಃಕಾಲದಲ್ಲಿ– ನಿರ್ವಯಲಾದನು.

ಆ ಗುರುದೇಹವನ್ನು ಭಕ್ತರೆಲ್ಲ ಸೇರಿ ಗುರುಚರಣದಗ್ಗಣಿಯಿಂದ ತೊಳೆದು, ವಿಭೂತಿ ರುದ್ರಾಕ್ಷಿಗಳಿಂದ ಅಲಂಕರಿಸಿ, ಆಸನದೊಳು ಮಂಡಿಸಿರುವಲ್ಲಿ ; ತಿರಿ ತಿರಿದು ಸಾಕಾದ ಹರ ತಾನು ಬಂದಿಲ್ಲಿ ಬೇಸತ್ತು ಕುಳಿತಿರುವನೋ, ಎಂಬ ಹಾಗೆ ಶಿವರುದ್ರ ಶಿವಯೋಗಿಯ ಕಾಯ, ಕಾಣುತ್ತಿತ್ತು. ಈ ವಾರ್ತೆ ಆಗಲೇ ವಾಯುವೇಗದಿಂದ ಹಬ್ಬಿತು. ಸಂತಾಪಗೊಂಡು ಸರ್ವಮತದ ಮಹನೀಯರು, ಪಟ್ಟಾಧಿಕಾರಿಗಳು, ಚರ

ಮೂರ್ತಿಗಳು, ಪುರೋಹಿತರು, ಪಂಡಿತರು, ದೀಕ್ಷಿತರಾದ ನಿಜಗುರು ಭಕ್ತರು, ಇವರೆಲ್ಲ ತತ್‌ಕ್ಷಣವೇ ಬಂದರು. ಅಂತ್ಯಗೌರವ ಸಲ್ಲಿಸುವದಕ್ಕಾಗಿ, ಬಂದವರೆಲ್ಲ ತಂದ ಫಲಪುಷ್ಪ ಗಳೂ ಸಮಾಧಿ ಸಾಮಗ್ರಿಗಳಂತೂ ಅಗಣಿತವಾಗಿದ್ದವು. ಕಿಕ್ಕಿರಿದು ನೆರೆದ ಜನ ಸಮೂ ಹಕ್ಕೆ, ಸುವಿಶಾಲವಾದ ಮಠದಂಗಣ ಸಾಲದಾಯಿತು.

ಶಿವರುದ್ರ ಶಿವಯೋಗಿಯೇ ನೆಚ್ಚಿರುವ ಅರ್ಕ (ಎಕ್ಕದ) ಗಿಡದ ಎಡೆಯಲ್ಲಿ, ಅವನ ಸಮಾಧಿ ಮಾಡಬೇಕೆಂದು, ಸೂಚಿಸಿದ ಸದ್ಭಕ್ತನೊಬ್ಬನ ಮಾತು, ಸಮಂಜಸ ವಾದುದೆಂದು, ಪುರ ಪ್ರಮುಖರೆಲ್ಲ ಸಮ್ಮತಿಸಿದರು, ಅಲ್ಲಿಯೇ ವೀರಶೈವ ಸಮಾಧಿ ವಿಧಿಗನುಸಾರವಾಗಿ ಸಮಾಧಿಯನ್ನು ಸಜ್ಜುಗೊಳಿಸಲಾಯಿತು. ಈ ಸುದ್ದಿಯ ಕೇಳಿದ ಕೊಂಗವಾಡದ ಭಕ್ತರೆಲ್ಲ ಆಗ ಬಂದು- ಗುರು ನಿರೂಪಿಸಿದ ಅಂದಿನ ಭವಿಷ್ಯವಾಣಿ ನಿಜ ವಾಯಿತು– ಎಂದು ತಮ್ಮ ಕೊನೆಯ ಕಾಣಿಕೆಯ ಸಮರ್ಪಿಸಿದ ಬಳಿಕ ಇಂತೆಂದರು : ಕ್ರಿಮಿ ಕೀಟ ಪತಂಗಾದಿಗಳಂತೆ, ಸುಮ್ಮನೆ ಹುಟ್ಟಿ ಸಾವಿಗೀಡಾದವರ ಸಾವು ಯಾರಿಗೂ ದೊಡ್ಡದೆನಿಸುವುದಿಲ್ಲ. ಮರಳಿ ಜನನ ಮರಣ ಒದಗದಂಥ ಪರಮ ಪದ ವಿಯ ಇರವನ್ನೂ ಸಿರಿಯನ್ನೂ ಇತ್ತು, ಪರಿಪಾಲಿಸುವ ಗುರುವು ಅಗಲಿದರೆ, ಯಾರಿಗೆ ತಾನೆ ಸಂತಾಪವಾಗುವುದಿಲ್ಲ ? ಎನ್ನುತ್ತ ಕಂಬನಿಗರೆದರು. ಅಲಂಕೃತವಾದ ಪುಷ್ಪಕ ಮಂಡಪದಲ್ಲಿ, ಗುರುದೇವನ ಕಳೇವರವನ್ನು ಕುಂಡಿಸಿದಾಗ, ಜಯಘೋಷದೊಡನೆ ಭಕ್ತರೆಲ್ಲ ಪುಷ್ಪಾಂಜಲಿಯ ಸೂಸಿದರು. ಪುಷ್ಪಕವನ್ನು ಹೊತ್ತವರು, ಶುಚಿರ್ಭೂತ ರಾಗಿ ಮಡಿಯನುಟ್ಟು; ವಿಭೂತಿ ಭೂಷಿತವಾದ ಹಣೆ ಹಾಗೂ ವಿರಾಜಿಸುವ ಶಿವಲಿಂಗ ಮತ್ತು ರುದ್ರಾಕ್ಷ ಮಾಲೆಯ ಕಂಠದಿಂದ ಕಂಗೊಳಿಸುತ್ತ, ಮದನಾರಿಯು ಆದೇಶದಿಂದ ಎದುರುಗೊಳ್ಳಲು ಬಂದ ಗಣೇಶ್ವರರೋ ಎಂಬಂತೆ ಕಾಣುತ್ತಿದ್ದರು. ಶಿವ ಸಮಾಧಿ ಯಾತ್ರೆಯ ಗುರು ಮಹೋತ್ಸವವು, ವಿಜೃಂಭಣೆಯಿಂದ ಹೊರಟು, ಸಮಾಧಿ ಸ್ಥಳಕ್ಕೆ ಮುಟ್ಟಿತು. ಶಿವಾಗಮವೇತ್ತರಾದ ಗುರುಪಟ್ಟಾಧಿಕಾರಿಗಳು, ಸಮಾಧಿ ವಿಧಿಯನ್ನು ಸಕ್ರಮವಾಗಿ ಮುಗಿಸಿ, ಪುಷ್ಪಾಂಜಲಿಯ ಸೂಸಿದರು. ಶಿವರುದ್ರಗುರುವಿನ ಕರಕಂಜಾತ ನಾದ, ಮಠಪತ್ತಿ ವೀರ ಬಸವಯ್ಯನು, ನಿಜಗುರುಸ್ಮರಣಾರ್ಥ ಗುರು ಸಮಾಧಿಗೆ ಮಠವ ಕಟ್ಟಿಸಿದ.

ಅನಂತರ ಈ ಬೃಹನ್ಮಠದ ಉತ್ತರಾಧಿಕಾರಿಯನ್ನು ಮಾಡುವದಕ್ಕಾಗಿ ಹುಬ್ಬಳ್ಳಿ ಹನ್ನೆರಡೆತ್ತಿನ ಮಠದ ಶ್ರೀ ಗುರು ಪಟ್ಟಾಧ್ಯಕ್ಷರಾದ ಶ್ರೀ ಮಡಿವಾಳ ಶಿವಾಚಾರ್ಯ ಸ್ವಾಮಿಗಳವರು ಅಗ್ರೇಸರರಾದರು. ಇವರು, ಶರಣಾಗತರ ಮಲತ್ರಯವನ್ನು ಮಾನ್ಯ ವಾದ ಶಿವದೀಕ್ಷೆಯಿಂದ ತೊಳೆದು, ನಿರ್ಮಲಗೊಳಿಸುವದರಿಂದ "ಮಡಿವಾಳಾಖ್ಯರು" ಎಂಬ ಸುನಾಮ, ಇವರಿಗೆ ಅನ್ವರ್ಥಕವಾದುದೆಂದು, ಬಲ್ಲವರೆಲ್ಲ ಬಣ್ಣಿಸುತ್ತಾರೆ. ಈ ಶ್ರೀಗಳವರು 'ಭೂಕೈಲಾಸ'ವಾದ ಗೋಕರ್ಣ ಕ್ಷೇತ್ರದಲ್ಲಿ, ವಿರಾಜಮಾನವಾದ ವೀರ ಶೈವ ಮಠವೊಂದನ್ನು ನೂತನವಾಗಿ ನಿರ್ಮಿಸಿ, ಅದರಲ್ಲಿ ಮಠಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ರೇಣುಕಭಗವತ್ಪಾದರವರ ಭವ್ಯ ವಿಗ್ರಹವನ್ನು ಜಗದ್ಧಿತಾರ್ಥ



ಶ್ರೀ ಲಿಂ.
ಶಿವರುದ್ರ
ಶಿವಯೋಗಿಗಳು.
ಮತ್ತು
ಉತ್ತರಾಧಿಕಾರಿಗಳು.



ಶ್ರೀ ಲಿಂ. ಶಿವರುದ್ರ
ಶಿವಯೋಗಿಗಳ ಗದ್ದುಗೆ.

ಸಂಸ್ಥಾಪಿಸಿದ್ದಾರೆ. ಯೋಗಿವರ್ಯರಾದ ಈ ಶ್ರೀಗಳು, ಮತ್ತು ಕಡಕೋಳ ಪೂವಲ್ಲಿ (ಹೂಲಿ) ರಾಮದುರ್ಗ ಸತ್ತಿಗೇರಿ ಮೊದಲಾದ ಮಠಗಳ ಶ್ರೀಗುರು ಚರಾಧಿಕಾರಿಗಳು ಹಾಗೂ ಸಮಸ್ತ ಭಕ್ತ ಮಂಡಳಿ ಸೇರಿ. ಶಾಲಿವಾಹನ ಶಕೆ ೧೮೭೦ನೇಯ ಸರ್ವಧಾರಿ ಸಂವತ್ಸರ ಮಾಘ ಶುದ್ಧ ಪಂಚಮಿ ಭಾನುವಾರದ ದಿವಸ, ಗುರುಕುಲ ಸಂಭೂತರೂ ಹರಪೂಜಾ ಧುರಂಧರರೂ ಕ್ರಿಯಾಸಿದ್ಧಿ ಸಂಪನ್ನರೂ ಬ್ರಹ್ಮವರ್ಚಸ್ವಿಗಳೂ ಆದ, "ಶ್ರೀ ಗುರುಪಾದ ಶಿವಾಚಾರ್ಯ ಸ್ವಾಮಿಗಳು" ಎಂಬವರಿಗೆ, ಮೇಲೆಕಂಡ ಶ್ರೀ ಮಡಿವಾಳ ಶಿವಾಚಾರ್ಯ ಸ್ವಾಮಿಗಳವರಿಂದ, ಉತ್ತರಾಧಿಕಾರದ ಶ್ರೀ ಗುರು ಪಟ್ಟಾಭಿಷೇಕ ನೆರವೇರಿತು.

–: ೨೧ನೇ ಸಂಧಿಗೆ ಸಹಾಯ ಮಾಡಿದವರು :–

( ಶ್ರೀಮತಿ ಗಂಗವ್ವ ನಾಯಕನೂರ ಕೊಂಗವಾಡ ಬಸವನ್ಮಾ ಗೌಡಪ್ಪ ಗೌಡ ಹಾಲಪ್ಪಗೌಡರ ಶ್ರೀ ಸಿದ್ದಯ್ಯಸ್ವಾಮಿಹಿರೇಮಠ (ಹೊಸಮನಿ)

## ಕವಿಯ ಕೊನೆಯ ಪ್ರಾರ್ಥನೆ :

ಈ ಚಾರಿತ್ರ್ಯವನ್ನು, ಲೋಕಗುರು ಶ್ರೀ ರೇಣುಕಾಚಾರ್ಯರ ಪಾದಾಬ್ಜವನೆನ್ನ ಶಿರದೊಳಾಂತ ತತ್‌ಸಾಮರ್ಥ್ಯ ಸ್ಫೂರ್ತಿಯಿಂದ, ಆನು ಬಲ್ಲಂತೆ ಹೇಳಿದೆನು. ತಿಳಿದವರು ತಪ್ಪನೆಣಿಸದೆ, ಇವನೆನ್ನವನೆಂದು ಸಾದರದಿಂದ ಸಾನುಕಂಪೆಯಿಂದ ಸರಿಪಡಿಸುತ್ತ, ಸಲಹಬೇಕೆಂದು ಬೇಡುವೆನು ದೈನ್ಯದಿಂದ.

ಕೃತಿಯಿದು ನೋಡಿದರೆ, ದುರ್ಮಾಯಾ ಮೋಹಾಂಬುಧಿಗೆ ವಾಡವಾಗ್ನಿ ಪ್ರಾಯವಾದುದು ; ಉಗ್ರವಾದ ಸ್ವಗ್ರಹಗಳ ಉಚ್ಚಾಟನಕ್ಕೆ ಮಂತ್ರ ಸಮಾನವಾದುದು ; ದುಷ್ಟ ವಿಪತ್ತೆಂಬ ಮೇಘಕ್ಕೆ ವಾತುತವು ; ಶನಿಯೆಂಬ ಗಿರಿಗೆ ವಜ್ರಾಯುಧವು, ಮೀರಿದ ಮಹೇಂದ್ರ ಪಾಪಕ್ಕೆ ವೈರಿ ; ವರಸುಜ್ಞಾನದ ಗುಳಿಗೆಯಿದು ; ಅಮೃತವಿದು, ಆದರಿಂದ ಎಂದೆಂದೂ ಪಠನೀಯವಾಗಿರುವುದು.

ಮಹಾಯೋಗ ನಿದ್ರಾ ಮುದ್ರಿತನಾದ ಪರಮ ಶಿವರುದ್ರನು, ಭೂವಳಯಕ್ಕೆಲ್ಲಾ ಸದ್ಧರ್ಮ ಸಂಪತ್ತು, ಸುಜ್ಞಾನ, ಸುಶಾಂತಿ, ಸದ್ಭಕ್ತಿ, ಶಿವಸಾಯುಜ್ಯ, ಇವುಗಳನ್ನು ಒಲಿದೀಯಲಿ !

ಚೆನ್ನಕವೀಂದ್ರನಿಂದ ವಿರಚಿತವಾದ ಈ ಕೃತಿಯು ಶಾಲಿವಾಹನ ಶಕೆ ೧೮೭೮ನೇ ದುರ್ಮುಖಿ ಸಂವತ್ಸರ ಆಶ್ವಯುಜ ಶುದ್ಧ ದಶಮೀ ಭಾನುವಾರ ಸೂರ್ಯೋದಯದಲ್ಲಿ ಶಿವಕೃಪಾಕಟಾಕ್ಷ ಬಲದಿಂದ ಪೂರೈಸಿತು.

ಕೃತಿ ರಚನೆಗೆ ಉದ್ಯುಕ್ತನಾದ ಸಮಯದಲ್ಲಿ, ಕ್ಷಯರೋಗ ಸಂದೇಹಬಂದು, ಕಾಯ ಸಂಕಟ ಪರಸ್ಥಲವಾದ ವಿಧ ವಿಧದ ವಿಘ್ನ ಪರಂಪರೆ ಒದಗಿದರೂ, ಗುರುಕೃಪೆಯಿಂದ ಪರಿಸಮಾಪ್ತವಾಯಿತು. ಶಿರದ ಮೇಲೆ ಗುರು ಕಟಾಕ್ಷವಿರುವಾಗ, ಇದೊಂದು ಅತಿಶಯವೇ ?

ನನ್ನ ಪೂಜ್ಯ ಜನನೀ ಜನಕರಾದ ಗಂಗಾಂಬೆ- ಶ್ರೀ ಗುರುಪಾದಾರ್ಯ ಇವರಿಗೆ ನಿರಂತರವಾದ ಶಾಂತಿಯನ್ನು ಕರುಣೆಯಿಂದ ಗುರು ಕೊಡಲಿ ಎಂದು ಅವನ ಪಾದಪದ್ಮಗಳಲ್ಲಿ ಸದ್ಭಕ್ತಿಯಿಂದ ಪ್ರಾರ್ಥಿಸಿ, ಶಿವಲಿಂಗ ಸ್ಮರಣದೊಡನೆ ಲೇಖನಿಗೆ ವಿರಾಮ ಕೊಡುವೆನು.

ಸೋಮನಂ ಜಿತಕಾಮನಂ ಭವಭೀಮನಂ ಶಮಧಾಮನಂ ।
ರಾಮಣೀಯಕ ಮೂರ್ತಿಯಂ ಶ್ರುತಿ ಕೀರ್ತಿಯಂ ನೆರೆ ಕೀರ್ತಿಪೆಂ ॥
ಪ್ರೀತೆಯಂ ವರದಾತೆಯಂ ಪರಿಪೂತೆಯಂ ಗಿರಿಜಾತೆಯಂ !
ಮಾತೆಯಂ ಸು ವಿನೀತೆಯಂ ನೆನೆವೆಂ ಧರಿತ್ರಿ ವಿಧಾತೆಯಂ ॥

ಸುಚರಿತ್ರನೂ ಶಾಂತಿವನ ಚೈತ್ರನೂ ಭವಾಬ್ಧಿ ವಹಿತ್ರನೂ ರೇಣುಕ ಸುಗೋತ್ರನೂ ಆದ, ಭೋ ಶಿವರುದ್ರ ಗುರು ಮಹಾಮಹೋದಯ ! ಜಯಶೀಲನಾಗು.

ಚೆನ್ನಕವೀಂದ್ರನ ಕೋರಿಕೆಯಂತೆ ರಚಿತವಾದ ಶಿವರುದ್ರ ವಿಜಯದ 'ಕಥಾಸಾರ' ಪೂರೈಸಿತು.

ಕಡಲಿಂ ದೊಗೆದ ಕಳಾನಿಧಿ
ಕಡಲನೆ ತಾಂ ಪೆರ್ಚಿಪಂತೆ, ಯೀ ಕೃತಿಯಿಂದಂ ।
ಪಡಮೂಡಿದ ಕಥೆಯಿದು ಎಡೆ
ಬಿಡದೀ ಕೃತಿಯನ್ನೆ, ವೃದ್ಧಿಗೊಳಿಪುದು ಕಳೆಯಿಂ॥

ಮತಿಘಟ್ಟ (ಬಾಳಗಲ್ ಎಸ್ಟೇಟ್
(ಕಡೂರ ತಾಲ್ಲೂಕು)

ಶ್ರೀ ವ್ಯಾಕರಣಸಾಹಿತ್ಯ ವಿದ್ವಾನ್ ಶಿವಮೂರ್ತಿ ಸ್ವಾಮಿಗಳವರು ಹಿರಿಯಮಠ

## ಶ್ರೀ ಶಿವರುದ್ರ ವಿಜಯಂ [ಪುರಾಣ] ಗ್ರಂಥ ಪ್ರಕಾಶನಕ್ಕೆ ಧನ ಸಹಾಯ ಮಾಡಿದ ಪೂಜ್ಯ ಸ್ವಾಮಿಗಳು ಮತ್ತು ಭಕ್ತ ಮಾಹೇಶ್ವರರ ಹೆಸರುಗಳು.

---

| | | | |
|---|---|---|---|
| ೧) | ಶ್ರೀ ಷ. ಬ್ರ. ಸ್ಥಿರಚರ ಪಟ್ಟಾಧ್ಯಕ್ಷರೂ ತಪೋನಿಧಿಗಳೂ ಆದ ಹುಬ್ಬಳ್ಳಿ ಹನ್ನೆರಡು ಮಠದ ಮತ್ತು ಗೋಕರ್ಣ ವೀರಶೈವ ಮಠದ ಸಂಸ್ಥಾಪಕರೂ ಆದ ಶ್ರೀ ಮಡಿವಾಳ ಶಿವಾಚಾರ್ಯ ಸ್ವಾಮಿಗಳವರು. | ೧೦ | ೦೦ |
| ೨) | ಶ್ರೀ ಷ. ಬ್ರ. ಜ. ಪ. ಬಾಲಲೀಲಾ ಸಂಗಮೇಶ್ವರ ಶಿವಾ-ಚಾರ್ಯ ಸ್ವಾಮಿಗಳವರು ಸಾಂಬಯ್ಯನ ಮಠ ಹೂಲಿ. | ೨೦ | ೦೦ |
| ೩) | ಕೂಡ್ಲ ಮಠದ ಶ್ರೀ ಗುರುಬಸಯ್ಯನವರು ಧಾರವಾಡ. | ೩೫ | ೦೦ |
| ೪) | ಶ್ರೀಮತಿ ಸಕ್ರವ್ವ ಕೋಂ. ಬಾಲಪ್ಪ ಚವಡಿ ಸಾ॥ ಸೂರಕೋಡ | ೧೫೧ | ೦೦ |
| ೫) | ,, ಭೀಮವ್ವ ಕೋಂ. ಮರಿತಮ್ಮಪ್ಪ ಗಡಿಗಿ ಸಾ॥ ರೋಣ | ೧೫೧ | ೦೦ |
| ೬) | ,, ಶಿವಲಿಂಗವ್ವ ಕೋಂ. ಬಾಲಪ್ಪ ಮೂಗನೂರ ಸಾ॥ ಸೂರಕೋಡ | ೧೦೧ | ೦೦ |
| ೭) | ,, ಶಂಕ್ರವ್ವ ಕೋಂ. ಮಲ್ಲಪ್ಪ ಅರಹುಣಸಿ ಸಾ॥ ಸೂರಕೋಡ | ೧೫೧ | ೦೦ |
| ೮) | ,, ಗಿರಿಯವ್ವ ಕೋಂ. ಬಸನಗೌಡ ಕರಿಗೌಡ್ರ ಸಾ॥ ಸೂರಕೋಡ | ೧೫೧ | ೦೦ |
| ೯) | ,, ಗುರವ್ವ ಕೋಂ. ಬಸಯ್ಯಾ ಮಠಪತಿ ಸಾ॥ ಸೂರಕೋಡ | ೧೫೧ | ೦೦ |
| ೧೦) | ,, ಗುರುಲಿಂಗವ್ವ ಕೋಂ. ಕಲ್ಲನಗೌಡ ಪಾಟೀಲ ಸಾ॥ ಕರಮುಡಿ | ೧೫೧ | ೦೦ |
| ೧೧) | ,, ಪಾರ್ವತೆವ್ವ ಕೋಂ. ಮಲ್ಲಪ್ಪ ನಾಗರಡ್ಡಿ ಸಾ॥ ಸೂರಕೋಡ | ೧೦೧ | ೦೦ |
| ೧೨) | ,, ಪಾರ್ವತೆವ್ವ ಕೋಂ. ವೀರಪ್ಪ ಹಳಕಟ್ಟಿ ಸಾ॥ ಅಳಗವಾಡಿ (ವಾಗ್ದಾನ) | ೧೫೧ | ೦೦ |
| ೧೩) | ,, ಶಿವವ್ವ ಕೋಂ. ದ್ಯಾಮಪ್ಪ ಗುಣರಡ್ಡಿ ಸಾ॥ ಸೂರಕೋಡ | ೧೫೧ | ೦೦ |
| ೧೪) | ,, ಶಿವವ್ವ ಕೋಂ ರಾಯನಗೌಡ ಮೇಟಿ ಸಾ॥ ಮಂಡಲಗೇರಿ | ೧೫೧ | ೦೦ |
| ೧೪)ಅ | ,, ಚೆನ್ನವ್ವ ವೀರಬಸಪ್ಪ ಗುರ್ಲಹೊಸೂರ ಸಾ॥ ಸೂರಕೋಡ | ೧೦೧ | ೦೦ |

ಕೃತಿ ರಚನೆಗೆ ಉದ್ಯುಕ್ತನಾದ ಸಮಯದಲ್ಲಿ, ಕ್ಷಯರೋಗ ಸಂದೇಹಬಂದು, ಕಾಯ ಸಂಕಟ ಪರಸ್ಥಲವಾದ ವಿಧ ವಿಧದ ವಿಘ್ನ ಪರಂಪರೆ ಒದಗಿದರೂ, ಗುರುಕೃಪೆಯಿಂದ ಪರಿಸಮಾಪ್ತವಾಯಿತು. ಶಿರದ ಮೇಲೆ ಗುರು ಕಟಾಕ್ಷವಿರುವಾಗ, ಇದೊಂದು ಅತಿಶಯವೇ ?

ನನ್ನ ಪೂಜ್ಯ ಜನನೀ ಜನಕರಾದ ಗಂಗಾಂಬೆ- ಶ್ರೀ ಗುರುಪಾದಾರ್ಯ ಇವರಿಗೆ ನಿರಂತರವಾದ ಶಾಂತಿಯನ್ನು ಕರುಣೆಯಿಂದ ಗುರು ಕೊಡಲಿ ಎಂದು ಅವನ ಪಾದಪದ್ಮಗಳಲ್ಲಿ ಸದ್ಭಕ್ತಿಯಿಂದ ಪ್ರಾರ್ಥಿಸಿ, ಶಿವಲಿಂಗ ಸ್ಮರಣದೊಡನೆ ಲೇಖನಿಗೆ ವಿರಾಮ ಕೊಡುವೆನು.

ಸೋಮನಂ ಜಿತಕಾಮನಂ ಭವಭೀಮನಂ ಶಮಧಾಮನಂ ।
ರಾಮಣೀಯಕ ಮೂರ್ತಿಯಂ ಶ್ರುತಿ ಕೀರ್ತಿಯಂ ನೆರೆ ಕೀರ್ತಿಪೆಂ ॥
ಪ್ರೀತೆಯಂ ವರದಾತೆಯಂ ಪರಿಪೂತೆಯಂ ಗಿರಿಜಾತೆಯಂ !
ಮಾತೆಯಂ ಸು ವಿನೀತೆಯಂ ನೆನೆವೆಂ ಧರಿತ್ರಿ ವಿಧಾತೆಯಂ ॥

ಸುಚರಿತ್ರನೂ ಶಾಂತಿವನ ಚೈತ್ರನೂ ಭವಾಬ್ಧಿ ವಹಿತ್ರನೂ ರೇಣುಕ ಸುಗೋತ್ರನೂ ಆದ, ಭೋ ಶಿವರುದ್ರ ಗುರು ಮಹಾಮಹೋದಯ ! ಜಯಶೀಲನಾಗು.

ಚೆನ್ನಕವೀಂದ್ರನ ಕೋರಿಕೆಯಂತೆ ರಚಿತವಾದ ಶಿವರುದ್ರ ವಿಜಯದ 'ಕಥಾಸಾರ' ಪೂರೈಸಿತು.

ಕಡಲಿಂ ದೊಗೆದ ಕಳಾನಿಧಿ
ಕಡಲನೆ ತಾಂ ಪೆರ್ಚಿಸಂತೆ, ಯೀ ಕೃತಿಯಿಂದಂ ।
ಪಡಮೂಡಿದ ಕಥೆಯಿದು ಎಡೆ
ಬಿಡದೀ ಕೃತಿಯನ್ನೆ, ವೃದ್ಧಿಗೊಳಿಪುದು ಕಳೆಯಿಂ॥

ಹಿರೇಮಗಳೂರು
ಮತಿಘಟ್ಟ (ಬಾಳಗಲ್ ಎಸ್ಟೇಟ್
(ಕಡೂರ ತಾಲ್ಲೂಕು)

ಶ್ರೀ ವ್ಯಾಕರಣಸಾಹಿತ್ಯ ವಿದ್ವಾನ್ ಶಿವಮೂರ್ತಿ
ಸ್ವಾಮಿಗಳವರು ಹಿರಿಯಮಠ

# ಶ್ರೀ ಶಿವರುದ್ರ ವಿಜಯಂ [ಪುರಾಣ] ಗ್ರಂಥ ಪ್ರಕಾಶನಕ್ಕೆ ಧನ ಸಹಾಯ ಮಾಡಿದ ಪೂಜ್ಯ ಸ್ವಾಮಿಗಳು ಮತ್ತು ಭಕ್ತ ಮಾಹೇಶ್ವರರ ಹೆಸರುಗಳು.

---

೧) ಶ್ರೀ ಷ. ಬ್ರ. ಸ್ಥಿರಚರ ಪಟ್ಟಾಧ್ಯಕ್ಷರೂ ತಪೋನಿಧಿಗಳೂ ಆದ ಹುಬ್ಬಳ್ಳಿ ಹನ್ನೆರಡು ಮಠದ ಮತ್ತು ಗೋಕರ್ಣ ವೀರಶೈವ ಮಠದ ಸಂಸ್ಥಾಪಕರೂ ಆದ ಶ್ರೀ ಮಡಿವಾಳ ಶಿವಾಚಾರ್ಯ ಸ್ವಾಮಿಗಳವರು. ೧೦ ೦೦

೨) ಶ್ರೀ ಷ. ಬ್ರ. ಜ. ಪ. ಬಾಲಲೀಲಾ ಸಂಗಮೇಶ್ವರ ಶಿವಾ-ಚಾರ್ಯ ಸ್ವಾಮಿಗಳವರು ಸಾಂಬಯ್ಯನ ಮಠ ಹೂಲಿ. ೩೦ ೦೦

೩) ಕೊಡ್ಲ ಮಠದ ಶ್ರೀ ಗುರುಬಸಯ್ಯನವರು ಧಾರವಾಡ. ೨೫ ೦೦

೪) ಶ್ರೀಮತಿ ಸಕ್ರವ್ವ ಕೋಂ. ಬಾಲಪ್ಪ ಚವಡಿ ಸಾ॥ ಸೂರಕೋಡ ೧೫೧ ೦೦

೫) ,, ಭೀಮವ್ವ ಕೋಂ. ಮರಿತಮ್ಮಪ್ಪ ಗಡಿಗಿ ಸಾ॥ ರೋಣ ೧೫೧ ೦೦

೬) ,, ಶಿವಲಿಂಗವ್ವ ಕೋಂ. ಬಾಲಪ್ಪ ಮೂಗನೂರ ಸಾ॥ ಸೂರಕೋಡ ೧೦೧ ೦೦

೭) ,, ಶಂಕ್ರವ್ವ ಕೋಂ. ಮಲ್ಲಪ್ಪ ಅರಹುಣಸಿ ಸಾ॥ ಸೂರಕೋಡ ೧೫೧ ೦೦

೮) ,, ಗಿರಿಯವ್ವ ಕೋಂ. ಬಸನಗೌಡ ಕರಿಗೌಡ್ರ ಸಾ॥ ಸೂರಕೋಡ ೧೫೧ ೦೦

೯) ,, ಗುರವ್ವ ಕೋಂ. ಬಸಯ್ಯಾ ಮಠಪತಿ ಸಾ॥ ಸೂರಕೋಡ ೧೫೧ ೦೦

೧೦) ,, ಗುರುಲಿಂಗವ್ವ ಕೋಂ. ಕಲ್ಲನಗೌಡ ಪಾಟೀಲ ಸಾ॥ ಕರಮಡಿ ೧೫೧ ೦೦

೧೧) ,, ಪಾರ್ವತೆವ್ವ ಕೋಂ. ಮಲ್ಲಪ್ಪ ನಾಗರಡ್ಡಿ ಸಾ॥ ಸೂರಕೋಡ ೧೦೧ ೦೦

೧೨) ,, ಪಾರ್ವತೆವ್ವ ಕೋಂ. ವೀರಪ್ಪ ಹಳಕಟ್ಟಿ ೧೫೧ ೦೦
ಸಾ॥ ಅಳಗವಾಡಿ (ವಾಗ್ದಾನ)

೧೩) ,, ಶಿವವ್ವ ಕೋಂ. ದ್ಯಾಮಪ್ಪ ಗುಣರಡ್ಡಿ ಸಾ॥ ಸೂರಕೋಡ ೧೫೧ ೦೦

೧೪) ,, ಶಿವವ್ವ ಕೋಂ ರಾಯನಗೌಡ ಮೇಟಿ ಸಾ॥ ಮಂಡಲಗೇರಿ ೧೫೧ ೦೦

೧೪)ಅ ,, ಚೆನ್ನವ್ವ ವೀರಬಸಪ್ಪ ಗುರ್ಲಹೊಸೂರ ಸಾ॥ ಸೂರಕೋಡ ೧೦೧ ೦೦

# ಶಿವರುದ್ರ ಲಿಂಗಪ್ರಬಂಧಂ ಭವನಿರ್ಬಂಧಂ



| | | | | | | | | | | | | |
|---|---|---|---|---|---|---|---|---|---|---|---|---|
| | | | | | | ಶ್ರೀ | | | | | | |
| | | | | | ವಿ | ಶಿ | ಷ್ಟ | | | | | |
| | | | | | ಶಿ | ವ | ಮ | | | | | |
| | | | | | ಸು | ರು | ಚಿ | | | | | |
| ಪ | ರ | ಮ | ಗು | ರು | ಮು | ದ್ರ | ಭೂ | ವಿ | ನು | ತ | ಸು | ಚ |
| ರಿ | ತ್ರ | ನ | ತ | ಲೋ: | ಕ | ದೇ | ವ | ತ | ರು. | ಭಾ | ವೋ | ನ್ನ |
| ತಂ | ದ | ಯಾ | ಪಾ | ರಾ | ಶಿ | ಶಿ | ವ | ಯೋ: | ಗ | ಲೀ | ನ | ಕ |
| | | | ರ್ಷೋ: | ತ್ರಾ | ರ | ಕ | ಭಾ | ವ | ಜ್ಞ | | | |
| | | | | | ರ | ವಿ | ತ | | | | | |
| | | | | | ಸು | ಜ | ಮ | | | | | |
| | | | ದ | ಪ | ರ | ಯ | ಮಿ | ನು | ತ | | | |
| ಸಂ | ಭಾ | ವಿ | ತಂ. | ಶಿ | ವ | ಪು | ಣ್ಯ | ಕ | ರ | ನಾ | ಮ | ವಿ |
| ಧಿ | ಯು | ತಂ | ಭಾ | ವ | ಜಾ | ರಾ | ತ್ಯ | ಕ್ಷ | ಭೂ | ಷ | ಣ. | ಕೃ |
| ಪಾ | ಭ | ರಿ | ತ | ವೀ | ಕ್ಷ | ಣಂ | ಪೊ | ರೆ | ಗ | ಳ | ರ | ತಂ |

ಈ ಮಧ್ಯವರ್ಣದ ಗುರುವು ಶಿಷ್ಯ ಪ್ರಶಿಷ್ಯ ಸಂತಾನಕೆ ಭೋಗಮೋಕ್ಷವಿತ್ತು
ಕಾಪಾಡಲೆಂದು ಗೆಯ್ದ ೧೦೮ ವರ್ಣಗಳುಳ್ಳ ವಾರ್ಧಕ ಷಟ್ಪದಿಗೆ
ಶುಭಂ ಭದ್ರಂ ಮಂಗಲಂ.

ಸೂಚನೆ— ಈ ಲಿಂಗಬಂಧದ ಬಲಭಾಗದ ಮೇಲಿನ ಕೊನೆಯ ಸಾಲಿನ ಮೂರು ಕ್ರಮಾಕ್ಷರಗಳನ್ನು ಅದರಂತೆ ಕೆಳಗಿನ ಬಲಭಾಗದ ಕೊನೆಯ ಸಾಲಿನ ಮೂರಕ್ಷರಗಳನ್ನು ಕೂಡಿಸಲು "ಚನ್ನಕವಿಕೃತಂ" ಎಂದು ಹೊರಡುವದು.

ಓಂ

ಸಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ
ಶ್ರೋತ್ರಿಯಂ ಬ್ರಹ್ಮನಿಷ್ಠಂ (ಶ್ರುತಿ)




**ಪಟ್ಟಾಭಿಷೇಕ :**
ಶಕೆ ೧೮೩೩ ವಿರೋಧಕೃತ ಸಂ.
ಶ್ರಾವಣ ವದ್ಯ ೯ ಶುಕ್ರವಾರ
ತಾ|| ೧೮—೮—೧೯೧೧

**ಲಿಂಗೈಕ್ಯ :**
ಶಕೆ ೧೮೫೪ ಅಂಗೀರಸ ಸಂ.
ಭಾದ್ರಪದ ಶು. ೧೨ ಸೋಮವಾರ
ಶ್ರವಣಾ ನಕ್ಷತ್ರ ಅಮೃತಸಿದ್ಧಿಯೋಗ
ತಾ|| ೧೨—೯—೧೯೩೨

ಓಂ

ಸಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ

ಶ್ರೋತ್ರಿಯಂ ಬ್ರಹ್ಮನಿಷ್ಠಂ (ಶ್ರುತಿ)




**ಪಟ್ಟಾಭಿಷೇಕ :**

ಶಕೆ ೧೮೩೩ ವಿರೋಧಕೃತ ಸಂ.
ಶ್ರಾವಣ ವದ್ಯ ೯ ಶುಕ್ರವಾರ
ತಾ|| ೧೮—೮—೧೯೧೧

**ಲಿಂಗೈಕ್ಯ :**

ಶಕೆ ೧೮೫೪ ಅಂಗೀರಸ ಸಂ.
ಭಾದ್ರಪದ ಶು. ೧೩ ಸೋಮವಾರ
ಶ್ರವಣಾ ನಕ್ಷತ್ರ ಅಮೃತಸಿದ್ಧಿಯೋಗ
ತಾ|| ೧೨—೯—೧೯೩೨



ಮಠದ ಮೂಲ ಶ್ರೀ ಕರ್ತೃ ಗದ್ದುಗೆ



ಸೂರಕೋಡ ಹಿರೇಮಠ ಚರಪಟ್ಟದ
ಶ್ರೀ ಷ. ಬ್ರ. ಗುರುಪಾದ ಶಿವಾಚಾರ್ಯರು.

‖ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ‖

# "ಶ್ರೀ ಶಿವರುದ್ರ ವಿಜಯಂ"



‖ ಸ್ರಗ್ಧರಾವೃತ್ತಂ ‖

ಶ್ರೀಮದ್ಧರ್ಮ ಸ್ವರೂಪಂ ಸುರುಚಿರ ಭುವನಾವಾಸನಶ್ರಾಂತಸತ್ವಾ ।
ರಾಮಂ ಸ್ಫಾರಾಕ್ಷಭೂಷಂ ವಿಬುಧವಿನುತ ನುದ್ರಾಗವಾಸಂ ಸುಗೋತ್ರೋ ‖
ದ್ದಾಮಂ ಭೂತಿ ಪ್ರಯುಕ್ತಂ ಪ್ರಣವ ರುಚಿ ವಿನಿರ್ಧೂತ ಕಾಮಂ ನಿರಂತಂ ।
ಸೋಮಾಂತಸ್ತೇಜನೆಮ್ಮಂ ಸಲಪ್ರುಗೆ ಶಿವರುದ್ರಂ ವೃಷಾಧೀಶಮುದ್ರಂ ‖೧‖

‖ ಡವಣೆ ‖

ಕರಯುಗಂ ಸತ್ಪಲ್ಲವಂ ಭುಜಮೆ ರಮಣೀಯ ವಿಶಾಲ ಶಾಖೆ ಭಾ।
ಸುರ ಗಲಕ್ಷ್ವೇಡಂ ಮದಾಳಿ ಸುಹಾಸಮೇ ಸುಮ ನಿಭಂ ಮುಖಂ ಫಲಂ ‖
ಸುರಭಿ ಸಂಯುಕ್ತಂ ವಿಧೂತ ಕುವೃತ್ತಿ ಸರ್ವ ನಿಗಮಸ್ತುತಂ ಗಿರೀ ।
ಶ್ವರ ಮಹಾಕಲ್ಪಾವನೀಜ ಮೆಮಗೋಲಿದೀವುಗೆ ಕಲ್ಪತಾರ್ಥಮಂ ‖೨‖

‖ ಮ ‖ ಸ್ರ ‖ ವೃ ‖

ಪದಗಳ್ಕೂರ್ಮಾಭ ಮಂಭಃಕಣಮೆ ಪಸದನಂ ಜತ್ತುಳಂ ಗೌರವಾಸಂ ।
ಪದವೆತ್ತುದ್ಯತ್ಕಟಿ ಪ್ರೋಥಮೆ ಪುಳಿನತಳಂ ನಾಭಿಯೇ ನಿಮ್ನ ಮೊಪ್ಪಿಂ ‖
ದಿದ ನೇತ್ರಂ ಮೀಂಗಳಾಸ್ಯಂ ಸರಸಿಜ ಮೆನಿಸಲ್ಭಾವಿಸಲ್ದೇವಗಂಗಾ ।
ನದಿಯಂತಾರಾಜಿಸೀಶಾನಿ ಸುವಿಮಲ ವಚಃಸಿದ್ಧಿಯಿತ್ತೀವುಗೆಮ್ಮಂ ‖೩‖

ಕರಖಡ್ಗಪ್ರಾಂಶು ವಿದ್ಯುದ್ದ್ಯುತಿ. ವಿವಿಧ ವಿಭೂಷಾಂಶು ಶಕ್ರಾಯುಧಂಭೀ ।
ಕರ ಹೂಂಕಾರ ಸ್ವನಂ ಪೆರ್ಮೊಳಗೊಡಲಿನ ಬಣ್ಣಂ ಪಯೋದಾಳಿಯಾಗಲ್ ॥
ವರಕಾರುಣ್ಯಾಮೃತಂ ವರ್ಷಮೆನಿಸೆ ಹರಿದರ್ಪಾಗ್ನಿಯಂ ನಂದಿಸಲ್ಪ ।
ರ್ಪುರು ವರ್ಷಾಕಾಲಮೆಂಬಂತೆಸೆವನೆಸಗಲೆಮ್ಮಿಷ್ಟಮಂ ವೀರಭದ್ರಂ ॥೪॥

ಶಿವಧಾವಲ್ಯಂ ಕುಭೃಜ್ಜಾತೆಯ ಲಲಿತ ಹರಿದ್ರಾಭಮೊಗ್ಗೂಡಿ ತ್ರೈಲೋ ।
ಕ್ಯವನೆಲ್ಲಂ ಸರ್ವದಾ ರಕ್ಷಿಸುವ ತದಮಲಾಂಶೋದ್ಭವಂ ಸಿದ್ಧಿದಾತಂ ॥
ಸುವಿರಾಜನ್ಮೂಷಕಾರೂಢನಭವಗಣ ಪಟ್ಟಾಧಿಕಾರತ್ವದಿಂದೊ ।
ಪ್ಪುವನೀಪೌರಾಣಕೊಳ್ಪಂ ಕರುಣಿಸುಗನಿಶಂ ವಿಘ್ನನಾಶಂ ಗಣೇಶಂ ॥೫॥

॥ ಸ್ರ : ಗ್ಧ ॥ ವೃ ॥

ಗೀರ್ವಾಣಾಸ್ಯಾಂಬುಜಾತಂ ಕುಣಿಯೆ ಮಣಿಯೆ ದುಶ್ಲಾಘ ಮಿಂದೀವರಂಗ ।
ಳ್ಗರ್ವಾಭೀಳಾಂಧಕಾರಂ ಪರಿಯೆ ಸರಿಯೆ ದೈತ್ಯಾಳಿ ನಕ್ಷತ್ರ ತೇಜಾ ॥
ಖರ್ವಂ ಕಾಪಟ್ಯ ಘೂಕಂ ಕಳಿಯೆ ಸುಳಿಯೆ ಲೋಕಾನುರಾಗೋದಯಂ ಮ ।
ತ್ಸರ್ವಾರ್ಥಂ ಗಾಣುವೊಲ್ಮಾಳ್ಕೆಮಗೆ ಗಿರಿಶಪುತ್ರಂ ಷಡಾಸ್ಯಾಬ್ಜ ಮಿತ್ರಂ ॥೬॥

॥ ಚಂ॥ ಮಾ॥ ವೃ ॥

ಶಿವಸುಮವಾಟಿಯಲ್ಲಿ ಸೆವಶೇಷ ಲಸತ್ಸುಮನೋ ವಿತಾನ ಶಾಂ ।
ಭವಗಣ ನೀರಜಾಕರದೆ ರಾಜಿಪ ಶಂಕರ ಪಾದ ಪುಂಡರೀ ॥
ಕವ ಸವಿಯುತ್ತೆ ತಾದೃಶಮ ನಾಂತವೊಲೊಪ್ಪುತಲಿರ್ಪ ಭೃಂಗಿ ಪಾ ।
ದ ವನಜದೊಳ್ವಿಹಾರಿಸುತಮಿರ್ಕೆ ಮದೀಯ ಮನೋ ಶಿಳೀಮುಖಂ ॥೭॥

ಶ್ರುತಿನುತ ವೀರಶೈವ ಮತ ಕೇತುವನೂರ್ದು ಧರಿತ್ರಿಯಲ್ಲಿ ಪಾ ।
ರ್ವತಿಪತಿಯಷ್ಟ ಸತ್ಕವಚ ಸಂಗತ ನಿರ್ಮಲ ಜಂಗಮರ್ಗೆ ಸ॥
ನ್ನುತ ವಿಧಿಯಿಂದೆ ಜಂಗಮ ಪದತ್ವವನಿತ್ತು ಷಡುಸ್ಥಲಾರ್ಥಮಂ।
ಶ್ರುತಪಡಿಸಿರ್ದ ಪಂಚಗುರುಗಳ್ಗೆರ್ದೆ ಗರ್ದುಗೆಯಿತ್ತು ವಂದಿಪೆಂ ॥೮॥

ತನುಗತ ದುರ್ಮಲಂ ದೊಳೆದು ಮಂತ್ರಮಯಾಂಗಮ ನೆಯ್ದೊಡರ್ಚಿ ಚಿ ।
ದ್ಘನಶಿವನಂ ಕರಾಂಬುಜದೆ ಕಾಣಿಸಿ ತದ್ವಿಧ ಭಕ್ತಿ ಸಿದ್ಧಿಯಂ ॥
ಮನಮೊಸೆದಿತ್ತು ತನ್ಮತವನೋವ ಸದಂಚಿತ ಪಂಚಪೀಠದೊ ।
ಳ್ಮಿನಗುವ ತನ್ಮಹಾ ಗುರುಪರಂಪರೆಯೀಗೆ ನಿಜಾಂಘ್ರಿ ಸೇವೆಯಂ ॥೯॥

ವಿಮಲಪ್ರಮಥಾಧೀಶರ।
ಸಮೂಹದೊಳ್ಕೀರ್ತಿವೆತ್ತ ಮಹಿಮೆಯನೊಳಗೊಂ॥
ಡ ಮಿರಗುವ ಶರಣರರುವ।
ತ್ತು ಮೂಸರಡಿಗಳೆಮಗೀಗೆ ನಿರ್ವಿಘ್ನತೆಯಂ॥೧೦॥

ಅನಿಮಿತ್ತಬಂಧುವಾನಂ।
ದ ನದೀಪ ವಿನಯಗುಣಾಭರಣ ಜನನವಿದೂ॥
ರನಧಿಕ ವಿದ್ಯಾ ಸಂಪ।
ನ್ನನೆನಿಸಿದ ನಿಜಗುಣಯೋಗಿಗಾನತನಪ್ಪೆಂ॥೧೧॥

॥ ಚಾಮರವೃತ್ತಂ ॥

ಸಾರವೇದ ಚೋದಿತಂ ಗುರೂತ್ತಮಾಭಿ ಕಲ್ಪಿತಂ।
ಚಾರು ಮೋಕ್ಷ ಕಲ್ಪಪಾದಪಂ ಭವಾಬ್ಧಿತಾರಕಂ॥
ವೀರಶೈವ ಸನ್ಮತಂ ಸದಾ ಮದೀಯ ಚಿತ್ತದೊ।
ಳ್ಸೇರಿಕೊಂಡದಿರ್ಕೆ ಬೆಚ್ಚಿದಂತೆ ಭದ್ರಮೆಂಬಿನಂ॥೧೨॥

॥ ಮ॥ ವಿ॥ ವೃ ॥

ಶರಣಂ ಶಾಂತಿ ಸುಖೈಕ ಲಿಂಗ ಕರಣಂ ದುಸ್ತಾಪ ಸಂಸಾರ ಸಂ।
ಹರಣಂ ಶೈವಮತಾಬ್ಧಿ ಶೀತಕಿರಣಂ ಸುಜ್ಞಾನ ಪೂರ್ಣ ಪ್ರಭಾ॥
ವರಣಂ ಸೇವಿತ ಭಕ್ತ ವರ್ಗ ಭರಣಂ ವೈರಾಗ್ಯ ಸನ್ಮಾರ್ಗ ಸಂ।
ಚರಣಂ "ಶ್ರೀಗುರುಪಾದಯೋಗಿ" ಚರಣಂ ಬೆಚ್ಚಿರ್ಕೆ ಮಚ್ಚಿತ್ತದೊಳ್॥೧೩॥

॥ ಚಂ॥ ಮಾ॥ ವೃ॥

ಕ್ಷಿತಿಪತಿ ವಿಶ್ವನಾಥ ಪದಪಂಕಜ ಸೌರಭಲುಬ್ಧ ಷಟ್ಪದಂ।
ಶಿತಿಗಲಮಂತ್ರಮೂರ್ತಿ ಲಲಿತೋಭಯ ಸತ್ಕವಿತಾ ವಧೂ ವಶೀ॥
ಕೃತನಭವಾಗಮಜ್ಞ ರಸಿಕಂ ಶಿವಭಕ್ತ ವಿತಾನ ಕಿಂಕರೋ।
ನ್ನತಕವಿ ಪದ್ಮಣಾಂಕನೆಮಗೀಗೆ ಪ್ರಸನ್ನ ವಚಃಪ್ರಸಾದಮಂ॥೧೪॥

॥ ಚಂ॥ ಮಾ॥ ವೃ॥

ಲಯಕೊಳಗಾದರಂ ನುತಿಸದಸ್ತ್ವಲಯಂ ಶಿವಗೊಲ್ದು ಜಿಹ್ವೆಯಂ।
ಕ್ರಯಿಸುತೆ ರಾಜಶೇಖರ ವಿಲಾಸ ಸಮಾಖ್ಯ ಮುಖ ಪ್ರಬಂಧ ರಾ॥
ಜಿಯ ರಚಿಸುತ್ತೆ ಬಾಲ್ಯತನದೊಳ್ಜಸವೆತ್ತು ಬುಧಾಳಿ ಸನ್ನುತೋ।
ಭಯ ಕವಿತಾ ವಿಶಾರದ ಷಡಕ್ಷರನೀಗೆ ಕಾವ್ಯ ಶಕ್ತಿಯಂ॥೧೫॥

ತದನಂತರಮೀ ಪೌರಾ ।
ಣದುಪಕ್ರಮಕಾರನುಗ್ರಹಂ ಸಮನಿಸಿ ದ ॥
ತ್ತದನೊರೆವೆಂ ಕಾರಣಮಂ ।
ಮುದದಿಂ ಶ್ರವಣೇಚ್ಛುಗಳ್ಗೆ ಮಂಗಲದಿನದೊಳ್ ॥೧೬॥

॥ ವ.॥ ಸ್ರ॥ ವೃ ॥

ವಿಮಲಶ್ರೀಕರ್ತೃಪೀಠಾಂತಿಕದೊಳಭವ ಸದ್ಗೋಷ್ಠಿಯಿಂದೇಕಪತ್ನೀ ।
ರಮಮಾಣಂ ಲಿಂಗಪೂಜಾಪ್ರಿಯನತಿ ರಸಿಕಂ ಸಾತ್ವಿಕಂ ಕೀರ್ತಸಾಚಾ ॥
ರ್ಯ ಮಹಾಪ್ರಾಶಸ್ತ್ಯಮಂ ಪೊರ್ದಿ ಜಸಪಡೆದ "ವೀರಾಭಿಧಂ" ಶಾಸ್ತ್ರಿಯುಂ ಸ।
ತ್ರಮ ಭಕ್ತವ್ರಾತಮಾನುಂ ಕೆಲಜನದೊದವಿಂ ತಳ್ತು ಕುಳ್ತಿರ್ಪಾಗಳ್ ॥೧೭॥

॥ ಚಂ॥ ಮಾ॥ ವೃ ॥

ಕರಿವೃಷಭಾದಿ ಸದ್ಗುರು ಪರಂಪರೆಯೊಳ್ಜಸವೆತ್ತು ರಾಜಿಪಾ ।
ಪರಮ ವಿರಾಗಶೀಲ ಶಿವರುದ್ರ ಮಹಾಶಿವಯೋಗಿ ದಿವ್ಯಸ ॥
ಚ್ಚರಿತೆಯನೊಲ್ದು ರೂಪಿಸೆ ಮಹಾಶಿವಲಿಂಗ ಸದಿಚ್ಛೆಯುಣ್ಮಿಮುಂ ।
ಬರಿದು ಪಳಂಚಿ ಮೇರೆವರಿದಿರ್ಕುಮದೆಮ್ಮ ಹೃದಂತರಾಳದೊಳ್ ॥೧೮॥

॥ ಮ॥ ವಿ॥ ವೃ ॥

ಇದರಿಂದಾಗಿ ಪುರಾಣಮಂ ವಿರಚಿಸಲ್ಪ್ರಾರಂಭಮಂ ಮಾಳ್ಪುದಿಂ ।
ದೊದಗಿರ್ದೀದಿನಮೀರ್ದೊಡೇಂ ಮಗುಳ್ದು ತಾನೆಂದೆಂದಿಗುಂ ಬಾಡದಿ ॥
ರ್ಪುದು ತದ್ರೀತಿಯನಾಂತನಂತ ಗುರುಚಿಲ್ಲಿಲಾ ಚರಿತ್ರಂಗಳಂ ।
ಮುದದಿಂ ನಿರ್ಮಿಪಶಕ್ತಿಯಂ ನಿನಗವಂ ಯೋಗೀಶ್ವರಂ ನೀಡುವಂ ॥೧೯॥

ಪ್ರಚುರಪ್ರಸಾದ ರಂಜಿತ ।
ರುಚಿವಾಣಿಯಿನಿಂತವರ್ಗಳಾಶೀರ್ವದಿಸಲ್ ॥
ವಚಿಸದೆ ರಚಿಸಲ್ತೊಡಗಿದೆ ।
ನುಚಿತಂ ಮತಿಗೆಂದು ನಂಬಿ ಗುರುಬಲ ವಿಡಿದಾಂ ॥೨೦॥

ಭುವಿಬಾಹ್ಯಗತ ರಜನಿಯಂ ।
ರವಿಯಳಿವಂ ದ್ವಂದ್ವ ರಜನಿಯಂ ಕವಿಯಳಿವಂ ॥
ರವಿಕಾಣದುದಂ ಪ್ರತಿಭಾ ।
ಕವಿ ಕಾಣುವನದರಿನರಿಯೆ ಕವಿ ರವಿಗಧಿಕಂ ॥೨೧॥

ಸಾಹಿತ್ಯ ರಸಾಮೃತಮಂ ।
ಸಾಹಿತ್ಯೋಪಾಸಕರ್ತಿಳಿವರಜ್ಞರದೇ ॥
ಸೂಹಿಸಿದಪರೆ ಪೆಡೆಯೊಳಿ ।
ರ್ಪಹೀನಮೇಂ ಬಲ್ಲುದೆ ಮಣಿ ಕಲೆಯಂಬೆಲೆಯಂ ॥೨೨॥
ಅಸಮ ಗುರುವಿತ್ತ ಕವಿತಾ ।
ರಸಮಂ ಗುರುಗಿತ್ತುಪಕೃತನಾಗದೆ ಭವಸಂ ॥
ತ್ರಪಿತರ್ಗಿತ್ತೊಡೆ ಪಸಿರ್ಗಾ ।
ಶಿಸಿ ಮಹಿಷಂ ಕೆಸರೊಳಳ್ದಿದಂತೆವೊಲಕ್ಕುಂ ॥೨೩॥
ಕವಿಯಮಗಳ್ಕವಿತಾಂಗನೆ ।
ಯುವಳಂ ಮನವೊಲ್ದು ತನ್ನವರ್ಗೀಯಲ್ತ ॥
ದ್ಯುವತಿ ಸೂಗದಿನಿರ್ಪಳ್ಬೇ ।
ರೆವಿಧಂ ತಾನಾಗೆ ಮುನಿಸಿನಿಂ ಶಾಪಿಸಳೇ ॥೨೪॥

॥ ಚಂ॥ ಮಾ॥ ವೃ ॥

ಉದರನಿಮಿತ್ತಮೊಳ್ಪಸಕೆ ಭೂಜನ ಮಾನ್ಯತೆಗೊಲ್ದು ಭೂರಿ ವಿ ।
ತ್ತದೊದವಿಗಾನೊಡರ್ಚದೆ. ಜರಾಮರಣಾವೃತ ದುರ್ಭವಾಗ್ನಿಯಿಂ ॥
ಕುದಿವೊಡಲಿಂಗಿದೇ ಚರಮ ಜನ್ಮದೆ ತಚ್ಛಿವ ರುದ್ರಯೋಗಿ ಸ ।
ತ್ಪದ ಕರುಣಪ್ರಸಾದ ಫಲಸಿದ್ಧಿಗೊಡರ್ಚುವೆನೀ ಪ್ರಬಂಧಮಂ ॥೨೫॥

ಶ್ರೀರೇಣುಕ ಶಾಖಾನ್ವಿತ ।
ನಾರಾಜಿತ "ರವಿಪುರ" ಹಿರಿಯ ಮಠಾಧೀಶಂ ॥
ಚಾರು "ಗುರುಪಾದವರ್ಯ"ಕು ।
ಮಾರಂ ಚೆನ್ನಕವಿ ನಿರ್ಮಿಸಿದನೀ ಕೃತಿಯಂ ॥೨೬॥

ಶಿವರುದ್ರ ವಿಜಯಮೆಂದೀ ।
ನವಕೃತಿ ಪೆಸರೀ ಕೃತಿಗೊಡೆಯಂ ಶಿವರುದ್ರಂ ॥
ಸವಿಮಿಗೆ ಕೇಳ್ವರ್ನಲಿದೋ ।
ದುವರ್ಗುರು ಪದಾಬ್ಜ ಸಕ್ತ ಭಕ್ತರ್ಶಕ್ತರ್ ॥೨೭॥

॥ ಮ॥ ಸ್ರ॥ ವೃ ॥

ಶಿವಭಕ್ತಿಜ್ಞಾನ ವೈರಾಗ್ಯ ವಿಭವಕಿದು ಮನೋಜ್ಞಾಲಯಂ ಸರ್ವಸೌಭಾ ।
ಗ್ಯವನೀಯುತ್ತಿರ್ಪ ತಾಣಂ ಜನನ ಮರಣ ತಾಪೋದ್ಧರಂ ಕಾವ್ಯಮಂ ಸಾ ॥

ರ್ಜುನ ರೂಪಂ ದಾಳ್ದ ಸ್ಫಾರಾಭಿನವ ಸುರಕುಜಂ ಮೋಕ್ಷಶಾಂತಿ ಸ್ಥಲಂ" ಶ್ರೀ।
ಶಿವರುದ್ರಾಚಾರ್ಯ" ಚಾರಿತ್ರ್ಯಮಿದು ಗಿರಿಶನಂ ತೋರ್ಪ ಸುಜ್ಞಾನದೀಪಂ ॥೨೬॥

ಸಚ್ಚರಿತೆಯನಿದನೊಲಿದಾ ।
ನಿರ್ಚ್ಚಂ ಬಿಡದೋದುವ ಪಠಿಯಿಪರ್ಕೇಳ್ವರ್ ॥
ಮೆಚ್ಚಿ ಬಿಡದ ವರ್ಗಿಹಪರ ।
ಸಚ್ಚಿತ್ಸುಖ ಮಿತ್ತು ಪೊರೆಗೆ ತಚ್ಛಿವರುದ್ರಂ॥ ೨೯॥

ಶ್ರೀಗುರು ಪಾದಪದ್ಮ ಪರಾಗ ಭಸಿತ ಫಾಲಪಟ್ಟ
ಚೆನ್ನಕವಿ ವಿರಚಿತಂ ಶಿವರುದ್ರ ವಿಜಯ
ಲೀಲಾಪ್ರಬಂಧದೊಳ್ಪ್ರಥಮಾಶ್ವಾಸಂ
— ಸಮಾಪ್ತಂ. —



## ದ್ವಿತೀಯಾಶ್ವಾಸಂ.



ಶ್ರುತಿನುತ ಪಾವನ ಶಾಂಭವ ।
ಮತೋನ್ನತಿಗಭವನ ಪಶ್ಚಿಮ ಶಿಖಾ ಚಕ್ರ ॥
ಸ್ಥಿತ ಕಲೆಯೊಡಮೂಡಿತ್ತೆನೆ ।
ಕ್ಷಿತಿಯೊಳ್ಗುರು ವಂಶದೊಳಿವನಿಳಿದಂ ಸ,ಳಿದಂ ॥೧॥

ವಾರಣದೈತ್ಯ ನಿವಾರಣ ।
ವಾರಣ ವಕ್ತ್ರಾಂಬುಜ ತರುಣಾರುಣ ಭಸಿತೋ ॥
ದ್ಧಾರಣ ದುರೀಷಣ ತ್ರಯ ।
ಮಾರಣನೀಗೆಫಲ ಸಿದ್ಧಿಯಂ ವೃಷಪತ್ರಂ ॥೨॥

ಈಕೃತಿಗಾರಂಭಮನಾ ।
ಲೋಕಿಸೆ ಭೂರಮಣಿ ದಾಳ್ದ ನೀಲಾಂಬರದೊಲ್ ॥
ಸೈಕತದಿಂ ಶುಕ್ತಿಗಳಿಂ ।
ಭೇಕಗಳಿಂ ವೀಚಿಯಿಂ ಪಯೋನಿಧಿಮೆರೆಗುಂ ॥೩॥

॥ ಮ ॥ ಸ್ರ ॥ ವೃ ॥

ವಿಲಸದ್ದಂಭೋಳಿ ಹಸ್ತಾಸ್ತ ಚಕಿತ ಧರಣೀ ಭೃತ್ಕುಲಂ ಬಂಭರೋದ್ಯ ।
ಜ್ಜಲಮುಗ್ಸಂಯುಕ್ತ ತೀರಂ ರುಚಿರ ವಿವಿಧ ಸಂಭೇದ ಮೌರ್ವಾಗ್ನಿ ಮುಕ್ತಾ॥
ಫಲಮುದ್ಯನ್ನಾಗ, ನಾಗಾವಳಿ ಮಕರ ಮಹಾ ಕೂರ್ಮಮಂಭಶ್ಚರಪ್ರಾ ।
ಜ್ಜುಲದಿಂ ಗಾಂಭೀರ್ಯದಿಂ ರಂಜಿಸಿದುದತಿ ರಸಾಕಾರಮುದ್ರಂ ಸಮುದ್ರಂ॥೪॥

ಕಲಹಂಸೀರಾಜಿ ಕಲ್ಲೋಲ ನಿಕರಮುರು ಕಂಬು ಪ್ರತಾನಂ ವಹಿತ್ರಾ ।
ಲಿ, ಲಸಡ್ಡಿಂಡೀರ ಸಂದೋಹ ಮುಡುಪ ಚಯ ಮುದ್ಯತ್ಪ್ರವಾಳೌಘ, ಜನ್ಮ॥
ಸ್ಥಲಮಂಭೋಜಾತ ಸಂಘಾತ ಮಸಮ ಸುಳಿ ಗರ್ತಂ ಪ್ರತೀರೋರ್ವಿಜಾತಾ।
ವಲಿ ಭದ್ರಂ, ಭೂರಿರೌದ್ರಂ,ವಿಲಸಿತಮಣಿಮುದ್ರಂ,ಸುಭದ್ರಂ,ಸಮುದ್ರಂ ॥೫॥

ಚಂ॥ ಮಾ॥ ವೃ॥

ಅಮೃತಕಲಾಮುಮಂ ಸಕಲ ಸಸ್ಯವನುಜ್ವಲಿಪಂ ಪ್ರಮೋದದಂ ।
ಶಮುಗುಣರಂಜಿತಂ ವಿಗತಮಾತನುಜಾತ ಮಹೇಶನುತ್ತಮಾಂ ॥
ಗಮನಡರ್ದಾವಗಂ ಮೆರೆವನೊಳ್ದೊಡಮೆಂದೆನೆ ಮತ್ತನೂಭವಂ ।
ಸಮುವೆನಗಾರದೆಂದುಲಿವವೋಲುಲಿಗುಂ ಶರಧೀಂದ್ರನುರ್ಬಿನಿಂ ॥೬॥

ಆದೊಡಮೇಂ ಕುಂಭೋದ್ಭವ ।
ನಾದಂ ಬರಪೀರ್ದನಾತ್ಮಭವೆ ಚಂಚಲೆಯಳ್ ॥
ಮೇದಿನಿಯೊಳ್ಭಂಗಕ್ಕೆಡೆ ।
ಯಾದೆನೆನುತ್ತೊಡಲವನ್ಧಿಯಿಂ ತಳಮಳಿಕುಂ ॥೭॥

ಮ॥ ವಿ॥ ವೃ॥

ನಭದಂತೀಶ್ವರನಂತೆ ವೋಲುಡುಪ ರಮ್ಯಂ ವೀರಯೋದ್ಧಾರನಂ ।
ತಿಭದಂತೂರ್ಜಿತ ಪುಷ್ಕರ ಪ್ರಯುತಮುಂ ಪದ್ಮಾಕ್ಷನಂತಂಬುಜ ॥
ಪ್ರಭವಂ ಧಾತೃವಿನಂತೆ ಗೋ ರುಚಿರಮುಂ ಭ್ರಾಜನ್ಮಖಾಗಾರದಂ ।
ತೆ, ಭಟೋದ್ಯದ್ರಣದಂತೆ ಬಾಡಬ ಯುತಂ ರತ್ನಾಕರಂ ರಾಜಿಕುಂ ॥೮॥

ಚಂ॥ ಮಾ॥ ವೃ॥

ಪಡುವಣ ದಿಗ್ವಧೂಮಣಿ ವಿರಾಜಿತ ಭಾಲ ಲಲಾಮವೋ, ಪೊಡ।
ರ್ಪೊಡೆದ ನಭೋಂಬುಧಿ ಪ್ರಗತ ಚೆಂಬವಳೋ, ವಡವಾಗ್ನಿ ಯಿಂ ಕೆಲ ॥

ಕ್ಕೊಡೆದು ಕಳಲ್ಚಿ ಬೀಳ್ದ ಹೃದಯಂಗಮ ಸೆರ್ಗಿಡಿಯೋ ಎನಲ್ಕೆ ಸಂ ।
ಗಡಿಸಿದ ಮೇರು ಭೂಧರಮದೊಪ್ಪಿತು ಮಧ್ಯದೊಳಾ ಪಯೋಧಿಯಾ ॥೯॥

ತದಚಲದಗ್ರದಲ್ಲಿ ದಿವಿಜಾಂಗನೆಯರ್ಜಗದಾದಿಮಾತೆಯಂ ।
ಪದಪೊಗೆಯಲ್ಪುಸಿಕೀರ್ತಿಸಿ ನಮಸ್ಕರಿಸರ್ಚಿಯ ಭಕ್ತಿಭಾವದಿಂ ॥
ದುದಿತಮಹೋತ್ಸವಂ ಮಿಸುಗೆ ವಿಷ್ಣುವಧೂಮಣಿಯಾಗಲಾಳ್ದನಂ ।
ಸದಮಲ ಶಂಭುನಂವಿಧಿರಮೇಶ ಮುಖಾಮರರೊಲ್ದು ಕೀರ್ತಿಪರ್ ॥೧೦॥

ಇಂತೆಸೆವ ಮೇರುಗಿರಿಗೋ ।
ರಂತೊಪ್ಪುವ ದಕ್ಷಿಣಾಶೆಯೊಳ್ವಸುಧಾ ಸೀ ॥
ಮಂತಿನಿ ಸೀಮಂತದ ಮಣಿ ।
ಯಂತಿರೆ ಭಾರತಜನಪದಮೆಸೆಗುಂ ಮಿಸುಗುಂ ॥೧೧॥

ಮ॥ ವ॥ ವೃ॥

ನದಿಯಿಂ ನಂದನದಿಂ ಪಶುಪ್ರಕರದಿಂ ವಾಪೀ ತಟಾಕಂಗಳಿಂ ।
ಪದವೆತ್ತೊಪ್ಪುವ ಲಿಂಗಗೇಹತತಿಯಿಂದಧ್ಯಾತ್ಮ ಶೀಲರ್ಕಳಿಂ ॥
ಪುದಿದೆತ್ತಂ ರಸದುಂಬಿತೋರ್ಪ ಕಳಮ ಕ್ಷೇತ್ರಂಗಳಿಂ ಸರ್ವಸಂ ।
ಪದದೊರ್ಗಿಂ ಮೆರೆಗುಂ ಮಹೌಷಧಿ ವನ ವ್ರಾತಂಗಳಿಂ ಭಾರತಂ ॥೧೨॥
ಪರಹಿತಕಾರ್ಯ ಧುರ್ಯ ಪುರುಷೋತ್ತಮರಿಂ ಬುಧರಿಂ ನಿರಂತರಂ ।
ಮೆರೆಯುವ ಪುಣ್ಯತೀರ್ಥದೊದವಿಂ ಧನಧಾನ್ಯ ಕೃಷಿ ಪ್ರವೀಣರಿಂ ॥
ಧುರಪಟು ವೀರರಿಂ ಶ್ರುತಿವಿಶಾಪದರಿಂ ಗುರು ಸತ್ರದಿಂ ಮನೋ ।
ಹರಮೆನೆ ತೋರ್ಪಧಾತು ತತಿಯಿಂ ಭರತಾವನಿ ಯೊಪ್ಪಿ ತೋರುಗುಂ ॥೧೩॥

ಮ॥ ಸ॥ ವೃ॥

ಕರುಣಾದ್ರಾಪಾಂಗದಿಂ ಘೋರ ದುರಿತ ಭವ ಸಂಸಾರಮಂ ತಳ್ಗಿ ಸುತ್ತೊ ।
ಲ್ದುರೆ ಭಕ್ತೇಷ್ಟಾರ್ಥಮಂ ಸಾರ್ಚಿ ನಿರತಿಶಯ ಕೈವಲ್ಯಮಿತ್ತೋವಲಿರ್ಕಂ ॥
ದಿರದೀರಾದ್ರಾಣದೊಳ್ಕೀರ್ತಿವಡೆದೆಸೆವ ಚಿಜ್ಜ್ಯೋತಿರಾಕಾರ ಲಿಂಗೋ ।
ದರದಿಂ ಪೈದೋರುವಂ ಶಂಭುವೆನೆ ವಿಷಯಮಂ ಬಣ್ಣಿ ಸಲ್ಬಲ್ಲನಾವಂ ॥೧೪॥

ಸ್ರ॥ ಗ್ಧ॥ ವೃ॥

ಶ್ರೀಮಚ್ಛೈವಾನ್ವಯ ಸ್ಥಾಪನ ದೆಸೆಯ ಮಹಾರೇಣುಕಾಚಾರ್ಯವರ್ಯಂ ।
ದಾಮೋದ್ಯದ್ರಾವಣೇಂದ್ರಾನುಜನ ಹೃದಯ ಸಂಕಲ್ಪ ಕಾಮ್ಯಾರ್ಥಮಂ ಲೀ॥

ಲಾಮಾತ್ರಂ ದೆತ್ತುಮುಕ್ಕೋಟಿ ಗುರುವೆರಸಿ ಮುಕ್ಕೋಟಿ ಲಿಂಗಂಗಳಂ ಮೇ।
ಣ್ಣಾಮೊಂದೇ ಕಾಲದೊಳ್ತಾಳ್ದು ಪೊರೆದಿಳೆಗೆ ತೋಡಪ್ಪುದಿನ್ನಾವುದಿರ್ಕುಂ ॥೧೫॥

ಜಡಮೆಂಬುದು ನೀರೊಳ್ಕಡು।
ಬಡತನಮೆಂಬುದು ಮೃಗಪತಿಯೊಳ್ಕುಟಿಲಂ ನೋ ॥
ಳ್ಪೊಡೆನದಿಯೊಳ್ಕರಿಣತೆಯಂ।
ಪುಡುಕಲ್ಪಜ್ರದೊಳಗಲ್ಲದಿಲ್ಲಾ ನಾಡೊಳ್ ॥೧೬॥

ಚಂ॥ ಮಾ॥ ವೃ ॥

ಸರಸಿಜ ಮಿತ್ರಮಂಡಲದವೋಲಿರೆ ಗೋವಲಯಂ ಸರೋರುಹಾ।
ಕರದೊಲುಪದ್ಮಸದ್ಮ ಮಬಲಾಸ್ತನದಂತೆ ಪೊಲಗ್ರಹಾರ ಬಂ ॥
ಧುರಸದಲಂಕೃತಂ ಬಗೆಯೆ ವತ್ಸರದೊಲ್ಬಹುಧಾನ್ಯ ರಾಜಿತಂ।
ತರಹರದೀಪುಜಾಡುಚೆಲು ಕನ್ನಡನಾಡು ನಿರಂತಮೊಪ್ಪುಗುಂ ॥೧೭॥

ಇಂತಿರ್ಪ ಮನೋಜ್ಞ ಧರಾ।
ಕಾಂತಾಮಣಿ ದಾಳ್ದನೀಲವಸ್ತ್ರದ ಸೆರಗಂ ॥
ಬಂತೆ ನವೋದ್ಧೃತ ಪಳ್ಳಂ।
ಸ್ವಾಂತಾಕರ್ಷಿಸೆ ಘುಳುಘುಳು ರವದಿಂ ಪರಿಗುಂ ॥೧೮॥

ಮ॥ ಸ್ರ॥ ವೃ॥

ಬಲವತ್ಪಾಪೌಘಮಂ ಕರ್ಜಲತನುಹರ ನುಚ್ಛಿದ್ರಸಂ ಘೂರ್ಮಿಸುತ್ತುಂ।
ಜಲರೂಪಂದಾಳ್ದು ಲೋಕಕ್ಕಿಳಿದು ಪರಿಯಿತೋ, ದೇಶಿಕಾವಾಸಕೆಯ್ತಂ ॥
ದಲಸಿರ್ದೆಲ್ಲರ್ಸುಖಂಬೊಂದಿರಲು ಸುರಿದ ಕಾರುಣ್ಯ ಪೀಯೂಷಮೋ, ಎಂ।
ಬೊಲು ಕಣ್ಗಿಂಬಾಗಿ ರಾರಾಜಿಪುದು ಚೆಲುಮೆಯಾರೋಗ್ಯ ಪಾನೀಯದಿಂದಂ ॥೧೯॥

ಬಿಡದೆನ್ನಂ ಸೋಂಕಿರ್ಪರ
ಕಡುಪಾಪವನೊಕ್ಕಲಿಕ್ಕಿ ವಿಶ್ವಂಭರೆಯೊಳ್ ॥
ನ್ಮೃಡಗುರು ಪೂಜೆಗೆ ಸಲ್ವೆಂ।
ಬಿಡದಾನೆಂದು ಗುರುವೇದಿವೇಷ್ಟಿಸಿ ಪರಿವಳ್ ॥೨೦॥

ಚಂ॥ ಮಾ॥ ವೃ॥

ತೆರೆಗಳ ಪಂಙ್ತಿಪಾದ್ಯ ಕಡುವೆಳ್ಪಿನಜತ್ತುಳ ಪುಷ್ಪವೃಂದ ಮಂ।
ಜುರುತರಧೂಪ ವಾರಿ ರುಚಿಯಾರತಿ ಘುಳ್ಘುಳು ರಾವಮೊಂದುಗೀ ॥

ತ್ರ, ರಸವಿಶಿಷ್ಟ ವಾದ್ಯಮೆನಿಸಲ್ಕಿವರುದ್ರನನರ್ಚಿಸಲ್ಕೆ ತಾ ।
ನಿರೆ ಬಲವಂದು ನಿಂದಳಿನೆ ತನ್ನವನೀತದ ಬೆಂಚೆಯೊಪ್ಪಗುಂ ॥೨೧॥

ಘನನಿಧಿಗಿಂಬುಗೊಟ್ಟೊಡಮದೇಂ ಲವಣೋದಮನಾಳ್ದಿಸರ್ವ ವಾ ।
ಹಿನಿಗನುವಿತ್ತೊಡೆಂ, ರಘುಜನಳ್ಕದೆ ಸೇತುವೆ ಗಟ್ಟದಂ ಭವ ॥
ತ್ರನುಭವೆ ಲಕ್ಷ್ಮಿ ಭಂಗಮನೊಡರ್ಚಿದಳಿಂತಪವಾದ ವಿಲ್ಲದಿ ।
ರ್ಪನಗೆಣೆಯಪ್ಪೆನುತ್ತೆ ತೆರೆಗೆಯ್ಗಳನೆತ್ತುಲಿವಂತೆ ತೋರುಗುಂ ॥೨೨॥

ಉ॥ ಮಾ॥ ವೃ॥

ಒರ್ಪಿಡಿಗೊಪ್ಪುತಿರ್ಪ ಕುಚೆಯರ್ಸ್ಮೃತಿದಪ್ಪಿಸಿ ಕಾಡುತಿರ್ಪನು ।
ಣ್ಣರ್ಪಿನ ಚೆಲ್ಲಗಂಗಳೆಯರೂರ್ಜಿತ ರೂಪು ವಿಲಾಸದೇಳ್ಗೆಯಿಂ ॥
ದರ್ಪಕಯಾನೆಯರ್ಸುಮಗಂಧಿಯರಂಗಜ ಬೇಟ ಗಾರ್ತಿಯ ।
ರ್ಸರ್ಪಸು ವೇಣಿಯರ್ಬಿನದದಿಂ ಜಲಮಂ ತರುತಿರ್ಪರೋಳಿಯಿಂ ॥೨೩॥

ಇದಕಿಂದರ್ಗಳ ಮೆನಿಸುವ ।
ನದೀನದಂಗಳ್ವಿಲಾಸಿದಿಂ ಮೃದುವಿರ್ದುಂ ॥
ಪದಪಿಂ ಬರೆದಂ ನವನೀ ।
ತದ ಪಳ್ಳಮೆನುತ್ತೆ ಧಾತೃ ಲೀಲೆ ವಿಚಿತ್ರಂ ॥೨೪॥

ಮ॥ ವಿ॥ ವೃ॥

ಸುಕರಂ ತನ್ನವನೀತ ಬೆಂಚೆಯೆಡೆಯೊಳ್ವೇದಜ್ಞರಿಂ ಸೌಮ್ಯಸಾ ।
ತ್ವಿಕರಿಂ ಧರ್ಮಪರೋಪಕಾರಪರರಿಂ ಸತ್ಕೀರ್ತನಾಚಾರ್ಯರಿಂ ॥
ಪ್ರಕಟಂ ಸುಂದರ "ರಾಮದುರ್ಗ" ನೃಪರಾಜ್ಯಾಂತಸ್ಥಮಾಗೀಶ ಭಾ ।
ವುಕರಿಂ ಪ್ರೌಢರಿನೊಪ್ಪುಗುಂ "ರವಿಪುರಂ" ಶೃಂಗಾರ ಸಾರಾಕರಂ ॥೨೫॥

ಮುಗ್ಧರ್ಗುರುಪದ ಭಕ್ತಿ ।
ಸ್ನಿಗ್ಧರ್ನೀತಿಗುಣ ಶಾಲಿಗಳ್ಸವು ಚರಿತರ್ ॥
ದುಗ್ಧಯಶೋ ಯುಕ್ತರ್ಸ ।
ಮೃಗ್ಧನ ಸಂಪನ್ನರಿಂ ಮನಂಗೊಳಿಯಿಸುಗುಂ ॥೨೬॥

ಪರಭಾಷಾ ಪಂಡಿತರಿಂ ।
ವರಿಷ್ಠ ಪದಭೂಷರಿಂ ಮಹಾ ರಸಿಕಜನೋ ॥

ತ್ಕರದಿಂ ತಳ್ತಿಸೆಗುಂ ಭಾ ।
ಸುರ ರುಚಿ ಸಂಗೀತ ವಾದನ ಪಟೂತ್ತಮರಿಂ ॥೨೭॥

ಮ॥ ವಿ॥ ವೃ॥
ಸುರಲೋಕಂ ನೆಲೆಗೊಂಡವರ್ಗರಿಯೆ ಸೈಪಿರ್ಪನ್ನೆಗಂ ರಕ್ಷಿಕುಂ ।
ಮರಳೀ ಲೋಕಕೆ ತಳ್ಳುಗುಂ ಗುರುವರಂ ವಾಸಿರ್ಪ ಸುಕ್ಷೇತ್ರದೊಳ್ ॥
ಸ್ಥಿರಶಾಂತಿಸ್ಥಿತಿಯಿರ್ಕುಮೆಂದು ಭುಜಮಂ ಮೇಲೆತ್ತಿ ಪೇಳ್ವಂತೆ ತ ।
"ನ್ನರಗುಂದಾಚಲ" ದೊತ್ತಿನೊಳ್ಮೆರೆವುಗುಂ ತದ್ಗ್ರಾಮ ಮುಲ್ಲಾಸದಿಂ ॥೨೮॥

ತ॥ ಳ॥ ವೃ॥
ಅಮರರೆಂಬ ಪೆಸರ್ಪಮಂಜಸಮುಲ್ತು ಮಿಳ್ತುವಿನಪ್ಪಿದ ।
ರ್ಗಮನಿಸಲ್ಕಮರರ್ಕಳೀಂ ಗುರುಮೂರ್ತಿವಾಸಕಡರ್ಪದಾ ॥
ಗಿ ಮರಣಂಜಯಿಸಿರ್ಪುವೆಂ ನನಗೆಂತು ಪಾಸಟಿ ನೀವ್ಗಳೆಂ ।
ದು ಮುರುಕಂಮಿಗೆ ಹಾಸ್ಯದಿಂ ನಗುವಂತೆ ಪೊಲ್ಪೊಳಲೊಪ್ಪುಗುಂ ॥೨೯॥

ಸ್ರ॥ ಗ್ಧ॥ ವೃ॥
ಅಲ್ಲಿರ್ಪಂ ವೀರಮಾಹೇಶನನಘಚರಿತಂ ಪ್ರಾಣಲಿಂಗಾನು ಸಂಧಾ ।
ನೋಲ್ಲಾಸಂ ತ್ರಾತಶಿಷ್ಯಂ ಪಡವಿಡಿ ನಿಜ ಸೂತ್ರಂ ಸದಾಚಾರ ಶೀಲಂ ॥
ಚಿಲ್ಲಾಸಂ ಶ್ರೀಬೃಹಚ್ಛಾತ್ರ ಪತಿ ಗುರು ಕರಾಂಭೋರುಹೋದ್ಭೂತನುದ್ಯ ।
ತ್ಕಲ್ಲೋಲಾಪಾಂಗನೇತ್ರಂ ಗುರುಸಮಯ ಸುಕಾರ್ಯಂ ಸುಧುರ್ಯಂ
ಕರಿವೃಷಾರ್ಯಂ ॥೩೦॥

॥ ಚಂ॥ ಮಾ॥ ವೃ ॥
ಪರಸತಿಯಲ್ಲಿ ಕಣ್ಣಿಲಿಮೊಗಂ ಪರರರ್ಥದೆಪಂಗು ಶಾಂಭವೇ ।
ತರ ನುತಿಯಲ್ಲಿಯಸ್ತರಸನಂ ಪರಶಾಸ್ತ್ರದೆ ಕರ್ಣ ಹೀನನಾ ॥
ಗಿರೆ ಕಡುಪೇರ್ಮೆವೆತ್ತು ಜಸದಿಂ ಜನಪೂಜ್ಯತೆಯಿಂ ಧರಿತ್ರಿಯೊ ।
ಳ್ಮೆರೆದನದೇಂ ಸುಪುಣ್ಯವ ನುಪಾರ್ಜಿಸಿದಾತನೊ ಪೂರ್ವಜನ್ಮದೊಳ್ ॥೩೧॥

ಮ॥ ಸ್ರ॥ ವೃ॥
ವಿಮಲೋದ್ಯದ್ವಂಶ ಸಂಭೂತೆ ಶುಚಿ ಹೃದಯೆ ಸೌಗುಣ್ಯ ವಿಭ್ರಾಜಿ ತಜ್ಞಂ ।
ಗಮ ಪೂಜಾತಿಥ್ಯೆ ವಿಖ್ಯಾತೆ ಸರಳೆ ಗೃಹಕಾರ್ಯ ಕ್ಷಮಾಶೀಲೆ ಸ್ತ್ರೀಧ ॥
ರ್ಮ ಮಹಾಸಾಧ್ವೀ ಶಿರೋರತ್ನೆ ಪತಿಚರಣ ಸೇವಾಮೃತಾಸ್ವಾದೆ ನಿತ್ಯಂ ।
ಶಮನಾರಾಧ್ಯಾರ್ಚನಾ ಸಂಭ್ರಮೆ ಸತಿಯೆಸೆದಳ್ಜಾಣೆ ರುದ್ರಾಣಿಯೆಂಬಳ್ ॥೩೨॥

|| ಚಂ|| ಮಾ|| ವೃ ||

ಪತಿಪರದೈವಮೆಂದು ಪತಿಸೇವೆ ಸದಾಶಿವ ಸೇವೆಯೆಂದು ಶೋ |
ಭಿತಪತಿ ನಾಮವೇ ಶಿವಮನೂಪಮವೆಂದು ಸತೀಶಿರೋಮಣೀ ||
ಪತಿಪದರೇಣು ಮಂಗಲ ಲಲಾಟ ವಿಭೂಷಣಮೆಂದು ಭಕ್ತಿಯಿಂ |
ಪತಿಕರಿಸಾವಗಂ ಚರಿಸುತಿರ್ದಳತೀವ ಧವಾನುಸೇವೆಯೊಳ್ ||೩೩||

ಶರನಿಧಿಯಂತೆ ಪೊಲ್ಬುವನ ವಿಶ್ರುತೆ ಸತ್ಕೃತಿಯಂತೆ ಲಕ್ಷಣ |
ಪ್ರರುಚಿ ಸರೋಜದಂತೆ ಗುಣರಂಜಿತೆ ಪೂರ್ಣಸುಧಾಮಯೂಖನಂ ||
ತಿರೆ ಗತ ದೋಷ ರಾಜಿತೆ ಮಹೇಶ್ವರನಂತಿರೆ ಪೂರ್ಣ ಸತ್ವಕಾ |
ಕರೆ ಸತಿರುದ್ರಮಾಂಬೆ ಸತಿಲಕ್ಷಣ ಶೀಲಗಳಿಂದಮೊಪ್ಪಿದಳ್ ||೩೪||

ಪಾವನ ಶಿವಪ್ರಸಾದಂ |
ಭಾವಭವಾರಾತಿ ಭಕ್ತಿಯೊರ್ಬುಳಿಗೊಂಡೀ ||
ಭೂವಲಯಕಿಳಿದರೆನೆ ಸಂ |
ಭಾವಿತಪುಣ್ಯ ಸತಿಪತಿಗಳಾರಾಜಿಸಿದರ್ ||೩೫||

|| ಚಂ || ಮಾ || ವೃ ||

ಜಗಮಿದಸತ್ಯ ಮಲ್ತಿಳೆಯ ಭೋಗ ತಿರಸ್ಕೃತಮಲ್ತು ತಜ್ಜಗಂ |
ಸೊಗಸಿನ ಮುಕ್ತಿಯಂ ಪಡೆಯೆ ಕಾಣ್ಬೆದವೋಘಮವಶ್ಯ ಸಾಧನಂ ||
ಬಗೆಯೆ ಶರೀರಮೇ ಶಿವ ನಿಕೇತನಮುರ್ವಿಯ ಭೋಗ ಭಾಗ್ಯಮುಂ |
ಮೃಗಕರಗೀಯೆ ಪುಟ್ಟುಗುಮದರ್ಕೆ ಪ್ರಸಾದತೆ ತತ್ಪ್ರಸಾದಮುಂ ||೩೬||

|| ಉ|| ಮಾ|| ವೃ ||

ಭೋಗಿಪುದೇ ಮಹಾಸುಖ ಮದತ್ತಣಿನಂಗಜ ಮಾನ ಮರ್ದನಂ |
ರಾಗದೊಳಸ್ಮದಾದಿಗಳಿಗೀ ಜಗಮಂ ರಚಿಸಿರ್ಪನೀ ಜಗ ||
ದ್ಭೋಗವನೆಯ್ದೆ ಮೋಹದುಪ ಭೋಗಿಸುತಿರ್ಪುದು ಹೇಯಮಲ್ತೆ ತ |
ದ್ಭೋಗಮೆ ಹೇಯಮಲ್ತು ಶಿವಧರ್ಮಪಥಾನುಗ ವರ್ಗಕೆಂದಿವರ್ ||೩೭||

ಜಲಗತ ಶತಪತ್ರದ ಪೊ |
ಲ್ಲೆಲದೊಳ್ಸಂಸಾರಸಾಗರದೊಳಿರ್ದೊಡಮುಂ ||
ಮಲಹರ ಚರಿತರ್ಸಕಲವ |
ನಲಸದೆ ಶಿವಗಿತ್ತಲಿಪ್ತತೆಯಿನೊಪ್ಪಿರ್ದರ್ ||೩೮||

ಅಳಿಯಾಶೆಯನಳಿಯೆಂಬ ।
ರ್ಕಳಿಯೆಂಬರ್ದುರ್ಗುಣಂಗಳಂ ಕವಿಯೆಂಬರ್ ॥
ಜಲಪಕ್ಷಿಗರಿಯೆ ತಂತುವಿ ।
ಗೆಳೆಯೆಂಬುವರಲ್ಲದಿಲ್ಲ ಬಿರುನುಡಿಯವರೊಳ್ ॥೩೯॥

॥ ಮ॥ ಸ್ರ॥ ವೃ ॥

ಇವರ್ಗುದ್ಯತ್ಕೋಟಿ ಪುಣ್ಯಾರ್ಜಿತ ಬಲದಿನಪಾಸ್ತಾಂಗಜೋದ್ಭಕ್ತಿ ಸುಜ್ಞಾ ।
ನ ವಿರಾಗಂಸಾರ್ದುಪುತ್ರಾಕೃತಿಯೊಳಿರದೆ ಸ್ವಾಯತ್ತಮಾದಂತೆ ತತ್ಪು ॥
ತ್ರ ವರೇಣ್ಯರ್ಪುಟ್ಟಿದರ್ಪೆಂಪ್ಪೊಡವರೆ "ಗುರುಪಾದರ್ಯ" ನಾ "ಶಂಕರಾರ್ಯಂ" ।
ಶಿವಮುಗ್ಧಾಚಾರಶೀಲಂ "ಕರಿವೃಷಭ" ರಿವರ್ವ್ವಂಶ ರೋದೋಂತಚಂದ್ರರ್ ॥೪೦॥

ಮ॥ ವಿ॥ ವೃ॥

ಸುಕುಲೋದ್ದೀಪಕ ಪುತ್ರರಿಂ ಶಿವಸಪರ್ಯಾನಂದದಿಂ ಪ್ರೇಮಪೂ ।
ರ್ವಕ ಭಕ್ತರ್ಕಳ ಕ್ಷೇಮಚಿಂತನೆಗಳಿಂ ತಳ್ತಿಂತು ಸಂಸಾರ ನಾ ॥
ಟಕಮಂ ಸಾಗಿಸಲೊರ್ಮೆಯೊಂದಿರುಳಿನೊಳ್ಸರ್ವೇಶ್ವರಂ ಶಂಕರಂ ।
ಸುಕರಂದರ್ಶನವಿತ್ತು ಸ್ವಪ್ನಮುಖದಿಂರುದ್ರಾಣಿಗಂ ಪೇಳ್ದಿದಂ ॥೪೧॥

ಚಂ॥ ಮಾ॥ ವೃ॥

ಎಲಗೆ ತನೂಜೆಯನ್ವಯಸಮಭ್ಯುದಯರ್ಕೆತನೂಭವರ್ಕಳಂ ।
ಸಲುವರನಿತ್ತೆ ಮತ್ತೆ ಭವಿಷತ್ತಿನಗರ್ಭದೊಳಾನೆ ಬಂದಪೆಂ ॥
ಸಲೆನಿಜಭಕ್ತರುದ್ಧರಣಕತ್ತಣಿನಾತ್ಮ ವಿತರ್ದಿಗಾತನಂ ।
ಸಲಿಸಲೆ ವೇಳ್ಕುಮೆಂದೊರೆದುಮೈಗರೆದಂಸೆಳೆಮಿಂಚಿನಂತೆವೊಲ್ ॥೪೨॥

॥ ಮ ॥ ವಿ॥ ವೃ ॥

ಪುಳಕಂತಾನಗೆವೊಯ್ದುವೊಲ್ನಿಮಿರೆ ಸಂತೋಷಾಶ್ರುಸಾಲಿಟ್ಟುದ ।
ಳ್ದಳ ಜಾರುತ್ತಿರೆಕೋಡಿಯಂ ತೆಗೆದವೊಲ್ಜುಂಝೂನಿಲಾಘಾತದಿಂ॥
ಬಳಕುತ್ತಿರ್ಪೆಳವಳ್ಳಿಯಂತೆ ತನುಕಂಪಂದಾಳ್ದಿರಲ್ಕೇಳ್ದು ಕಂ ।
ಗೊಳಿಪುದ್ಯದ್ಗುರು ಲೀಲೆಯಂ ನೆನೆದು ಪೇಳ್ದಳ್ಸಾಂಗದಿಂದಾಣ್ಮಗಂ ॥೪೩॥

॥ ಪೃಥ್ವೀವೃತ್ತಂ ॥

ಮುದಾದ್ಭುತವನೊರ್ಮೆಗಂತಳೆದವಂ ಹೃದಂಭೋಜದೊ ।
ಳ್ಸದಾಗುರುವರಂಸಮುದ್ಧರಿಸಲೆಮ್ಮಮೇಲಿರ್ಪ ತ ॥

ನ್ನುದಾರಗುಣದಿಂಪ್ರಸನ್ನತೆಯನಾಂತುಮೈದೋರಿದಂ ।
ತದೀಯಸುತನಂಶಿವಾರ್ಪಣಸುಬುದ್ಧಿಯಿಂನೀಡೆನಲ್ ॥೪೪॥

ಶಿವನಾದೇಶಮಿದೆಂದೊ ।
ಪ್ಪಿ ವಧೂಮಣಿರುದ್ರಮಾಂಬೆ ನನೆಕೊನೆವೋಗು ॥
ತ್ರವಿಕಲಮನದಿಂದಾತ್ಮೋ ।
ದ್ಭವನಂಗುರುಸಿಂಹಪೀಠಕರ್ಪಿಸಿಮಣಿದರ್ಳ್ ॥೪೫॥

॥ ಮ ॥ ಸ್ರ ॥ ವೃ॥
ಇದುಚಿತ್ರಂಪುತ್ರಸಂಪ್ರೀತಿ ನರಖಗಮೃಗ ವ್ರಾತಕೇಕೈಕಮಿರ್ಕುಂ ।
ಮುದದಿಂತತ್ಪುತ್ರನಂಸಂದಿರಪೆ ಗುರುಮಹಾಪೀಠಕಂಸದ್ವಿಭೂಷಾ ॥
ಸ್ಪದನಂ ಮೇಣೀರ್ವರುದ್ಧಾರದೊಡನಿಳೆಯು ಕಲ್ಯಾಣಮಕ್ಕೆಂದು ಸಂತೋ।
ಷದೊಳಿತ್ತನ್ಯೋಪಕಾರರ್ಕಳಿವರೆನುತೆ ಕೇಳ್ದರ್ಕೃತಾರ್ಥಾತ್ಮರೆಂದರ್ ॥೪೬॥

ಶ॥ ವಿ॥ ವೃ॥
ಕೈಲಾಸಾದ್ರಿಯೊಳಿತ್ತ ಚಿತ್ತಜಹರಂವಿಶ್ವಂಭರೋದ್ಧಾರಕಂ ।
ಕಾಲಂಮಿಕ್ಕದೆಸತ್ವರಂತೆರಳ್ದುನೀಂಬಾರೆಂದು ಕಟ್ಟಾಜ್ಞೆಯಂ ॥
ಮೂಲೋಚ್ಚಿತ್ರ್ಕಲೆಗೀಯಲಾಕ್ಷಣಮೆ ತದ್ರುದ್ರಾಣಿ ಗರ್ಭಾಬ್ಧಿಯೊ ।
ಳ್ಬಾಲಾಕಾರಮನಾಂತುಮೂಡಿತದನಾವಂಬಣ್ಣಿಸಲ್ಬಲ್ಲವಂ ॥೪೭॥

ಸಿಧಿಯಂವಾರಿಧಿತೇಜೋ ।
ನಿಧಿಯಂದಿನಪಂಮನೋಜ್ಞಕಲೆಗಳ್ಸಕಲಾ ॥
ನಿಧಿಯಂ ತಾಳ್ದಿದವೊಲ್ಗುಣ ।
ನಿಧಿಯೀ ರುದ್ರಾಣಿಗರ್ಭಮಂತಳೆದೆಸೆದಳ್ ॥೪೮॥

ಮ॥ ಸ್ರ॥ ವೃ॥
ಶಿವಯೋಗೀಶಾಧಿಪಂಸಂಜನಿಸಿದಪನವಂಮುಂದೆಶಿಷ್ಯಾಳಿ ಸಂತಾ ।
ಪವನೊಲ್ಪುತ್ತಾರಣಂ ಮಾಡಲಸಮಗುರುಪಟ್ಟಾಧಿಕಾರತ್ವಮಂ ಪೊ ॥
ರ್ದುವನಾತಂಗೊಂದು ಪ್ರಾಶಸ್ತ್ಯದ ನೆಲೆಯಿರವೇಳ್ಕೆಂದಜಂ ಗೆಯ್ದನೋ ಎಂ।
ಬುವವೊಲ್ರುದ್ರಾಣಿ ಗರ್ಭಾಕೃತಿ ಗ-ಹೆಯೆನಲೊಪ್ಪಿತ್ತು ಸದ್ವೃತ್ತದಿಂದಂ॥೪೯॥

ಚಿಣ್ಣನ ಚೆಲ್ವಿಕೆಗಸ್ಮರ ।
ಕಣ್ಣೆಂಜಲ್ಗೊಳ್ಳೆಂಕುಗೆಂದು ಸುದತೀ ಮಣಿಯೊ ॥

ಳ್ಗಣ್ಣಿನ ಕರಿಯಾಲಿಗಳುಲಿ ।
ಸುಣ್ಣನೆ ದೃಷ್ಟಿಮಣಿಯಂತಿರೇನೊಪ್ಪಿದುವೋ ॥೫೦॥

ಬಸಿರೊಳಗೆಸೆಯುವ ಹಸುಳಂ ।
ರಸೆಯಂಹಸನಂಮಿಗೆಮಿಸುಗಿಪನೆಂದುಸಿರ್ವೊಲ್ ॥
ಬಿಸಜಾಕ್ಷಿಶರೀರದ್ಯುತಿ ।
ಪಸರಿಸಿಬೆಳ್ಪನೆಬೆಳಗಿತುಪೀಯೂಷದವೊಲ್ ॥೫೧॥

ಮುಮ್ಮಲಗಳ ಮೂಲವನಿಂ ।
ತೊಮ್ಮಗೆ ತೂಳ್ದಪ್ಪೆನೆಂಬುದಂ ಸೂಚಿಪವೊಲ್ ॥
ಪಮ್ಮಳಿದೀಕೆಯ ಪೊಡೆಯಂ ।
ನೆಮ್ಮಿದ ರೇಖಾಳಿಯಿಂಗಿಯಡಗಿದುವಾಗಳ್ ॥೫೨॥

ಚಂ॥ ಮಾ॥ ವೃ॥

ಅಸಿನಡುಬಿಣ್ಪನಾಳೆಜಘನಂಘನಮಾಗಲುರೋಜ ಮುರ್ಬಿ ತೆ ।
ಳ್ವಸಿರದುಪೆರ್ಚೆಭೂಷಣಗಳಾಶೆ ವಿನಾಶಮದಾಗೆ ಕಾಂತಿಸಂ ॥
ಘಿಸೆ ನುಡಿಮೆಲ್ಲಿತಾಗೆನವಿರೊಗ್ಗುರೆನುಣ್ಪೆಸೆಯಲ್ಪ್ರಸಾದಕಾಂ ।
ಪ್ತೆ ಸರಿದುಪಿಂಗಿಪೋಗಿರೆಕರಂಗಿರೆಚೂಚಕವೊಪ್ಪಿತೋರಿದಳ್ ॥೫೩॥

ಮೃಡಶಿವಯೋಗೀಶ್ವರ ನಿ ।
ರ್ದಡೆಯೊಳ್ಪಡ ದೇಹ ಧರ್ಮಗಳ್ಮತ್ತುವುವೇ ॥
ಜಡಜಾಪ್ತನ ಪೊರೆಯೊಳ್ಸಂ ।
ಗಡಿಸಿದಗಾಢಾಂಧಕಾರಮೇನಿರ್ದಪುದೇ ॥೫೪॥

ಉ॥ ಮಾ॥ ವೃ॥

ಇಂತಿರೆ ಸಂಪ್ರದಾಯಗುರುವಿಂಪಿತನೊಲ್ದು ತದಷ್ಟಮಾಸದೊ ।
ಳ್ಕಾಂತ ಸುಪಂಚಸೂತ್ರಪರಿವೇಷ್ಟಿತಲಿಂಗವ ನಾಗಮೋಕ್ತದಿಂ ॥
ದಂತರಪಿಂಡಕಂಸವಿಧಿಯಿಂದೆಸಗಲ್ಕನುವಿಂ ನಿಜಾಂಗದೊ ।
ಳ್ಕಾಂತೆಯದಂನಿರಂತರಮಗಲ್ದಿರದಂತೆಸಮಂತು ತಾಳ್ದಿದಳ್ ॥೫೫॥

ನಿಜಪತಿಯಾತಿಥ್ಯವನಂ ।
ಬುಜಮುಖಿ ರುದ್ರಾಣಿತೀರ್ಚಿಹೃದಯಾಂಬುಜದೊಳ್ ॥

ರಜನೀಪತಿಧರ ಶಿವನಂ ।
ಭಜಿಸುತೆಮಂಡಿಸಿದದಿವ್ಯಸಮನಂತರದೊಳ್ ॥೫೭॥

ಚಂ॥ ಮಾ॥ ವೃ॥

ತದಮಿತ ಬಂಧುಬಾಂಧವ ಜನಾವಳಿಮೆಚ್ಚೆ ಸಮಸ್ತಭಕ್ತಬೃಂ ।
ದದಹೃದಯಾಂಬುಜಂಬಿಡದೆಬಿಚ್ಚೆ ಮಹಾಗುರುವರ್ಗದಿಚ್ಛೆ ತಾ ॥
ನೊದಗಿಮುದಾಬ್ಧಿ ಪೆರ್ಚೆಹರುಷಾಶ್ರುಗಳುಣ್ಮೆದಲುರ್ಚೆ ಸರ್ವರೊ ।
ಳ್ಪದಿದುಪ್ರಭಾತಶಾಂತಿಸುಖಕಾರಕಮಂಗಲಸನ್ಮುಹೂರ್ತದೊಳ್ ॥೫೭॥

ಮ॥ ವಿ॥ ವೃ॥

ಒಗೆಯಲ್ತ್ಯಾಗದೆ ಪುಣ್ಯಮಂತೊಗೆವವೋಲ್ಯೋಗತ್ವದಿಂ ಸಿದ್ಧಿ ಮೇ ।
ಗೊಗೆವೊಲ್ಸತ್ಕ್ರಿಯೆಯಿಂಸುಭಕ್ತಿವಿಭವಂಸುಜ್ಞಾನದಿಂ ಶೀಘ್ರದಿಂ
ದೊಗೆವೊಲ್ನೀರವಿರಕ್ತಿಭಾಗ್ಯಮನುವಿಂರುದ್ರಾಣಿಗರ್ಭಾಬ್ಧಿಯಿಂ ।
ದೊಗೆದಂ ದೇಶಿಕವಂಶಭೂಷಣಸುತಂ ಭಕ್ತಾಬ್ಧಿಚಂದ್ರೋಪಮಂ ॥೫೮॥

ಬಿಡದಧರ್ಮೋದಯದೋರ್ವಬಾಲೆವಿಧಿಯಿಂರುದ್ರಾಣಿ ತತ್ಕಂಠದಿಂ ।
ಬಿಡಿಸುತ್ತುಂಶಿವಲಿಂಗಮಂತೊಡರ್ಚಿದಳ್ತತ್ಸೂತ್ರವಿಚ್ಛೇದನಂ ॥
ಗುಡದುಂತೊಲ್ದದರಿಂಮಹೇಶಕಳೆಪ್ರಾದುರ್ಭಾವಮಂಕೊಂಡು ಸೊಂ ।
ಪಡರ್ದೇರಿತ್ತುವಿಕಾಸದಿಂದೆ ಶಿಶುಮಾಣಿಕ್ಯಾಸ್ಯನೀರೇಜದೊಳ್ ॥೫೯॥

ಈರಾರ್ವಾಸರದೊಳ್ನಲ
ವೇರಿರೆ ಕುಲಬಂಧುಬಾಂಧವರ್ಪರಿಜನಗಳ್ ॥
ಸಾರಾಪ್ತಮಿತ್ರರೆಯ್ದಿದ ।
ರೋರಂತೊಡವೆರೆದುನಾಮಕರಣೋತ್ಸವಕಂ ॥೬೦॥

ಗಣಪಪ್ರಸಾದದಿಂ ತಣಿ ।
ದಣುಗಗೆ ಶಿವರುದ್ರನೆಂದವರ್ಕರೆಯಲ್ಸಂ ॥
ದಣಿಸಿದಬಲೆಯರ್ಶಿಶುವಂ ।
ಮಣಿದೊಟ್ಟಿಲೊಳಿಟ್ಟುಕರ್ಣಕಮೃತಂ ಗರೆಯಲ್ ॥೬೧॥

ಕಂದನೆ ಜೋ ತನಿರಸದು
ಕ್ಕಂದನೆ ಜೋಜೋ ಪರೇಶ ಲೀಲಾಶುಕಮಾ ॥

ಕಂದನೆ ಜೋ ಮೋಹಾಂಬುಜ |
ಕಂದನೆ ಜೋಜೋಎನುತ್ತೆ ತೂಗಿದರೊಲವಿಂ ||೬೨||

ಪುಟ್ಟಿದಯೋನಿಗಳಿಲ್ಲಂ |
ಮೆಟ್ಟದ ಭೂಭಾಗಮಿಲ್ಲವೊತ್ತರಿಸುತ್ತುಂ ||
ದಟ್ಟಸಿಕಾಡಪ ತಾಪಕೆ |
ಕಟ್ಟಲ್ಲಂಗತಿಭವತ್ಸದಂ ಶಿವರುದ್ರ ||೬೩||

ಶ್ರೀಗುರುಪದಪದ್ಮಪರಾಗ ಭಸಿತ ಫಾಲಪಟ್ಟ
ಚೆನ್ನಕವಿವಿರಚಿತಂ. ಶಿವರುದ್ರವಿ
ಜಯ (ಲೀಲಾ) ಪ್ರಬಂಧದೊಳ್ ದ್ವಿತೀ
ಯಾಶ್ವಾಸಂ ಸಮಾಪ್ತಂ.

---

|| ಶ್ರೀದಾರುಕಾಚಾರ್ಯಃಪ್ರಸೀದತು ||

## ತೃತೀಯಾಶ್ವಾಸಂ.



ನೂತನ ಶೈಶವ ಕಾಲಂ |
ವ್ಯತೀತಮಾಗಲ್ಪರೇಶನಾದೇಶಮೆನು ||
ತ್ತೋತವಲಂಬಿಸಿದಂ ಸಂ |
ದೀತಂ ಲೋಕೋಪಯುಕ್ತ ಕೃಷಿಕಾಯಕಮಂ||೧||

ಹೀರಪಟೀರ ಸುಶಾರದ |
ತಾರಾಹಾರಘನಸಾರಸುರವಾರಣ ಮಂ ||
ದಾರಪವಮಾನಭುಗ್ವರ |
ಗೌರಯಶಂಸಲವುಗಾವಗಂವೃಷಪತ್ರಂ ||೨||

ಚಂ|| ಮಾ|| ವೃ ||

ಇನಿಮೊಲೆವಾಲನೂಡಿ ತಿಳಿನೆಯ್ಯಮನಣ್ಪೆ ಸುಘರ್ಮವಾರಿಯಿಂ |
ಮಿನಿಸಿ ವಿಭೂತಿಯಂತೊಡೆದುತೊಟ್ಟಲದಲ್ಲಿಮಲಂಗಿಸುತ್ತೆ ಕ ||

ಣ್ಣಿನ ನಸುಯೆಂಜಲಂ ತೆಗೆದುಕಂಪಿನಧೂಪವನಿತ್ತು ಜೋಗುಳಂ ।
ದನಿದೆಗೆದೊಲ್ದುಪಾಡುವದೆನಿತ್ತೊಗಳ್ವೆಂಸತಿರುದ್ರಮಾಂಬೆಯಾ ॥೪॥

ಮ॥ ವಿ॥ ವೃ॥

ಸುಕುಮಾರಾಂಗದ ರಾಮಣೀಯಕ ಲಸತ್ಸೌಂದರ್ಯಮಂಕಂಡು ಪ್ರೋ ।
ತ್ಸುಕದಿಂ ಹಿಗ್ಗುವಳೊರ್ಮೆದಾಯೆನಿಪುದುಂ ಕೇಳ್ದುಬರ್ದಿ ಮುದ್ದಿಟ್ಟು ಕಾ ॥
ತುಕದಿಂ ಜಕ್ಕುಲಿಪಳ್ಗಡೊರ್ಮೆತೊಡವಂತಂದಿಟ್ಟದೊಂದೆನ್ನ ಮಾ ।
ಣಿಕವೆಂದಾಡಿಸುತಿರ್ಪಳೊರ್ಮೆಸುತಮೋಹಂಪ್ರಾಣಿಗಳ್ಗೆಂತುಟೋ ॥೫॥

## 卐 ಹಲಬಂಧಂ. 卐

ಶಾಂತಂ ಕೈವಲ್ಯಪದಮೂರ್ತಿಮೂರ್ಧನ್ಯಂಸದಾಶ್ರಿತಂ ।
ತಂತ್ರಮೂಲಂ ಹಲೋದ್ಯೋಗಮನಾಂತಂ ಕರುಣಾಕರಂ ॥

ಸೂಚನೆ:— ಈ ಹಲಬಂಧವನ್ನು ಮೇಲಿನ ಶ್ಲೋಕದಂತೆ ಹೊಂದಿಸಿಕೊಳ್ಳತಕ್ಕದ್ದು ಮತ್ತು ಶ್ರೀ ಎಂಬುದು ತಪ್ಪಾಗಿಬಿದ್ದಿದೆ, ಅದನ್ನು ಶ್ರಿ ಎಂದು ಹೊಂದಿಸಿಕೊಳ್ಳಬೇಕು

ಮಾಯಾದುರ್ಮದಮಂ ನಿ ।
ರ್ಮಾಯಿಕ ಗುರುಸತ್ಕಟಾಕ್ಷದಿಂದೊಗೆದಾಂ ತ ॥
ನ್ಮಾಯೆಯನಿಂತೊದೆದಪೆನೆಂ ।
ದಾಯತ ನಳಿನಾಂಘ್ರಿಬಿರ್ಚಿತೊಟ್ಟಿಲೊಳಾಡ್ವಂ ॥೭॥

ದೇಶಿಕಶಿಖಾಮಣಿ ಪದ ಕು ।
ಶೇಶಯಮಂಪಿಡಿವೆನೆಂದು ಸೂಚಿಪವೋಲಾ ॥
ವೇಶದಿನಾತ್ಮೋದ್ಭೂತಂ ।
ಪೇಶಲಮುಷ್ಟಿಯನೊಡರ್ಚುವಂ ತೊಟ್ಟಿಲದೊಳ್ ॥೭॥

ಕೈವಲ್ಯಾಂಗನೆಯಂ ನಾ ।
ನೀವಿಧಮಪ್ಪಿದಪೆನೆಂದು ನಿಜಕರಯುಗಮಂ ॥
ಧಾವಿಸಿ ಮೇಗಣ್ಗೊಯ್ವಂ ।
ಸೈವರೆಗಿಂ ತಾಯೊಡಲ್ಗಡಲ್ಪೆರ್ಚುವಿನಂ ॥೮॥

ಕನಕಂ.ಕಾಂತಾ.ಕಾಶ್ಯಪಿ. ।
ಗನವರತಂ ಯತ್ನಮಂವಿರಚಿಪರ ವಿಕೃತಾ ॥
ನನಮನಭೀಕ್ಷಿಸಿ ಹಸುಳಂ ।
ಮನದೊಳ್ತಿಳಿದು ನಗುವಂತೆವೊಲ್ನಗುತಿರ್ಪಂ ॥೯॥

ನಿಜಭಕ್ತೌಘದ ಹೃದಯಾಂ ।
ಬುಜದೊಳ್ಚಂದ್ರಾರ್ಧಚೂಡನಂಕಾಣಿಪುದಂ ॥
ವೃಜಿನಾರಿ ಮುಂದೆ ತೋರ್ಪಂ ।
ತೆ. ಜನನಿಯ ತೊಡೆವಣೆಯಲ್ಲಿ ಕುಳ್ಳಿರೆಕಲ್ತಂ ॥೧೦॥

ಪೊಡವಿಯೊಳಿಡಿಗಿದ ಕ್ರಿಮಿಗ ।
ಳ್ಕಡುನೊಂದಪವೆಂದು ಸೌಮ್ಯಸೌಜನ್ಯತೆಯಿಂ ॥
ನಡೆದಪನೆಂಬಂತೆಳೆಯಂ ।
ತಡವರಿಸುತೆ ಮೆಲ್ಲನಂಬೆಗಾಲ್ಗಳನಿಡುವಂ ॥೧೧॥

ಕಂಟಕ ಸಂಕಟ ಮೇನೊಂ ।
ದಂಟದೆ ಬೆಳೆಯಲ್ಕಮರ್ಚಿಮುದ್ದಿಸಿ ಪಡೆದಳ್ ॥

ಬಂಟಂ ತಾನೆನ್ನಯ ಭಗೆ ।
ಡೋಂಟದ ಸತ್ಫಲಮೆನುತ್ತೆ ಪಾಲೂಡಿಸುವಳ್ ॥೧೨॥

ಮುನಿಮೂರ್ಧನ್ಯರ ಶಿವಚಿಂ ।
ತನಮುಂ. ಶಿವಯೋಗಿಶಾಂಭವಕಲಾಭ್ಯುದಯಂ ॥
ಮನುಜಾಪಿಗಳಂತರ್ಗತ ।
ಘನತೇಜಂ ಬೆಳೆವಮೊಳ್ಕೆ ಬೆಳೆದಂಘೊಳೆಧಂ ॥೧೩॥

ಚಂ॥ ಮಾ॥ ವೃ॥

ಶಿಶುತನ ಸಾಗೆ. ಸುಂದರಕುಮಾರಕನಾಗೆ ವೃಷಾರ್ಯನೊಲ್ದಿವಂ ।
ಗೆ. ಶುಭಮಹೇಶದೀಕ್ಷೆಯನೊಡರ್ಚಲುದಾತ್ತ ಶಿವಾನುಭಾವರಂ ॥
ಪಶುಪಮತಜ್ಞರಂ ನೆರೆವಿಚಾರಿಸಿ ಮಂಗಲಸನ್ಮುಹೂರ್ತಮಂ ।
ವಿಶದಮೆನಲ್ಪ್ರಸಿದ್ಧಿಸಿ ನಿಜಾನ್ವಯದೇಶಿಕಪಾದಮೂಲದೊಳ್ ॥೧೪॥

ಎಲೆಗುರುದೇವಚಿತ್ತಯಿಸು ಮತ್ತನುಜಾತಗೆದೀಕ್ಷೆಯಂಸುಮಂ ।
ಗಲಮೆನೆ ತೆತ್ತು ಶಿಷ್ಯನ ದಯಾಂಬಕದಿಂನೆರೆನೋಡಿಪಾಲಿಸೆಂ ॥
ದಲರಿದ ಭಕ್ತಿಯಿಂದೆರಗೆ ತದ್ಗುರುಕೂರ್ತುಪ್ರಸಾದವಾಣಿಯಿಂ ।
ದಲಸದನುಜ್ಞೆಯಿತ್ತು ವಿಧಿಯಿಂಶಿವದೀಕ್ಷೆಯನೆಯ್ದೊಡರ್ಚಿದಂ ॥೧೫॥

॥ ಮ॥ ಸ್ರ॥ ವೃ ॥

ಶಿವತೇಜಃಪುಂಜದೊಳ್ಗಟ್ಟಯಿದೆನೆ ಜನನದಿಂ ತೇಜಿಪೀಮೂರ್ತಿಯಂ ಶಾಂ ।
ಭವ. ದೀಕ್ಷೋಪೇತನಂಗೆಯ್ದು ನಿಜಗುರುವರಂ ತನ್ಮಹಾಜ್ಯೋತಿಯಂ ಬಾ ॥
ಹ್ಯವನಂತರ್ಭಾಗಮಂ ಭಾಸಿಸಿದಕತದೆ ನಿರ್ಲಿಪ್ತ ನಿಸ್ತಂದ್ರಚಿಜ್ಜ್ಯೋ ।
ತಿವೊಲೀತಂ ಸರ್ವಸದ್ಭಕ್ತಗಡಣದ ಹೃದಯಾಕರ್ಷಣಂ ಮಾಡುತಿರ್ದಂ ॥೧೬॥

ಇಂತಿರಲೀತಂಗೋದಂ ।
ಸ್ವಾಂತಂ ಮಿಗೆಕಲಿಸವೇಳ್ಕುಮೆಂಬರಗಿವನೇ ॥
ಕಾಂತದೆ ನಯವೇಲ್ದಿದನೋ ।
ರಂತೆ ಜಗಜ್ಜೀವನಕೃಪಿ ಕಲೆಯಂನೆಲೆಯಂ ॥೧೭॥

ಬಸಿರಾಶೆಗೆ ಲೋಗಕ ವಂ ।
ಚಿಸಿ ಸಂಗ್ರಹಿಸುತೆ ಪಾಪಮಂ ಧನಮುಂ ಮೋ ॥

ಳಿಸಿ ಲೋಕೋಪಕೃತಿಯನೆಸ ।
ಗಿಸದೆಂತಿರ್ದೊಡಮದನಿವನೊಲ್ಲಂ ಹೊಲ್ಲಂ ॥೧೮॥

.ಚಂ॥ ಮಾ॥ ವೃ॥

ಗಮನಿಸಿ ನೋಡೆಸರ್ವಸಚರಾಚರಜೀವನಮನ್ನದಿರ್ಕು ತ ।
ತ್ಸಮಧಿಕಮನ್ನಮುಂ ಬಗೆಯೆಧಾನ್ಯದೆ ಸಂಜನಿಕುಂ ನಿರಂತರಂ ॥
ಸಮನಿಸಿ ತೋರ್ಪಧಾನ್ಯತತಿ ತತ್ಕೃಷಿಕರ್ಮದೊಳಿರ್ಕುಮೆಂದು ವೇ ।
ದಮತಿಗಳೊಲ್ದು ಮಿಂತು "ಕೃಷಿಮೂಲಮಿದಂನವಧಾನ್ಯ"ಮೆಂದಪರ್ ॥೧೯॥

ಪೊಲಮಳಕಾಪುರಂ ವೃಷಭಗೋತುರುವಿಂಡುಗಳೊರ್ಗು ಕಿನ್ನರ ।
ರ್ವಿಲಸಿತಭವ್ಯಚಾರುಶಕಟಂ ನಡೆಮಾಡು ಸಮಸ್ತಸಾರಸ ॥
ತ್ಫಲಗಳನಾಂತ ಭೂಜಗಳೆ ಚೈತ್ರರಥಂ ನಿಜಮೋಹನಾಂಗಿ ಪೆಂ ।
ಪಲರ್ಚುವ ಶಕ್ತಿದೇವಿ ತನುಸಂಭವರೇ ನಲಕೂಬರರ್ನಿಜಂ ॥೨೦॥

ಸರ್ವವಿಧಧಾನ್ಯಸಂತತಿ ।
ಯುರ್ವಿದ ರಾಜಾನ್ನವನಿಧಿಯಂತಿರೆ ಬಗೆಯಲ್ ॥
ಪರ್ವಿದ ವಿಶ್ವಂಭರೆಯಂ ।
ನಿರ್ವಹಿಪಾ ಕೃಷಿಕುಬೇರರನೇನರ್ಗಳನೋ ॥೨೧॥

ಉ॥ ಮಾ॥ ವೃ॥

ಯಾಚಕವೃತ್ತಿಯೊಳ್ಜಗದಪಂಗದುಮುಂಟು ಲಘುತ್ವಮುಂಟು ವಾ ।
ಲೋಚಿಸಲನ್ಯರೂಳಿಗದಧೀನತೆಯುಮುಂಟುರು ಭೀತಿಯುಂಟು ದ್ರ ॥
ಗ್ಗೋಚರಮಪ್ಪ ವುದ್ಯಮದೆ ಕೈತವಮುಂಟುಮುಸತ್ಯಮುಂಟು ತ ।
ತ್ಸೂಚನೆಯೊಂದುಮುಣ್ಮದ ಮಹಾಕೃಷಿಕರ್ಮಕೆ ಸಾಟಿಯಾವುದೋ ॥೨೨॥

॥ ಚಂ॥ ಮಾ॥ ವೃ ॥

ವಿವಿಧ ವಿನೋದವಾಣಿಯೇಜಪಂ ನಿಜಮಾರ್ಗದೆ ದೇಹಮಂಸದಾ ।
ಸವಿಸುವದೇತಪಂ ಸಕಲಜೀವರಿಗನ್ನವನೀವುದೊಂದು ವೇ ॥
ದ.ವಿಹಿತಶೀಲಮಾದರಿಸಿ ಲೋಗರವೃದ್ಧಿಯೊಡರ್ಚುತಿರ್ಪುದೇ ।
ಪ್ರವಿದಿತ ಶಂಭುಜಾನಪೆನೆ ನೇಗಿಲಯೋಗಿಯದೇಂ ಕೃತಾರ್ಥನೋ ॥೨೩॥

ವಿಷಮಿಲ್ಲದ ಸಾರಳ್ಯದ ।
ವಿಷಯಕ್ಕಾಧಾರಮಪ್ಪ ಬೆಲೆಯುಳ್ಳೆನಿತೋ ॥
ಕೃಷಿವಸ್ತುಗಳಿರ್ಪುದರಿಂ ।
ಕೃಷಿಶೀಲಗೆ ಪೇಳ್ದನಾಢ್ಯವಣಿಜರ್ತೊರ್ಣೆಯೇ ॥೨೪॥

ಚಂ॥ ಮಾ॥ ವೃ॥

ಧರಣಿ ಜಲಾನಲಂ ಪವನಮಂಬರ ಚಂದ್ರದಿನೇಶರಾತ್ಮರೆಂ ।
ದರಿಯೆ ಗಿರೀಶಗಪ್ಪತನುವಂತದಡೊಳ್ಧರೆಯೊಂದು ದೇಹಮಾ ॥
ಗಿರುತಿರೆ ಕಾರಣಾಂತರದೆ ಶೈಲಜೆಯಾಣ್ಮನ ಸೇವೆಯಕ್ಕುಮೆಂ ।
ದರಿದೆಸಗುತ್ತಲಿರ್ಪವನಪುಣ್ಯಕೆ ಪಾಸಟಿಯುಂಟೆ ಲೋಕದೊಳ್ ॥೨೫॥

ಮ॥ ಸ್ರ॥ ವೃ॥

ಒದವಿರ್ದೀದೇಹಮಂ ನಂದನವನೆಸಗುತುಂ ಭಾವಮಿಂತೆಂಬ ಕುದ್ದಾ ।
ಲದಿನೋತಪ್ರೋತಮಂಟಿರ್ದ ಭ್ರಮೆಯೆನಿಪ ಮೂಲಂಗಳಂ ತೂಳ್ದು ಸಂಸಾ ॥
ರದ ಮೋಹಾಸಕ್ತಿಯಾ ಹೆಳ್ಳೆಯನೊಡೆದು ಸುವಿಜ್ಞಾನಸದ್ವೃಷ್ಟಿಯಿಂ ಬ್ರ।
ಹ್ಮದ ಬಿಳ್ತಂಬಿಳ್ತಿ ಕೈವಲ್ಯಫಲವಮುಣುವೆಂ ಸಾಲ್ಗಿದೊಂದೆನ್ನ ಕಜ್ಜಂ॥೨೬॥

ಮಾನನಿಧಿ ಮುಗ್ಧಕೃಷಿಕ ।
ಲಾನಿಪುಣಂಸತ್ಯಭಾಷಿಗುರುಪದಭಕ್ತಂ ॥
ಮಾನಿನಿಯನೊಂದಿ ಗೊಜನೂ ।
ರ್"ನೀಲಪ" ಸಮಾಖ್ಯನೊಪ್ಪಿದಂ * ರವಿಪುರದೊಳ್ ॥೨೭॥

॥ ದ್ರುತವಿಲಂಬಿತವೃತ್ತ ॥

ಪರಮಭಕ್ತಿಗದೇಂಬಗೆದಂದನೋ ।
ಧರಣಿಯೊಳ್ಶಿವಭಕ್ತರಸೇವೆಯೇ ॥
ಹರನಸೇವೆಯಿನರ್ಗಳಮೆಂದೂ ಏ ।
ನೊ. ರಯದಿಂದಿವನೊಳ್ಕೃಷಿಗೆಯ್ದಿದಂ ॥೨೮॥

ಗುರುವಿಂ. ಸತ್ಸಕಲಾರ್ಥಂ ।
ವರನಿಗಮಾರ್ಥಂ. ದುರಂತದುರಿತಾನರ್ಥಂ ॥
ಪರಮಾರ್ಥಂ. ವರತೀರ್ಥಂ. ।
ನರತನುಸಾರ್ಥಂ ಜಯಶಿವರುದ್ರಾಚಾರ್ಯಂ ॥೨೯॥

ಶ್ರೀ ಗುರುಪಾದ ಪದ್ಮಪರಾಗ ಭಸಿತ ಫಾಲಪಟ್ಟ
ಚೆನ್ನಕವಿ ವಿರಚಿತಂ ಶಿವರುದ್ರ ವಿಜಯ
ಲೀಲಾ ಪ್ರಬಂಧದೊಳ್ ತೃತೀಯಾಶ್ವಾಸಂ
ಸಮಾಪ್ತಂ

* ರವಿಪುರ ( ಸೂರಕೋಡ )

( ಶ್ರೀ ಪಂಡಿತಾಚಾರ್ಯಃ ಪ್ರಸೀದತು. )

## ಚತುರ್ಥಾಶ್ವಾಸಂ



ಶ್ರೀಮತ್ಪೂರ್ವಾಚಾರ್ಯ ।
ಕ್ರಮಾಗತಾಚಾರ್ಯ ಸಿಂಹಪೀಠಮ ನಾಂತು ॥
ದ್ದಾಮ ಬ್ರಹ್ಮದ್ಯುತಿಯಭಿ ।
ರಾಮತೆ ವೆತ್ತಿರೆ ಮೆರೆದನಿವಂ ಗುರುಚಂದ್ರಂ ॥೧॥

ಶ್ರೀಕರ ನತರಕ್ಷಾಕರ ।
ಧೀಕರ ಕರುಣಾಕರ ಭವಭೀಕರ ಧೃತನೀ ॥
ರಾಕರ ಭವಮಸ್ತಕ ಶೋ ।
ಭಾಕರನೀಗೆ ಸಕಲಾರ್ಥಮಂ ವೃಷಪತ್ರಂ ॥೨॥

ಉ॥ ಮಾ॥ ವೃ॥

ಸಪ್ತವಿಧಾಂಶ ಧಾತುಗಳ ನೂರ್ಜಿಸಿ ಶಾಂಭವ ಚಿನ್ಮಣಿಪ್ರಭಾ ।
ದೀಪ್ತಿಗೆ ಸಾಧನಾಶ್ರಿತವಹಾಮಿಷದಿಂ ಶ್ರುತಿಮಾತೆ ಪೇಳ್ದ ಸು ॥
ಕ್ಲಪ್ತದೆ "ಜ್ಞಾನಮನ್ನ" ಮೆನಿಪೋದಿನ ಮಾಳ್ಕೆ ಕೃಷಿಪ್ರವರ್ತನಂ ।
ಲುಪ್ತತೆ ಪೊರ್ದದಂತೊಸಗೆಯಿಂದೆಸಗುತ್ತಮಜಸ್ರಮಿರ್ಪಿನಂ ॥೩॥

॥ ಚಾಮರವೃತ್ತಂ ॥

ಎಂದಿನಂತೆ ಭಕ್ತಬೃಂದ ಮೆಯ್ದಿ ದೇಶಿಕೇಂದ್ರಗಂ ।
ವಂದನಂ ನಿಮಿರ್ಚಿ ದೇಶಿಕಪ್ರಭಾವಿತರ್ದಿಯಂ ॥

ಪೊಂದಿ ಭಕ್ತರಂ ಸಮಂತು ಪಾಲಿಸೆಂದು ಪ್ರಾರ್ಥಿಸ ।
ಲ್ಕಂದವರ್ಗೆ ಪೇಳ್ದಿದಂ ತದೀಯ ಪೀಠ ಸತ್ವಮಂ ॥೪॥

ಮ॥ ಸ್ರ॥ ವೃ॥

ಶಿವಯೋಗಾಮೋಘ ಶಕ್ತಿಪ್ರಖರ ಮಹಿಮೆಯಿಂ ಭಿತ್ತಿಯಂ ಘೋಟಮಂಗೆ ।
ಯ್ದು ವಿಶೇಷಾಶ್ಚರ್ಯದಿಂದೇರ್ದು ಚರಿಸಿ ಪೊಳಲೊಳ್ತೈಲಮಿಂಗಿರ್ದ ತದ್ದೀ॥
ಪವನುಜ್ಜ್ವಾಜ್ವಲ್ಯಮಂ ಗೆಯ್ದಿರದೆ ತ್ರಿದಿವಸಂ ವಹ್ನಿಯಂ ಮೆಲ್ದಹಂಕಾ ।
ರ ವಿಲೀನರ್ಜಂಗಮರ್ನಿಂದಿಸಲವರ್ಗಳ ತಲ್ಲಿಂಗಮಂಮಾಂಜಿಸುತ್ತುಂ ॥೫॥

॥ ಚಂ॥ ಮಾ॥ ವೃ ॥

ನಿಕಟದಬೆಂಚೆಯಲ್ಲಿ ತಿರಿಕಲ್ಲಗಳನಾಡುತಿರಲ್ಕವರ್ಗಳೊಂ ।
ದಿ ಕನಿಕರಂ ಮಿಗಿಲ್ಮಣಿದು ಯಾಚಿಸಲಿತ್ತು ಶಿವೈಕ್ಯನಾದ ವ ॥
ರ್ಷಕೆ ನಿಜರೂಪುದೋರಿ ಸಕಲರ್ಗೆ ವೃಷಾರ್ಯಗೆ ಪಟ್ಟವಿತ್ತು ದಿ ।
ವ್ಯಕರಿವೃಷಾಭಿಧಾನಿ ಗುರುರಾಜಿಸಿದಂ ವಸುಧಾ ತಲಾಗ್ರದೊಳ್ ॥೬॥

ಮ॥ ವಿ॥ ವೃ॥

ಬಸವಾಚಾರ್ಯ ಚರಾಧಿಪಂ ಸ್ವಗುರು ಮಾರ್ಗಾಚಾರಮಂ ಬೋಧಿಸು ।
ತ್ತೊಸೆದುದ್ಯಚ್ಛಿವ ಧರ್ಮಮಂ ಪ್ರಕಟಸುತ್ತೆಲ್ಲೆಲ್ಲಿಯುಂ ದುರ್ಮತ ॥
ಪ್ರಸರಂ ಭಂಗಿಸುತಾತ್ಮಭಕ್ತಜನತಾ ಕಲ್ಪದ್ರುವಿಂತೆಂಬುವೊ ।
ಳ್ಲಸ ದಿಕ್ಪೂರ್ಣತೆಯಿಂದಮೊಪ್ಪೆ ಮೆರೆದಂ ವೈರಾಗ್ಯಭಾಗ್ಯೋದಯಂ॥೭॥

ಉ॥ ಮಾ॥ ವೃ॥

ತದ್ಗುರು ಹಸ್ತನೀರಜದೆ ಪುಟ್ಟಿದನೂರ್ಜಿತ ವೇದಶಾಸ್ತ್ರ ಸಂ ।
ಪದ್ಗುಣರಂಜಿತಂ ಜಿತ ಮನೋಜ ನಿಳಾತಳ ಶಾಂಭವಂ ನತಾ ॥
ಪದ್ಗಣ ಭೂಜ ತೇಜ ನನಘಂ ಶಿವಶಾಂತಿ ಸುಖಾಂಬುರಾಶಿ ಭಾ ।
ಸ್ವದ್ಗುರು ಚೆನ್ನವೀರ ನೆಸಿಪಂ ಸುವಿರಕ್ತ ಹೃದಬ್ಜ ಶೋಭಿತಂ ॥೮॥

ಶುದ್ಧತನು ಪ್ರಭಾಕಲಿತ ತದ್ಗುರು ಹಸ್ತದೆ ಪುಟ್ಟಿದಂ ಕ್ರಿಯಾ ।
ಸಿದ್ಧಿ ರಹಸ್ಯಪೂರ್ಣ ಚರಿತಂ ನಿಜಶಿಷ್ಯ ವಿತಾನ ಪಾಲಕಂ ॥
ಸದ್ಧಿತಕಾರ್ಯಧುರ್ಯನೆಸೆದಂ ಶಿವಧರ್ಮ ಪಯೋನಿಧೀಂದು ದೀ ।
ನೋದ್ಧರಣೈಕಶೀಲ ಸುಭಗಂ ಗುರುಪಾದ ಶಿವಾರ್ಯಶೇಖರಂ ॥೯॥

ಮಂಗಲ ತದ್ಗುರೂತ್ತಮನ ಹಸ್ತದೆ ಕೆಂಜೆಡೆ ವಿದ್ರುಮಂ ಲಸ ।
ತ್ತುಂಗ ವಿಭೂತಿಯೇ ಮೆರೆವ ಜತ್ತುಳಮುಂ ಭುಜಮೂರ್ಮಿಮಾಲೆಭಾ ॥
ವಂಗೊಳು ತಿರ್ಪ ಚಕ್ರಮೆಕಮಂಡಲುಮಾಗೆ ಧರಾತಲಕ್ಕೆ ಚೆ ।
ಲ್ವಿಂಗಡಲಂತೆ ಪೊಲ್ಕ"ರಿವೃಷಾರ್ಯ"ಮಹಾಶಿಯೋಗಿಯೊಪ್ಪಿದಂ ॥೧೦॥

ಆಗುರು ಹಸ್ತನೀರಜದೊಳೂರ್ಜಿತ ತರ್ಜಿತ ಮಾರಧೀರ ಸ ।
ದ್ಯೋಗಿವರೇಣ್ಯ ಪುಣ್ಯಕಲದಿವ್ಯಚರಿತ್ರ ಪವಿತ್ರಗಾತ್ರಶ್ರೈ ॥
ವಾಗಮ ತತ್ವಸತ್ವಪರಿಪೂರ್ಣ ಜಿತೇಂದ್ರಿಯವರ್ಗ ಭರ್ಗ ಪೂ ।
ಜಾಗತ ಪುಟ್ಟಿದಂ "ಕರಿವೃಷಾಭಿಧ" ಸಜ್ಚರ ವೃಂದ ಪೂಜಿತಂ ॥೧೧॥

ಚಂ॥ ಮಾ॥ ವೃ ॥

ನಿಜಗುರುವರ್ಗಮಾರ್ಗ ಮಣಿದೀಪ ಸುರೂಪ ವಿಲೋಪ ತಾಪ ದು ।
ರ್ವ್ಯಜಿನ ವಿದೂರ ಸಾರಗುಣ ರಂಜಿತ ಭಂಜಿತ ರಾಗರೋಗ ಶಿ ।
ಷ್ಯಜನ ಸುರಾಗ ನಾಗಧರ ಧರ್ಮಗ ಧರ್ಮ ವಿದಾರಿಸೂರಿ ಯ ।
ತ್ರಿಜಸಮುಶಾಂಶ ಕಾಂತ ಗುರುವಿಂದೊಗೆದಂ "ವೃಷಲಿಂಗದೇಶಿಕಂ" ॥೧೨॥

ಅವನಿಂ "ಕರಿವೃಷಭಂ"ಬಳಿ ।
ಕವನಿಂ ಶಿವಯೋಗಭೋಗರಸಿಕಂ ಗಿರಿಜಾ ॥
ಧವಮತ ಭೂಷಂ ಮಾಯಾ ।
ಭವ ತಿಮಿರಾರ್ಕಂ "ಶಿವಾಭಿಧ" ಚರಾಚಾರ್ಯಂ ॥೧೩॥

ಚಂ॥ ಮಾ॥ ವೃ॥

ಚರಕುಲಚಕ್ರವರ್ತಿ ರುಚಿರಾಮಳ ಕೀರ್ತಿ ಹೃತಾನತಾರ್ತಿ ಸ ।
ದ್ಗುರು ಸಮಯಾನುವರ್ತಿ ವಿಜಿತೇಂದ್ರಿಯಮೂರ್ತಿ ಕಲಾಪ್ರಪೂರ್ತಿ ಚಿ ॥
ತ್ಸುರುಚಿರ ದೀಪವರ್ತಿ ಪರಿಧೂತ ಪುನರ್ಜನಿ ಜೂರ್ತಿ ವೀತ ಭೀ ।
ಕರಸಮವರ್ತಿ ದಿವ್ಯಗುರುಮುದ್ರನುದಂಚಿತ "ರುದ್ರದೇಶಿಕಂ" ॥೧೪॥

ಘನಶಿವಧರ್ಮ ವೃದ್ಧಿಕರನಾಗಿಯು ಮುನ್ನತ ಧರ್ಮನಾಶಕಂ ।
ವಿನುತ ಶಿವಾಂಕನಾಗಿಯು ಮುದಗ್ರಶಿವಾಂಕಹರಂ ವಿಧೂತ ಧಾ ॥
ಮನು ಮೆನಿಸಿರ್ದು ಧಾಮಭರಿತಂ ವಿಷಸಂಹರನಾಗಿಯುಂ ಚಿರಂ ।
ತನ ವಿಷದಾತನೆಂದೆನಿಸಿದಂ "ಗುರುಪಾದ ಚರಾರ್ಯ" ನೀತನಿಂ ॥೧೫॥

ಚರಿತದೊಳುಂಟೆ ನೋಡೆ ಕರೆ ಕೇಶದೊಳಲ್ಲದೆ ರಾಗಮೆಂಬುದು ।
ತ್ಕರಜದೊಳಲ್ಲದುಂಟೆ ಮನದೊಳ್ವಿಷಮುಸ್ಥಿತಿಯಾತ್ಮ ಹಸ್ತನೀ ॥
ರರುಹದೊಳಲ್ಲದುಂಟೆ ಮತಿಯೊಳ್ಚಲವಿಲ್ಲಮೆನಿಪ್ಪ ಸೂಕ್ತಿಗೊ ।
ಲ್ದಿರದೆಡೆಗೊಟ್ಟ ದೇಶಿಕ ಶಿಖಾಮಣಿ "ಮುದ್ದಚರೇಶ" ನೀತನಿಂ ॥೧೬॥

ಆತಪವಿಲ್ಲದ ತಪನೋ ।
ಲ್ತಾಪಮದಿಲ್ಲದ ಮರುತ್ಸಖನವೊಲ್ಧರೆಯೊಳ್ ॥
ತಾಪಸಮಣಿ ಶೋಭಿಸಿದಂ ।
ಶಾಪಾನುಗ್ರಹ ಸಮರ್ಥನಾ "ಸಿದ್ಧೇಶಂ" ॥೧೭॥

ಅವನಿಂ "ಕರಿವೃಷಭಂ" ಮೇ ।
ಣವನಿಂ "ಮುದ್ದಾಭಿಧಾನಿ" ಚರಪತಿಯಿವನಿಂ ॥
"ಶಿವರುದ್ರಂ" ಬಳಿಕವನಿಂ ।
ದವಲೋಕಿಸೆ "ಚೆನ್ನವೀರ" ಪಟ್ಟಾಧೀಶಂ ॥೧೮॥

ಇವನಿಂ"ಗುರುಪಾದಾಚಾ ।
ರ್ಯ" ವರೇಣ್ಯಂಬಳಿಕಮೀತನಿಂ ತಾನಲೆದಾ ॥
ಡುವ ಕಲ್ಪೋರ್ವೀರುಹಮೆನೆ ।
ಸುವಿರಾಜಿಸಿದಂ "ವೃಷಚರಪತಿ" ಮೇಣಿವನಿಂ ॥೧೯॥

॥ ಮ॥ ಸ್ರ॥ ಸ್ರ ॥

ಹರವಿಜ್ಞಾನಾಗ್ನಿಯಿಂದಂ ಕಠಿನ ಕರಣ ಕಾಷ್ಠಂಗಳಂ ಸೀದು ಸಚ್ಚಿ ।
ತ್ಕಿರಣಂ ತಾನಾಗಿ ಪೂತಂ ಗೊಳಿಸಿಳೆಯ ನಿಳಾ ಭೋಗಮುಂ ಮೋಕ್ಷಮುಂ ಭ ॥
ಕ್ತರಿಗೋರಂತಿತ್ತು ವೈರಾಗ್ಯದಿನಿರವೆ ನವಿಲ್ಗುಂದವಕ್ಕೈದ್ವೈಕ್ಯನಾದಂ ।
"ಗುರುಪಾದಾಚಾರ್ಯ" ಮುಖ್ಯರ್ವಿರತಿ ಘನ ಮಹಾಶಕ್ತಿಯಿಂದೊಪ್ಪಿತೋ-
ರ್ದರ್ ॥೨೦॥

ತತ್ಪೀಠವನಾರೋಹಿಸೆ ।
ಚಿತ್ಪರಿಣತೆ ಶಿಷ್ಯ ಪಾಲನೋದ್ಯದ್ಘನಶ ॥
ಕ್ತ್ಯುತ್ಪತ್ತಿಯಿಲ್ಲದಾಶಾ ।
ತತ್ಪರನೆನ್ನಿಂದೆ ಶಕ್ಯಮೇನಾದಪುದೇ ॥೨೧॥

ಮ॥ ವಿ॥ ವೃ॥

ಸ್ವಮತಾಶೇಷ ಜನಾಂಗಮಂ ನಟಿಪ ಮುಖ್ಯಾಧಾರಸೂತ್ರಂ ಗುರೂ ।
ತ್ತಮ ಪೀಠಂ ನಿಜ ಸತ್ವಮಿರ್ಕುಮದರೊಳ್ತ್ರೀಠಮಾಳ್ವಂಗೆ ಬೇ ॥
ಡಮೆ ಬಲ್ಪಿಂಮಿಗಿಲಾಳ್ದೊಡಂಥರುಭಯಗುರ್ಕಾಡುತ್ತೆ ವಾರಾಶಿಯಂ ।
ಘುಮುಕಿರ್ದಂತೆ ವೊಲಪ್ಪುದೆಂದೊರೆಯಲಾ ಸದ್ಭಕ್ತರಿಂತಾಡಿದರ್ ॥೨೨॥

ಅನಲಂಚುರ್ಚುವೆನೆಂದದನ್ಯರನದೇನಾಮಂತ್ರಿಸಲ್ಪೋಕುಮೇ ।
ಮನಕಿಂಪೀಯುವ ಸಾರಯುಕ್ತ ಸುಮವೇನಾಘ್ರಾಣಿಸಲ್ಪೇಳ್ಗುಮೇ ॥
ಕನಕಂ ಬಿಲ್ತುಗೊಳಲ್ಕದೇನಿತರರಂ ಸಾರ್ದಿರ್ಪುದೇ ನೋಡೆ ಪಾ ।
ವನ ತ್ಸದ್ಬ್ರಹ್ಮಸುತೇಜವೆಮ್ಮನದು ತಾನಾಕರ್ಷಣಂ ಮಾಡುಗುಂ ॥೨೩॥

ಉ॥ ಮಾ॥ ವೃ॥

ಮೃಣ್ಮಯ ಸಾಲಭಂಜಿಕೆ ಮನೋಜ್ಞಮದಾದೊಡಮೇಂ ಪ್ರಯೋಜನಂ ।
ಪೆಣ್ಮಣಿ ಚಿತ್ರದಿದಿರ್ದೊಡಮದೇಂ ಫಲಮಕ್ಕುವಿಚಾರಿಸಲ್ಕರಂ ॥
ಕಣ್ಮನಕಿಂಪು ಸೊಂಪುಗಳನೀಯುವ ಭಿತ್ತಿಯ ಪುಷ್ಪದೇನೊಳಂ ।
ಜಾಣ್ಮೆಗೆ ಯಿಲ್ಲದಾಂ ಗುರುವಿತರ್ದಿಯ ನಾಳ್ದೊಡೆ ಭೂಷಣಪ್ಪುದೇಂ ॥೨೪॥

ಅದರಿಂ ನೀವ್ಪಡಿನುಡಿಯದೆ ।
ಸದಭಿಸ್ತುತ ಶಿಷ್ಯ ಪಾಲ ನೋದ್ಯದ್ಗುಣ ಸಂ ॥
ಪದ ಮುಳ್ಳವನಂ ಸಾರ ।
ಲ್ದೊದಗುಗು ಮಿಷ್ಟಾರ್ಥಮೊಂದು ಬೀಳ್ಕೊಟ್ಟಾಗಳ್ ॥೨೫॥

ಚಂ॥ ಮಾ॥ ವೃ॥

ನಿಜಗುರು ಸಿಂಹಪೀಠವಭಿಮಾನಿಗಳಾನನ ಕಂದಿಕುಂದಿಯ ।
ತ್ರಿಜ ಧರನಿಷ್ಟ ದಪ್ಪಿದುದೊ ನಮ್ಮಪುರಾಕೃತ ಕರ್ಮ ದೇಳ್ಗೆಯೋ ॥
ಭುಜಗವಿಭೂಷಣಾನ್ವಯ ವಿಶಾಲ ಸಮಾಜದ ದುರ್ವಿಪಾಕಮೋ ।
ಸೃಜಿಸದೆಪೋಯ್ತು ಭಕ್ತಮನದಿಚ್ಛಿತ ಸಸ್ಯಕೆ ಸತ್ಫಲಾಂಬುವಂ ॥೨೬॥

ಮ॥ ಸ್ರ॥ ವೃ॥

ದಿನಪಾವಿರ್ಭಾವದಿಂ ಪದ್ಮಿನಿ ವಿಕಸಿಪವೋಲಾತ್ಮಚಿದ್ದೇಶಿಕೋದ್ಯ ।
ದ್ಘನವೈರಾಗ್ಯತ್ವಮಂ ಕಂಡರಿದು ನಲಿದು ಸೂರ್ಯಾಸ್ತನಾಗಲ್ಕೆತತ್ಪ ॥

ದ್ಮಿನಿ ಸುಪ್ತಂ ಗೊಳ್ಳುವಂತೆಮ್ಮೆಳಪಳಿದುದರಿಂ ಖೇದಮೋದಂಗಳಂ ತಾಂ ।
ಮನದೊಳ್ತಾಯ್ವುಯ್ದೆ ಭಕ್ತರ್ಮನೆಗೆ ತಳರ್ದರೇನೆಂಬೆನಾಶ್ಚರ್ಯಮಿತ್ತಲ್
॥೨೭॥

॥ ಚಂ॥ ಮಾ॥ ವೃ ॥

ನಿಜಗುರು ಮಾನುಷಾಕೃತಿಯ ಸಾಳ್ದು ವಣಿಗ್ವರನಾಗಿ ಪೋ ।
ಗಿ ಜಯಮುದಕ್ಕುಮೆನ್ನನುಡಿಯಾಲಿಸು ಪಾಲಿಸು ಬರ್ಪ ವಿಘ್ನಭೂ ॥
ಮಿಜವನಣಂಗಿಸುತ್ತವಿರತಂ ಮನದಿಷ್ಟಮನಿತ್ತು ಕಾರ್ಯದೊ ।
ಳ್ವಿಜಯವನಾಗಿಪೆಂ ಗುರುವಿತರ್ದಿಯನಾಂತು ಸಮಸ್ತ ಭಕ್ತರಾ ॥೨೮॥

ಅಭಿಮತವಿತ್ತು ನಿರ್ಮಲಿನ ಶಾಂಭವ ದೀಕ್ಷೆಯ ನಾಗಿಸುತ್ತೆ ಚಿ ।
ದ್ವಿಭವವಿರಾಗಮಂ ಕರತಲಾಮಲಕಂಬೊಲೊಡರ್ಚಿ ಧರ್ಮದೊಂ ॥
ದಭಿರತಿದೋರಿ ಮೀರಿ ಸುಪವಿತ್ರ ಮಹಾಗುರು ಪೀಠದೋಜೆಯಂ ।
ಶುಭಮೆನೆ ಬೀರದೆಂದುಸಿರ್ದಿಹಂ ನೆರೆಪಳ್ಳಿಯೊಳಿರ್ದುದಮೊಚ್ಚತಂ ॥೨೯॥

ನಿನಗದನೊಲ್ದದಾನುಸಿರಲೆಯ್ದಿದೆ ನಾರ್ಯಮ ತೇಜಿಗಳ್ಗೆ ಮು ।
ರ್ದಿನಭಯಮುಂಟೆ ತದ್ಗುರು ಪದಾಂಬುಜ ದಿವ್ಯ ಕೃಪಾಕಟೀಕ್ಷಣಂ ॥
ಘನಮೆನೆ ನಿನ್ನ ಮಸ್ತಕದೊಳೊಪ್ಪಿರೆ ಸಾಧ್ವಸಮುಂಟೆ ಮನ್ನಿಸೆಂ ।
ದನುನಯದಿಂದುಸಿರ್ದಿರಡೆ ಮೈಗರೆದಂ ಸೆಳೆ ಮಿಂಚಿನಂತೆ ವೊಲ್ ॥೩೦॥

ಮ॥ ವಿ॥ ವೃ॥

ಮಮಮಾತಾಮಣಿ ಗೊಲ್ದು ಸ್ವಪ್ನಮುಖದಿಂ ತತ್ಪೂರ್ವದೊಳ್ಪೇಳ್ದಿದಂ ।
ತೆ ಮನುಷ್ಯಾಕೃತಿ ದಾಳ್ದಮೀಗ ಸುಳಿದೀ ವೈಚಿತ್ರ್ಯಮಂ ತೂಗಿ ನೋ ॥
ಡಿ ಮನಂಗಂಡು ಮುದಾದ್ಭುತಂ ದಳೆದು ಚೇತೋರಂಗದಲ್ಲಾತ್ಮಪು ।
ತ್ರ ಮಮತ್ವಂ ಗುರುವರ್ಯಗೇಂಪಿರಿದೊ ತಾನಿಂತೆಂದು ಹರ್ಷಾಶ್ರುವಿಂ॥೩೧॥

॥ ಚಂ॥ ಮಾ॥ ವೃ ॥

ಘನಮಹಿಮಾ ಪ್ರವಿಷ್ಟ ಗುರುವಂಶ ಭವರ್ಕಳಮಂದ ಸಂದ ಭೂ ।
ವಿನುತ ಮಹತ್ವಕಿಂತಿದು ನಿದರ್ಶನಮಾದುದಕಂತರಂಗದೊಳ್ ॥
ಕೊನರ್ದುಮಗುಳ್ದು ಚೇರೆಣಿಸದಂತೆ ಪೊಡಳ್ದು ಶಿರಸ್ಸರೋಜಮಂ ।
ತೊನೆದು ತದೀಯ ದೇಶಿಕ ಪದಾಜ್ಜಕೆ ಸಲ್ಲಿಸಿದಂ ಪ್ರಣಾಮಮಂ ॥೩೨॥

ಉ॥ ಮಾ॥ ವೃ॥

ಜಂಗಮಚಕ್ರವರ್ತಿಗುರು ರೇಣುಕನಂದುರೆ ಮಾಯಿದೇವಿಯಿಂ ।
ಬಂಗನೆಗೊಲ್ದು ಜಾನಿಸಲದಾಕ್ಷಣಮೆಯ್ದಿ ಹೃದಿಷ್ಟವಿತ್ತಪು ॥
ರ್ವಂ ಗಡಮಪ್ಪಿ ಮೆಯ್ದಡವಿ ತತ್ತನುಜಾತೆಯ ಘೋರಬಂಧಮಂ ।
ಭಂಗಿಸುತೋವಿದಂತೆ ನಡೆತಂದೆನಗೆಳ್ಚರವಿತ್ತೆ ದೇಶಿಕಾ ॥೩೩॥

ಮ॥ ಸ್ರ॥ ವೃ॥

ಗುರುಪಾಜ್ಞೋಲ್ಲಂಘನಂ ಗೆಯ್ದ ಕುಕವಿ ಗಜ ಪಂಚಾನನಂ ರಾಘವಾಂಕಂ ।
ಧರೆನೋಡಲ್ದಂತಮಂ ನೀಗಿಕೊಳನೆ ಮುನಿಪವ್ಯಾಸನೊಳ್ಪಾತು ಮೀರ್ದುಂ ॥
ವರಜೈಮಿನ್ಯೋತ್ತಮಂ ಕಾಮಶರ ಹತಿಯಿನುರ್ವೀ ಕುಹಾಸ್ಯಕ್ಕೆ ಪಕ್ಕಾ ।
ಗಿರನೇ ತ್ರೈಲೋಕ್ಯದೊಳ್ದೇಶಿಕನೊರೆಯನದಾರ್ಮೀರ್ವರೆಂದೀತಸಾಗಳ್॥೩೪॥

ಭವದೀಯ ಸಿಂಹಪೀಠಕೆ ।
ಭುವಿಯೊಳ್ಕುಂದಡಸದಂತೆ ಮೆರೆವಭಿಮಾನಂ ॥
ಭವಹರಣಂ ನಿನಗಲ್ಲದೆ ।
ಭವಚ್ಚರಣ ಭೃತ್ಯಗೆಂತುಮೇನಿರ್ದಪುದೇ ॥೩೫॥

ಚಂ॥ ಮಾ॥ ವೃ॥

ಗುರುವಿನಕೂರ್ತುವಿಂತೆರೆದು ತನ್ನೊಳೆ ತಾನೊಡಬಟ್ಟು ಭಕ್ತರಂ ।
ಬರಿಸಿ ತದೀಯ ಮರ್ಮವನುಸಿರ್ದುಮಮವರ್ಗೆ ಪರಂಪರಾಗತೋ ॥
ತ್ತರ ಗುರುಪೀಠವಮಂ ತಳೆವೆನೆಂತರಿಸೆಂ ದಲವೊಂದು ಪೇಳ್ದಿಮ ।
ಚರಣ ಸಮಾಶ್ರಿತರ್ಕಳನುಪೇಕ್ಷಿಸೆ ದುರ್ಧರ ದುಃಖಮುಂಟದೇ ॥೩೬॥

ಇದನಾಕರ್ಣಿಸಿ ಮನದೊ ।
ಳ್ಬಿದುವಿಂ ಕ್ಷೀರಾಬ್ಧಿಯುರ್ಬುವಂತಿರೆ ಸರ್ವರ್ ॥
ಮುದದಿಂದುರ್ಬುತೆ ಗುರುಪ ।
ಟ್ಟದುತ್ಸವದೊಳುತ್ಸವದಿನವರ್ತೊಡಗಿರ್ದರ್ ॥೩೭॥

ಸ್ರ॥ ಗ್ಧ॥ ವೃ॥

ಶ್ರೀಮತ್ಪಂಚಾಕ್ಷರಾರ್ಯಂ ಜಸವಡೆದಿಹ ಮದ್ದಾನಮಾಹೇಶ್ವರಂ ಚಿ ।
ದ್ಧಾಮಂಶ್ರೀಸಿದ್ಧಲಿಂಗಾರ್ಯನಮುಳ ಗುರುಸಂಗಾರ್ಯನುದ್ಯತ್ಸುಶೀಲಂ ॥

ಸೋಮಾರ್ಯಂಕೂಡೆ ಶಾಂತಾರ್ಯನಲಘುತರ ಗೂಳಪ್ಪನುದ್ದಾನಶೌಂಡಂ
ಶ್ರೀಮಂತಂ ಭೋಗವಂತಂ ಮುದಿಯಪನೆಸಿಪಂ ಸಂಕಪಂ ಮತ್ತೆನೋಡಲ್
॥೩೮॥

ಮ॥ ವಿ॥ ವೃ॥

ವಿನುತಂ ಕಲ್ಲನಗೌಡ ಚಾರುಮರಿಗೌಡಂ ಸಾಹಿತೀ ಧೀರ ಕ ।
ಲ್ಲನಗೌಡಂ ಮರಿಗೌಡನೈಯಪನುಮಾ ಗ್ರಾಮಾಧಿಕಾರತ್ವದೈ ॥
ಯ್ಯನಗೌಡಂ ಹನುಮಂತಗೌಡನರಿಯಲ್ಕಾ ಲಿಂಗಯಂ ಮತ್ತೆಕೇ ।
ಳಿನಘಂ ತದ್ಬಸವಾರ್ಯ ವೀರಯನುಮಿಂತೀ ಭಕ್ತಮಾಹೇಶ್ವರರ್ ॥೩೯॥

ಸುಕರಂ ಪಟ್ಟಾಭಿಷೇಕೋತ್ಸವಕೆ ನೆರೆದು ಸರ್ವರ್ಗಮಾಹ್ವಾನ ಪತ್ರ ।
ತ್ರಿಕೆಯಂ ಮುದ್ರಾಪಿಸುತ್ತುಂ ಪ್ರಚುರ ಪಡಿಸಿದರ್ನಮ್ರದಿಂ ವೇದವೈಜ್ಞಾ ॥
ನಿಕರಾಜ್ಞಾಪೂರ್ವಕಂ ಕಾರ್ಯತರತಮನವನ್ನಾಂತರ್ಪುರೋಧರ್ಕಳಾಸೀ ।
ಕಕೆ ಕಾಲಾಕಾಲಮಂ ಕಿಂಕರತೆಯಿನೆರೆದರ್ಸರ್ವಸನ್ನಾಹ ಗೆಯ್ದರ್ ॥೪೦॥

ಹಿಮಸಾರಣಿ ಕಾರಣೆಯಿಂ ।
ಸುಮದಿಂ ಕೋಮಲ ತಳಿರ್ಗಳಿಂ ಮಂಡಪದಿಂ ॥
ರಮಣೀಯ ದರ್ಪಣಗಳಿಂ ।
ಸುಮಂಗಲಮೆನಲ್ಮಠಮನಲಂಕೃತಿ ಗೆಯ್ದರ್ ॥೪೧॥

ಮ॥ ವಿ॥ ವೃ॥

ಸದಯರ್ಷಟ್ಸ್ಥಲ ಬೋಧಕರ್ನಿಗಮ ವಿಜ್ಞ"ತೋಂಡಿಹಾಳೆಂ"ಬ ಪ ।
ಟ್ಟದಮೂರ್ಧನ್ಯರನಂಗಲಿಂಗಸುಖಪೂರ್ಣಾನಂದ "ತಿಲಾಪುರಾ" ॥
ಭ್ಯುದಯ ಶ್ರೀಚರವರ್ಯರಂ ಕರೆಸಿದರ್ವೈರಾಗ್ಯಸಂಪನ್ನರಂ ।
"ಬೆದವಟ್ಟೇ" ಗುರುಪಟ್ಟದಾರ್ಯರನಿವರ್ಸಂತೋಷಮುಕ್ಕೇರಿಸಲ್ ॥೪೨॥

ಚಂ॥ ವೃ॥

ಗುರುಮಣಿಪೀಠಕೊಪ್ಪುವ ಸುಲಕ್ಷಣಮೀಕ್ಷಿಸಿ ಸದ್ವಿರಾಗ ಭಾ ।
ಸುರಗುಣಮಂ ಪರೀಕ್ಷಿಸಿ ಸಮಸ್ತಪುರಸ್ಥ ಮಠಸ್ಥ ಪಂಡಿತರ್ ॥
ನೆರೆದು ಮಹೋತ್ಸವಂಮಿಗಲೊಡಂಬಡಲೊಮ್ಮನದಿಂ ವಿಶಾಲ ಭ ।
ಕ್ತರ ಜಯರಾವಮುರ್ವೆ ಬೆದವಟ್ಟ ಷಡುಸ್ಥಲಮೂರ್ತಿ ಹಸ್ತದಿಂ ॥೪೩॥

ವಟುಶಿವರುದ್ರವರ್ಯಗೆ ವೃಷಧ್ವಜಸಾರೆ ತದೀಯಭಕ್ತರು ।
ತ್ಕಟಮನದಿಷ್ಟಸಾರೆ ಕಳೆಯೇರೆ ಚತುರ್ಕಳವಕ್ತ್ರಪದ್ಮದೊಳ್ ॥

ಸ್ಫುಟಮೆನೆ ನೋಟಕರ್ಕಳ ವಿಲೋಚನಪುಣ್ಯಮೆ ರೂಪುದೋರಿ ಸಂ ।
ಘಟಿಸಿದ ಪಂಡಿತೋತ್ಕರ ತುಳಿಲ್ಗತಿಮೀರೆ ಮುಹೂರ್ತಮೈತರಲ್ ॥೪೪॥

ಮ॥ ವಿ॥ ವೃ॥

ವಿಮಲಶ್ರೀಗುರು ರೇಣುಕಾರ್ಯಮುಖ ಪಂಚಾಚಾರ್ಯ ಸಾಂಕೇತಿ ಕೋ ।
ತ್ರಮ ನಾಲ್ಕೊಂದು ಘಟಂಗಳಂ ನೆಲಸಿ ಸತ್ಸಂಸ್ಕಾರಮಂಗೆಯ್ದು ಪೂ ॥
ಜ್ಯ ಮಹೋದ್ದಂಡ ಕಮಂಡಲಂ ಶಿವಸಮಾಜೋತ್ಕರ್ಷದೊಳ್ಸೂತ್ರಮಂ ।
ಕ್ರಮದಿಂದಿತ್ತು ಮೃಗೇಂದ್ರಪೀಠಪತಿಯಂ ಗೆಯ್ದರ್ಗಣರ್ಮೋದಿಸಲ್ ॥೪೫॥

ಚಂ॥ ಮಾ॥ ವೃ॥

ಪರಮಮಹೇಶ ತುಷ್ಟಿಯನೊಡರ್ಚೆ ಶಿವಾನುಭವೋಪದೇಶಮಂ ।
ಸರಿಯೆನೆ ಬೋಧಿಸೊಲ್ದು ಸವಿಸೂಸುವ ಮಂಗಲವಾದ್ಯದೆಳ್ತರಂ ॥
ಪರಿಯೆ ವಿಶಾಲರಾಜಪಥದೊಳ್ಪೊರಮಟ್ಟತು ನೋಟಕರ್ಕಳಿಂ ।
ಬೆರಸು ಮನೋಜ್ಞ ದಿವ್ಯಶಿಬಿಕೋತ್ಸವಮಂ ಪೊಗಳಲ್ಕೆ ಬರ್ಕುಮೇ ॥೪೬॥

ಬುಧಜನವೃಂದ ಮುಂದೆಸೆಯೊಳೊಪ್ಪಿರಲಾನಕರಾವದಬ್ಬರಂ ।
ಬಧಿರಿಸೆ ಕರ್ಣಮಂ ಪ್ರಮದೆಯರ್ಶುಭಶೋಭನ ಪಾಡುತಿರ್ಪ ಸ ॥
ನ್ಮಧುರ ನಿನಾದ ಕರ್ಣಸುಮನೋಹರಮಾಗಿರೆ ವೀರಶೈವ ಸ ।
ದ್ವಿಧಿಯುತ ವೈದಿಕರ್ಪಠಿಸೆ ವೇದವನೈತರುತಿರ್ದುದುತ್ಸವಂ ॥೪೭॥

ಮ॥ ವಿ॥ ವೃ॥

ಮೊಲೆಯೂಡೆಂದುರೆ ಮೇಲುದಂ ಸೆಳೆದುಕೊಂಡಾಕ್ರಂದನಂ ಮಾಳ್ಪ ಸ ।
ಲ್ಲಲಿತಾತ್ಮೋದ್ಭವನಂ ಕೆಲಕ್ಕಿರಿಸಿ ಸ್ಥೌಲ್ಯಶ್ರೋಣಿಗಳ್ಕಂಪಿಸಲ್ ॥
ನೆಲನಿಂತೇಂ ಬೆಸಲಾದುದೋ ಎನಿಪವೋಲ್ಮಂದ್ಯೈಸ್ಸಿ ನಿಂದಿರ್ದರಂ ।
ಕೆಲಕೊತ್ತೈಯ್ದುವ ದಿಟ್ಟೆಯಂ ಕೆಳದಿಯರ್ಕಂಡೆಯ್ದೆನಕ್ಕಾಡಿದರ್ ॥೪೮॥

ಚಂ॥ ಮಾ॥ ವೃ॥

ತವಕದಿನೋರ್ವಬಾಲೆಯೆಡವಕ್ಕದ ತಂಗಿಯ ಕೂರ್ತಿದೇಂಮಹೋ ।
ತ್ಸವಮೆನೆ ಕೇಳ್ದುದಿಲ್ಲವೆ ಬೃಹನ್ಮಠದೇಶಿಕಪೀಠಭೂಷಣಂ ॥
ಭವಹರನಾತ್ಮದೇಶಿಕನಿರೂಪದಿನಕ್ಕ ಪದಾಶ್ರಿತರ್ಕಳೈ ।
ನವನಣೆದಿಕ್ಕಲಿಲ್ಲಿ ನಡೆತಂದಪನೇಳೆನುತೊಲ್ದು ನೋಡಿದರ್ ॥೪೯॥

ಮ॥ ವಿ॥ ವೃ॥

ಶತಜನ್ಮಾರ್ಜಿತ ಪುಣ್ಯದೇಳ್ಗೆವಿಡಿದೇಳ್ತಂದರ್ಗೆ ಸಂಭಾವ್ಯ ಸ।
ನ್ನುತ ಚಿದ್ದೇಶಿಕನುತ್ಸವಂ ತದಮಲೋದ್ಯದ್ದರ್ಶನಂ ತತ್ಫಲಂ ॥
ಕ್ಷಿತಿಯೊಳ್ಸಾರುಗುಮನ್ಯಥಾ ದೊರೆಗುಮೇ ತಾನೆಂದು ಮುಕ್ತ್ಯಂಗನಾ।
ಕೃತಿಯಾಂತೆಯ್ದಿದಳೆಂಬವೊಲ್ತರುಣಿಯೋರ್ವಳ್ಕಣ್ಗೆದೇಂ ವಂದಳೋ ॥೩೦॥

೫೦॥ ಮಾ॥ ವೃ॥

ಗುರುವರಭೋ ನಮಃಪರಮಪಾವನಮೂರ್ತಿ ನಮಃಕಲಾ ವಿಭಾ।
ಸುರ ಶಿವಹೃದ್ವಿಭೂತಿಕಣಜಾತ ನಮಃಶಿವರುದ್ರ ಸಾಕೃತೀ ॥.
ಪರಶಿವರೂಪ ಮಂಗಲನಮೋಸ್ತುತೆ ಎಂಬ ಜಯಪ್ರಣಾದ ದಿ।
ಕ್ಕರಿಗಳ ಕರ್ಣಭೇದಿಸುತವೈತರುತಿರ್ಮದು ದೇಶಿಕೋತ್ಸವಂ ॥೩೧॥

ತರುಣಿಯರಂಗಸಂಗಮಿಸಿಸಿಲ್ಲದ ಯೋಗಿಗೆ ಶೈಲಜಾತೆ ಗೊ।
ಲ್ದರೆವೊಡಲಿತ್ತ ಶಂಭುಸರಿಯಲ್ತು ಮಹಾಶಿವಯೋಗಮುಗ್ಗಳಂ ॥
ಕರಮೆನೆ ಸೂಚಿಪಂತೆ ಗುರುದಿವ್ಯಬೃಹನ್ಮಠವಗ್ರಭಾಗದೊ।
ಳ್ಮೆರೆಯುವ ನೀಳ್ದರಾಗರುಚಿರ ಧ್ವಜ ಸಾರ್ಕೆಗೆ ನಿಂದುದುತ್ಸವಂ ॥೩೨॥

ಬಗೆದಣಿಯದೆಯುಜ್ಜುಗಮಂ।
ಬಗೆಬಗೆಯಿಂಗೆಯ್ದ ಸರ್ವಜನದುಪಕೃತಿಯಂ ॥
ಬಗೆದು ಮಣಿದು ಪ್ರಾಂಜಲದಿಂ।
ಬಗೆಯೊಳ್ನೆನೆನೆದವಂದಿರಂ ಬೀಳ್ಕೊಟ್ಟರ್ ॥೩೩॥

ತನುಮನಧನ ತ್ರಯಗಳಂ।
ಜನಗೌರವಮಂ ಶಿವಪ್ರಿಯಾಚಾರಗಳಂ ॥
ಮನುಜತ್ವವನಳಿದಿಕ್ಕುವ।
ಮನೋಜನಂ ಮರ್ದಿಸಿಪೊರೆ ಭೋಶಿವರುದ್ರ ॥೩೪॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ಚತು
ರ್ಥಾಶ್ವಾಸಂ
—ಸಮಾಪ್ತಂ.—

॥ ಶ್ರೀವಿಶ್ವಾರಾಧ್ಯೋವಿಜಯತೇತರಾಂ ॥

## ಪಂಚಮಾಶ್ವಾಸಂ.



ಸಮತಾ ಗುಣಮಂ ಬ್ರಹ್ಮೋ।
ತ್ತಮತೇಜಃಪುಂಜಮಂ ಪ್ರಶಾಂತಸ್ಥಿತಿಯಂ ॥
ಕ್ರಮದಿಂ ನಿರ್ದಾಂಭಿಕ ನಿರು।
ಪಮ ನೈಸರ್ಗಿಕ ಚರಿತೆಯನಭಿವರ್ಣಿಸುವೆಂ ॥೧॥

ಶಿವಲಿಂಗರೂಪನರ್ದಿತ।
ಭವತಾಪಂ ಭುವನದೀಪನಗಜಾಕಾಂತಂ ॥
ರವಿರುಚಿ ನಿಟಲಂ ಭಾವುಕ।
ಶಿವಮುದ್ರಂ ಸಲಪುಗಾವುಗಂ ವೃಷಪತ್ರಂ ॥೨॥

(ಈ ಕಂದಪದ್ಯದಲ್ಲಿ ಪ್ರತಿಚರಣದ ಕ್ರಮವಾಗಿ ಒಂದು, ಎರಡು, ಮೂರು, ನಾಲ್ಕನೆಯ ಅಕ್ಷರಗಳನ್ನು ಕೂಡಿಸಲು "ಶಿವರುದ್ರಂ" ಎಂದು ಹೊರಡುವದು)

ಸ್ವರ್ಣಮಯ ಮಕುಟದಿಂ ಸ।
ಸ್ವರ್ಣಾನ್ವಿತ ಚಿತ್ರಚೀನಪಟದಿಂ ತೊಡವಿಂ ॥
ವರ್ಣನಮಿಗೆ ಮೆರೆಯುದೆ ಗೋ।
ಕರ್ಣಾಲಂಕಾರಶಂಭುವಸನದಿನೆಸೆದಂ ॥೩॥

ಉ॥ ಮಾ॥ ವೃ॥

ಕಾವಿಯಕಂತೆ ಮಸ್ತಕದ ಪಾವುಡ ಕಂಠದೆ ರುದ್ರಲೋಚನಂ।
ಪಾವುಗೆ ಪಾದದಲ್ಲಿ ಫಣಿಯಲ್ಲಿ ಸದ್ಯೈವ ವಿಭೂತಿ ಧಾರಣಂ ॥
ಭಾವಿಸೆ ಕಚ್ಚಡಂ ಕರದೆದಂಡಮದೀತನ ಸ್ವತ್ತದಾಗೆ ತೇ।
ಜೋವಹ ಭಾವದಂತರದ ಬ್ರಹ್ಮದಮಾಳ್ಕೆ ಜಗಕ್ಕೆತೋರಿದಂ ॥೪॥

ಪೊದೆಯಲ್ಕಾವಿಯ ವಸನಂ।
ಮಿದುವೆಂದೊಡೆ ಪೆಳ್ಕೆಕಂಬಲಂ ಛಿದ್ರಿತಮಾ ॥

ದುದದುಂ ಲೋಕದೊಳೀತನ !
ಸದರ ನಿರಾಡಂಬರಮನದೇಂಬಣ್ಣಿಪುದೋ ||೩||

ಮ|| ಸ್ರ|| ವೃ||

ಋತುಮಾನಂ ಬಂದೊಡೇಂ ಮುಂದೆಸರಿದೊಡಮದೇನೊಂದೆ ನಿರ್ದಿಷ್ಟಮಾಗಿ|
ರ್ದತಿ ಶಾಂತಿಸ್ಥಾನದೊಳ್ತಾಂ ಪವಡಿಸಿದಪನೇವೇಳ್ದಪೆಂ ಮತ್ಕುಣಂಗಳ್ ||
ಹತಿಸುತ್ತಿರ್ಕೆಂದು ಪೇಳ್ವಗ್ರೋರೆದಪನಿವನೇಂಕಾಣೆನಾನೆಂದು ಹಾಸ
ದ್ಯುತಿಯಿಂ ಸರ್ವಪ್ರಪಂಚಂಶಿವನೆನಿಪರಿಗೇಂ ಕ್ಷುದ್ರಕೀಟಂಗಳಿಂದಂ ||೬||

ಮ|| ವಿ|| ವೃ||

ವಿಲಸದ್ಭಕ್ತಶರೀರಮೇ ಮಮಶರೀರಂ ಭಿನ್ನಮಿಲ್ಲೆಂದು ಚಂ |
ದ್ರಲಲಾಮಂ ನಿಗಮಾಸ್ಯದಿಂದೊರೆದವೋಲೀತಂ ಸದಾಸರ್ವದಾ ||
ನಲವಿಂದೊಕ್ಕಲಮುಕ್ಕಳಿರ್ದಡವಿಗಂ ತಾನಾಗಿಯೇಳ್ತಂದು ಮ |
ರ್ಗಲ ಕೈಯಾಳಿನವೋಲವರ್ಗನುವಿನಿಂ ಕೈಯಾಳ್ತೆಯಂ ನೀಡುವಂ ||೭||

ಚಂ|| ಮಾ|| ವೃ||

ಅವರಿವರೆಂಬ ಭಿನ್ನಮನವಂ ಸದೆದಿಕ್ಕಿಸಮತ್ವಭಾವದಿಂ |
ತವಕದೊಳೆಯ್ದಿ ಕಾಯಕದೊಳಾಸರಮಿಲ್ಲಮೊಡರ್ಚಿಬರ್ಪುವಂ ||
ವಿವರಿಸಲೇಸು ಜನ್ಮವಿಡಿದೀ ಸಮಭಾವ ತಿತೀಕ್ಷೆ ನಿಸ್ಪೃಹ |
ದ್ರವಿಣವನಾರ್ಜಿಸಿರ್ದನೊ ಮಹಾಶಿವಯೋಗಕಲಾಪ್ರಭಾವದಿಂ ||೮||

ತ| ಳ|| ವೃ||

ಪರವಿನಾಚಿ ಸುಭಕ್ತಿಭಾವಕೆ ಮೆಚ್ಚಿಶಂಕರನೆಯ್ದಿ ನಾ |
ಣ್ದೊರೆದ ಕುಂಟಣಿಗೆಯ್ದುದೇನರಿದಲ್ತು ಭಾವಿಸಿ ನೋಡಲ ||
ನ್ಯರಣುವಾಶ್ರಯಮಿಲ್ಲದನ್ಯರಸೇವೆಯಂ ಸಮೆವಂಗೆ ತಾ |
ನೊರೆಯೆ ಶಂಕರನೆಂದು ಪಂಡಿತರೊಲ್ದು ಪಾಡಿದರೀತನಂ ||೯||

|| ಚಂ|| ಮಾ|| ವೃ ||

ತಿಳಿಗೊಳದಂತೆ ಕೂಡೆ ಶರದಿಂದುವಿನಂತೆ ಸದಗ್ನಿಯಂತೆ ಚೆ |
ಲ್ವೆಳಗಿನ ಗಾಳಿಯಂತೆ ಶಿವಲಿಂಗವನೀಕ್ಷಿಪ ನೋಟದಂತೆ ಕಂ ||
ಗೊಳಿಸುವ ಚಾರುಬಾಲಸುತಪಸ್ವಿಗಳೂರ್ಜಿತಸಂಗಮೋ ವಿನಿ |
ರ್ಮಳ ಶಿವಯೋಗಿವರ್ಯರೊಡನಾಟಕಿದರ್ಗಳಮೆಂದಿವಂ ಸದಾ ||೧೦||

ಉ॥ ಮಾ॥ ವೃ॥

ಚಿಣ್ಣರಕೂಟಮೇ ಶಿವನಕೂಟಮುವರ್ಗಳ ಬೇಟವೊಂದು ಮು।
ಕ್ಕಣ್ಣನಬೇಟಮಂತವರನೋಟಮೆ ಲಿಂಗದನೋಟಮೆಂದವ ॥
ರ್ಗುಣ್ಣಿಪುದೇಸದಾಶಿವನ ನಲ್ಲುಣಿಸೊಲ್ದುಮುವರ್ಗೆ ನಲ್ಮೆಯಿಂ।
ಪಣ್ಣಿದಬಂಡಿಯಯಾಟಮೆ ಸದಾಸಿವಸಾಟಮುದಾಗಲೊಪ್ಪಿದಂ ॥೧೧॥

॥ ಚಂ॥ ಮಾ॥ ವೃ ॥

ಇಹಪರಮಾರ್ಥಮುಖ್ಯಮೆನಿಪೊಂದಿದಕಜ್ಜಗಳೆಲ್ಲ ಚಿತ್ಸುಖಾ।
ವಹ ಶಿವಪೂಜೆಯಪ್ಪುದು ಗಿರೀಶ್ವರಲಿಂಗಸುನಿಷ್ಠೆಯಿಂದ ಸಂ॥
ದಿಹಶಿವಯೋಗಿಗೆಂದೊರೆವ ವೇದವಚಕ್ರಮದಂತೆ ಶೋಭಿಪೀ।
ಮಹಿತನಲೀಲೆಯಂ ತಿಳಿಯಲಾರ್ಗದುಗೋಚರಮೆಂದು ಪಾಡಿದರ್ ॥೧೨॥

ಬಗೆಯೊಳದೆಂದಿಗುಂ ಪರಪದಾರ್ಥವನರ್ಥವನೆಯ್ದೆ ಸೋಂಕಲಿ।
ಲ್ಲಿಲ್ಲೊಗಪಿನೊಳೊರ್ಮೆಯಾದೊಡಮುಮಂ ಬರಿವಾತುಗಳಾಡಲಿಲ್ಲ ತ ॥
ನ್ನಿಗಮುತುರಂಗಗೆಂದು ನುತಿನಿಂದೆಗಳೇರಿಳಿತರ್ಕೆ ಸಿಕ್ಕಲಿ।
ಲ್ಲೊಗುಮಿಗೆ ಕೀರ್ತಿಗೌರವಕಣಂ ಪರಿದಿಚ್ಛಿಸಲಿಲ್ಲಮುರ್ವಿಯೊಳ್ ॥೧೩॥

ರುಚಿಗತಿಯೊಲ್ದು ಕಾಂಕ್ಷಿಸದದಾವುದುಬರ್ಪುದದಂ ಶಿವಾಜ್ಞೆಯಿಂ।
ರುಚಿಮಯಲಿಂಗಕರ್ಪಿಸಿ ಪ್ರಸನ್ನಪರಾತ್ಪರ ತತ್ಪ್ರಸಾದಮಂ॥
ರುಚಿಮಯಮಾಗೆ ಸ್ವೀಕರಿಸಿ ಬಾಹ್ಯದೊಳಂತರದೊಳ್ಸನೇಮದಿಂ।
ಶುಚಿಮಿಗೆ ತೃಪ್ತಿಗೊಂಡು ಮೆರೆದಂ ಶಿವಲಿಂಗಸುಖಾಮೃತೋದಯಂ ॥೧೪॥

ಮ॥ ವಿ॥ ವೃ॥

ಅಲರಂ ನೋಯಿಸದಂತೆಷಟ್ಚರಣಗಳ್ಬಂಡುಂಬವೊಲ್ಸಂತತಂ।
ನಲವಿಂ ಭಕ್ತನಿವಾಸಕೆಯ್ದಿದೆಡೆಯೊಳ್ನಿರ್ವ್ಯಾಜದಿಂ ಭಕ್ತನಿ ॥
ರ್ಮಲ ಹೃನ್ಮಂಜರಿಯಂ ಮುರುಂಟಿಸದೆ ನೀಡುತ್ತಿರ್ಪ ಸದ್ಭಕ್ತ ಸಂ।
ಕುಲದೊಳ್ಕಾಣಿಕೆಯಾಂತು ಹರ್ಷಗೊಳುವಂ ಭಕ್ತೈಕಸದ್ಬಾಂಧವಂ ॥೧೫॥

ಶಮೆಯಿಂ ಲಿಂಗಸಮರ್ಚೆಯಿಂ ವಿನಯದಿಂ ನಿರ್ವಂಚನಾಚಾರದಿಂ।
ದಮೆಯಿಂ ಸತ್ಯದಿನುಕ್ತನೀತಿಯಿನುದಂಚದ್ಬ್ರಹ್ಮಚರ್ಯತ್ವದಿಂ ॥
ಕ್ಷಮೆಯಿಂ ಧರ್ಮಪರೋಪಕಾರಕೃತಿಯಿಂ ಭಕ್ತರ್ಗೆ ಸಂಸಾರ ಸಂ।
ಕ್ರಮಣಕ್ಕಾಗಿಸಿದಂ ತಪೋಧನಮಹಾಪಾಥೇಯಮಂ ದೇಶಿಕಂ ॥೧೬॥

ಶಾ|| ವಿ|| ವೃ||

ಪ್ರಾತಃಕಾಲದೊಳೇಳ್ದು ಶೌಚವಿಧಿಯಂ ವಿಧ್ಯುಕ್ತದಿಂ ತೀರ್ಚಿ ಸಂ |
ದೀತಂ ತನ್ನವನೀತಬೆಂಚೆಯೆಡೆಯೊಳ್ದ ಸ್ವಾತ್ಯಪಾದಂಗಳಂ ||
ಪೂತಂ ಕೈಮಿಗೆಕರ್ಚಿಯಾತ್ಮಗುರುವಂ ಹೃತ್ತಾಂತದೊಳ್ಧ್ಯಾನಿಸು |
ತ್ತೈತಂದೊತ್ತಿನೊಳಿರ್ಪ ಸುಂದರಶಮೀಭೂಜಾತತನ್ಮೂಲದೊಳ್ ||೧೭||

ಚಂ|| ಮಾ|| ವೃ ||

ಪಲತರಮಪ್ಪ ಪಕ್ಕಿಗಳುದುರ್ಚಿದ ಚಿತ್ರವಿಚಿತ್ರದುಪ್ಪುಳಿಂ |
ನೆಲವದು ಕಣ್ಗೆ ಬಾಸಣಿಸಿದಂತಿರೆ ಸದ್ಗುರುಮಂತ್ರಸಜ್ಜಪ ||
ಕ್ಕಲಸದೆಯಿಲ್ಲಿಗೆಯ್ದಿದಪನಾತಗೆ ಕುಳ್ಳಿರೆಮೆಲ್ಪಿನೊಂದು ಕಂ |
ಬಲಮನೆಸಾಸಿದಂತೆಸೆದುತೋರ್ಪ ನಿಸರ್ಗತದಾಸನಾಗ್ರದೊಳ್ ||೧೮||

ಕುಳತೆಳಗೆಂಪಿನೊಳ್ಕಪಸಿಯಿಂ ವಿಜಿತೇಂದ್ರಿಯತೇಜದಿಂ ಮನಂ |
ಗೊಳೆ ತನಗಾಸನಂಬಲಿದು ಶಾಂಭವಮಂತ್ರನಿಮಗ್ನವಿಗ್ರಹಂ ||
ತಿಳಿವೊಡೆ ಗಂಗೆ ಗೌರಿಯುರುಪದ್ರಕೆ ಪೇಸುತೆ ಯೋಗಿರೂಪದಿಂ |
ದಿಳೆಗಿಳಿದಿಲ್ಲಿ ಮಂಡಿಸಿದನೋ? ಶಿವನೆಂಬವೊಲೊಪ್ಪಿತೋರಿದಂ ||೧೯||

ಮ|| ಸ್ರ|| ವೃ||

ಶಿವಧರ್ಮಾಚಾರ್ಯಪಟ್ಟಂ ದಳೆದುತುಳಿದು ಷಡ್ವರ್ಗದುದ್ವೇಗಮಂ ದು |
ರ್ಭವಮಾಯಾಪಾಶಮಂ ಕೀಳ್ತವಿಚಲಿತವಿರಾಗಾಚಲಂ ಸಾರ್ದುಚಿದ್ರ ||
ತ್ನವನಾಂತುದ್ಯತ್ತದೀಯೋಜ್ವಲತೆಯಬಲದಿಂ ಶೋಧಿಸುತ್ತುಂ ಜಿತಾಂಗೋ |
ದ್ಭವನಂ ಪೊಂದಿರ್ದನಿರ್ಪೊಂದವಸರದೊಳದೇನೆಂಬೆನಾಶ್ಚರ್ಯದುರ್ಬಂ
||೨೦||

ಚಂ|| ಮಾ|| ವೃ||

ವಿತರಣಧೀರ ಸರ್ವಸಮಯೋಪಕೃತಿಪ್ರವಿಲೀನ ಶಂಭು ಭ |
ಕ್ತ್ಯತಿಶಯಭಾವನಾಕಲಿತ ಗೌರವಶಾಲಿ ಧನಾಢ್ಯತೀರ್ಪಿನೊಳ್ ||
ಕೃತಮುಖ ಕೀರ್ತಿವೆತ್ತ "ಕರಿಗೊಣ್ಣವರೆಂಬುವರ"ನ್ವಯಾಬ್ಧಿರಾ |
ಜಿತನವಚಂದ್ರನೊಪ್ಪಿದಪನಿಲ್ಲಿಯೆ "ಗೌಡಪ ಗೌಡನೆಂ"ಬವಂ ||೨೧||

ಮ|| ವಿ|| ವೃ||

ಇರೆಯೊರ್ವಿರ್ಗೀತಗೆ ಮಾರಿಕಾಮಯ ಪುರಪ್ರಾರಂಭಕೆಯ್ದಿರ್ದುದೇ |
ನೊರೆವೆಂ ಬಂಧುಗಳಾತ್ಮಭಾರ್ಯೆತನುಜಭ್ರೋರೆಂದು ಕಣ್ಣೀರ್ಗಳಂ ||

ಸುರಿಸುತ್ತೆಮ್ಮಕುಲಪ್ರದೀಪ ಸವಿಪಿತ್ತಿಂದೆಂದು ನಿಶ್ಚೇಷ್ಟರಾ ।
ಗಿರೆ ತದ್ದುಃಖವನಾಲಿಸಲ್ಕಿವನಮಿತ್ರಂ ಬಂದನಾವೇಶದಿಂ ॥೨೩॥

ಭಾವಜಹರಭಕ್ತಂ ಕೃಷಿ ।
ಜೀವಂ "ರಾಯಾಭಿಧಾನಿ" ಬುಳಗೊಣ್ಣನವರ್ ॥
ಭಾವಸುಮುಗ್ಧಂ ತದ್ಗುರು ।
ದೇವನಕರುಣಾಕಟಾಕ್ಷಪಾತ್ರಂಪುತ್ರಂ ॥೨೪॥

ಸಂತಪಿಸುವ ವರ್ಗಕ್ಕಿವ ।
ನಂತಂಗೊಳ್ಳುವ ಶರೀರವಿಡಕೇಕಿನಿಸುಂ ॥
ಚಿಂತಿಪುದೆನುತ್ತವಂದಿರ ।
ರಂ ತಡೆದಾತ್ಮಗುರುಸತ್ರಕೆಯ್ತಂದಾಗಳ್ ॥೨೫॥

ಕುಂಬಿಟ್ಟು ಗುರುಪದಾಜ್ಜಕೆ ।
ನಂಬಿದಭಕ್ತರಕುಟುಂಬಿ ನೀನಲ್ತೆ ದಯಾ ॥
ಲಂಬನದಿಂ ತದ್ರೋಗಿಯ ।
ನಿಂಬಂಮಿಗೆಪಾಲಿಸೆಂದು ಪ್ರಾರ್ಥಿಸಲಾಗಳ್ ॥೨೬॥

ಶಾ|| ವಿ|| ವೃ||

ಸಾಯಂಕಾಲಕೆಬರ್ಪುದೆಂದು ಗುರುದೇವಂ ಸೂಚಿಸಲ್ಕಂಕೆಯಿಂ ।
ರಾಯಾಖ್ಯಂ ತದನುಜ್ಞೆಯಿಂಮಗುಳ್ದು ಚಿಂತಾಕ್ರಾಂತದಿಂ ಮತ್ತೆ ತ ॥
ತ್ಸಾಯಂಕಾಲಸಮರ್ಚನೆಗೆಯ್ವಸಮಯಕ್ಕೇಳ್ತಂದು ಬಿನ್ನೈಯ್ಸೆ ನಿ ।
ರ್ಮಾಯಂ ಶಾಂಭವಪೂಜೆಪೂರಿಸಿತೆನುತ್ತಾದೇಶಮಂ ನೀಡಿದಂ ॥೨೭॥

ಚಂ|| ಮಾ|| ವೃ||

ಸಕಲಚರಾಚರವ್ರಜಮನಾಂತು ದಶಾಂಗುಲವೆರ್ಚಿಯೊಪ್ಪುತಿ ।
ರ್ಪಕಹರಲಿಂಗರೂಪಕಶರೀರಿಯೆ ತಾನಿರೆ ಮತ್ತೆಲಿಂಗಮುಂ ॥
ಪ್ರಕಟದೆ ಕೇಳ್ದುಪೇಳ್ದುದಪಹಾಸ್ಯಮೊ ? ತಚ್ಛಿವಲಿಂಗಪೂಜೆಯಿಂ ।
ಸುಕರ ಸದರ್ಥಸಿದ್ಧಿ ತನಗಪ್ಪುವುದೆಂಬುದನಿಂತು ಪೇಳ್ದನೋ ॥೨೮॥

ಎನೆ ರಾಯಾಖ್ಯಂ ಮನದೊ ।
ಳ್ನೆನೆದಂ ಗುರುಮೂರ್ತಿಲೀಲೆಯಂ ಶಿವಲಿಂಗಾ ॥

ರ್ಚನೆಯೊಳ್ಪಂ ಭಾವಿಸುವರೆ ।
ಮನುಜಾಕಾರದದ್ವಿಪಾದಪಶುಕುಲಗಣ್ಯರ್ ॥೨೮॥

ಗುರುವಾಜ್ಞೆಯಂತೆ ಬೆಳಗಿನೊ ।
ಳಿರದಾತನ ಪ್ರಾಣಪಕ್ಷಿನೆಗೆಯಿತು ತಾನ ॥
ಚ್ಚರಿಯೆನೆ ನೆರೆದರ್ತದ್ಗುರು ।
ವರಲೀಲೆಯತರ್ಕ್ಯಮೆಂದು ಸಂಕೀರ್ತಿಸಿದರ್ ॥೨೯॥

ಮ॥ ವಿ॥ ವೃ॥

ಇವನೊರ್ವೊರ್ವೆ ಶಿವಾರ್ಚನಾವಸರದೊಳ್ರೋಮಾಂಚನಂ ಮೂಡೆ ಶಾಂ ।
ಭವನಿರ್ಮಾಲ್ಯಮಹಾಪ್ರಸಾದವೆನುತಂ ಚೇತಃಸರೋಜಾತದೊಳ್ ॥
ಶಿವನಂಧ್ಯಾನಿಸಿ ಪ್ರೋಜ್ವಲಾಗ್ನಿಕಣಮಂ ಹಸ್ತಾಬ್ಜದಿಂ ನೆತ್ತಿದೆ ।
ಲ್ಲವನೇನೆಂದಪೆನತ್ಯಮೋಘಗುರುಲೀಲಾಜಾಲಮಂಶೀಲನುಂ ॥೩೦॥

ಖಳ ಗೌಳತಪಸ್ವಿಗಳ ।
ಗ್ಗಳಶಿವಗರ್ಪಿತಸುಮಂಗಳಂ ಸೀಯಲದಂ ॥
ಮೆಲಿದಂ ಭೂತಿಯನೋಹಿಲ ।
ನಲಸದಿವಂ ವಹ್ನಿಕಣಗಳಂ ಕಬಳಿಸಿದಂ ॥೩೧॥

॥ವಿಬುಧಪ್ರಿಯಾವೃತ್ತಂ॥

ವೀರಭದ್ರನದೊರ್ವೆ ಶೀಳ್ದಿದನೆನ್ನಜಿಹ್ವೆಯನಾರ್ಪಿನಿಂ ।
ಧೀರದೇಶಿಕಹಸ್ತಮಂ ಸುಡಲಾರ್ಪಿನಿಂದುರಿದೇಳ್ದು ದು ॥
ರ್ವಾರಚಿನ್ಮರುತಾಪ್ತನಿಂ ಸುಡುತಿರ್ಪನೆಂದತಿ ಭೀತಿಯಿಂ ।
ಮಾರುತಾಪ್ತನತೀವ ಶೀತಲಮಾಂತನೆಂದೊಡೆಸಲ್ಲುಗುಂ ॥೩೨॥

ಶರ್ವನ ಸತ್ಯಾಸನದೊ ।
ಳ್ಗುರ್ವಾಶೀರ್ವಾದದಂತೆ ಪುಸಿಯಂ ನುಡಿತಾ ॥
ನುರ್ವಿಯೊಳೆಂದುಂ ಪೊರ್ದದೆ ।
ಪರ್ವಿವಿರಾಜಿಸಿತು ಸತ್ಯದಿಂಗುರುವರನೊಳ್ ॥೩೩॥

ನಾಲಗೆ ನಾಲ್ಕಿಹ ವಿಧಿಯುಂ ।
ನಾಲಗೆ ಪತ್ತಿರ್ಪರಾವಣೇಂದ್ರಂ ಸಾಸಿರ್ ॥

ನಾಲಗೆಫಣಿರಾಜಂ ಪ ।
ರ್ಯ್ಯಾಲೋಚಿಸಲೊಂದೆನಾಲಗೆಯಿವಂಗೆಣೆಯೇ ॥೩೪॥

ಸುಖದುಃಖೋಭಯಮರಿಯ ।
ಲ್ಕಖಂಡಜೀವತತಿಗೇಕಮುಖಮೆಂದು ಹಸ ॥
ನ್ಮುಖದಿಂ ಜಲಮಿತ್ತೋವುವ ।
ನಖಿಲಪ್ರಾಣಿಕರುಣಾಳು ಚಟಕೋತ್ಕರಕಂ ॥೩೫॥

॥ ಮ॥ ಸ್ರ॥ ವೃ ॥

ಶಿವದೀಕ್ಷಾಲಗ್ನ ಮುಖ್ಯಾಂಗ ಶುಭಸಮಯದೊಳ್ಭಕ್ತರೊಲ್ದಿತ್ತ ತದ್ವಿ ।
ತ್ತವನಂತೇವಾಸಿಗಂ ಸ್ವೀಕರಿಸಲುಸಿರುತಿರ್ದಂ ಕರಾಂಭೋಜದಿಂ ಕೊ ॥
ಳ್ಳುವಮಾತೊಂದಿರ್ಕೆ ಕಣ್ಣೆತ್ತಿವನದನೊಲಿದಾವಾಗಳುಂ ನೋಡಲಿಲ್ಲಂ ।
ಭುವಿಯಲ್ಲೀಲೇಖಕಂ ಕಂಡರಿದನುಭವಮುತ್ಯುಕ್ತಿಯಲ್ತಲ್ತುಸತ್ಯಂ ॥೩೬॥

ದ್ರವಿಣವ್ಯಾಮೋಹದಿಂದೈಲಬಿಲನಸಖನಂ ಮಾಡಿಕೊಂಡಂಶಿವಂ ಮಾ ।
ಧವನಾ ಶ್ರೀಯಂ ಮುದಂಬೆತ್ತಿರದೆ ಕಟಿಯೊಳಿಂಬಿಟ್ಟುಕೊಂಡಂ ನಿರಾತಂ ॥
ಭುವಿಬಾಹ್ಯಪ್ರಾಣಮಾಗಿರ್ಪಧನಮಹತಿಯಿಂತಿರ್ದೊಡೀಯೋಗಿ ತದ್ವಿ ।
ತ್ತ ವಿರಾಗೋದ್ವೃತ್ತಿಯಂ ಬಣ್ಣಿಸಲರಿದೆನುತುಂ ಪಂಡಿತರ್ಪಾಡುತಿರ್ದರ್
॥೩೭॥

ಶಾ॥ ವಿ॥ ವೃ॥

ಪೆಣ್ಣಿಂಗಾಶಿಸಿ ವಿಷ್ಣುಹತ್ತುಭವದೊಳ್ಬಂದಂ ಸ್ವಯಂಪುತ್ರಿಗಂ ।
ಕಣ್ಣಿಟ್ಟಾತ್ಮಶಿರೋಬ್ಜಮಂ ಕಳೆದುಕೊಂಡಂಹಂಸಪತ್ರಂನಿಜಂ ॥
ಬಣ್ಣಂಗೆಟ್ಟನವಂಬಿಡೌಜರರಸಂ ಸನ್ಯಾಸಿಸಾಮರ್ಥ್ಯಮಂ ।
ಮಣ್ಣಂಮುಕ್ಕಿಸಿದತ್ತುಪೆಣ್ವರಿಜಮೇಂ ಸಾಮಾನ್ಯಮೇ ಮತ್ತೆಕೇಳ್ ॥೩೮॥

ಪೆಣ್ಣೇಲೋಕದಕಣ್ಣದೆಂದುಲಿವರಾ ಮಾತೊಂದುಮಂತಿರ್ಕೆಮು।
ಕ್ಕಣ್ಣಂ ತಳ್ತಮರ್ದಪ್ಪಿಬಿಟ್ಟಗಲದಂತಾವಾಗಳಾಮೋದದಿಂ ॥
ಪೆಣ್ಣರ್ಧಾಂಗದೆ ಬೈತುಕೊಂಡನೆನಲಾ ಪೆಣ್ಣೆಂಬುದಂ ಭಾವದೊ ।
ಳ್ಮಣ್ಣಿಂಮಾಡಿದಬೊಂಬೆಯೆಂದರಿದನೇಂ ವೈರಾಗ್ಯಸಂಪನ್ನನೋ ॥೩೯॥

ಚಂ॥ ಮಾ॥ ವೃ॥

ಕಲಶಭವಂ ಮಹಾಗಹನಮಧ್ಯದೊಳಿರ್ದನಿಲಾಂಬು ಕಂದಮಂ ।
ಮೆಲಿದು ಸರಿದ್ವಧೂಪತಿಯನೀಂಟದುದೇನರಿದಲ್ತು ಲೋಕದೊಳ್ ॥

ನೆಲಸಿ ಸುಭಕ್ಷ್ಯಮಮಂ ಮೆಲಿದು ನಿರ್ವಿಜಿತೇಂದ್ರಿಯಮೂರ್ತಿಯೀತನೋ ?।
ನೆಲದೊಳಗಾ ಘಟೋದ್ಭವನೋ? ಭಾವಿಸಲೀರ್ವರೊಳಾರೊ ಬಲ್ಲಿದರ್ ॥೪೦॥

ಮ॥ ವಿ॥ ವೃ॥

ಕೆಲವಗ್ರಾರ್ಮದೊಳಿರ್ಬರ್ಣಂಬಲಿಸಿ ದ್ವೇಷಾಸೂಯದಿಂ ಕೇಡಿಗ ।
ರ್ಘಲದಿಂ ನಿರ್ನೆರ ಕುಂದನೂಹಿಸಿದರೌದಾಸೀನ್ಯದಿಂ ನೋಡಿದರ್ ॥
ನಲಿದರ್ಜಂಕಿಸಿ ಕೋಪದಿಂದರಚಿದರ್ಮರ್ವೋಕ್ತಿಯಿಂ ಕಂಡವೊ ।
ಲ್ನೆಲೆಯಂಗಾಣದೆಯಾತ್ಮದೋಷಬಲದಿಂ ರೋಡಾಡಿದರ್ಕಾಡಿದರ್ ॥೪೧॥

ಮ॥ ಸ್ರ॥ ವೃ॥

ಪುಸಿವ್ಯಾಜ್ಯಂಪೂಣ್ದು ನ್ಯಾಯಾಲಯಕಳುಕದವಸ್ಥಾರ್ನವಮಾನಂಗಳೊಂದಂ।
ನಸುಮಾತ್ರಂ ಭಾವದೊಳ್ತಾರದೆ ಕರೆಸಿದರ್ವಿಘ್ನಕಾಂತಾರದೊಳ್ನೂಂ ॥
ಕಿಸಿದರ್ಕೈವೊಯ್ದುನಕ್ಕಾಡಿದರಿದನರಿದೆನ್ನಾತ್ಮಮಿನ್ನಕ್ಕರಂ ತಾ ।
ಪಿಸುಗುಂ ಜ್ಞಪ್ತಿಂಗೆ ತಂದಾಕ್ಷಣಮೆ ಶಿವಶಿವಾ ದುಷ್ಟರೇಗೆಯ್ಯದಿರ್ಪರ್ ॥೪೨॥

ಉ॥ ವಿ॥ ವೃ॥

ಪುಳಿಯಿಂಪಾಲು ವಿಕೋಪದಿಂಘನತಪಂ ಲೋಭತ್ವದಿಂಸದ್ಗುಣಂ ।
ನಳಿನಂಮಂಜಿನಿಂಬುದಂಮರುತನಿಂ ದುರ್ನಿಂದೆಯಿಂಗೌರವಂ ॥
ಖಳರಿಂ ವಂಶದಕೀರ್ತಿಮಗ್ಗಳಿಕೆಗಳ್ಕುಂದೊಂದಿಪಾಳಾಗುವೊ ।
ಲ್ಪೊಳಲೊಳ್ದುಷ್ಟದುರಾತ್ಮಕೀಟಕರಿರಲ್ಪಾಳಾಗದೇಂ ಪೋಕುಮೇ ॥೪೩॥

ಚಂ॥ ಮಾ॥ ವೃ॥

ಪಡೆದವಳೊಲ್ದು ಬಾಲಕನ ನಾರಕಮಂ ತೆಗೆವಲ್ಲಿ ಮೂಗುಮು ।
ಚ್ಚಿಡಿಗಿದ ದುರ್ಮಲಂದೆಗೆಯುವಳ್ಕರದಿಂದುಪಕಾರಮಿಲ್ಲದೆ ॥
ಮ್ಮಡಸಿದ ಪಾಪದುರ್ಮಲವನಾತ್ಮರಸಜ್ಞೆಯಿನುಜ್ಜಿ ನಿರ್ಮಲಂ ।
ಗುಡುತಿಹ ಸಿಂದಕರ್ಜನನಿಗಗ್ಗಳಮೆಂದೊಡೆ ತಾನೆಸಾಲದೇ ॥೪೪॥

॥ ಅತಿಶಾಯಿಸೀವೃತ್ತಂ ॥

ಪರರೈಸಿರಿಯಂ ಕವರ್ದುದಿಲ್ಲ ಪರರಿಂಗೆ ಕೇಡಂ ।
ಮರೆತಾದೊಡಮುಂ ನೆಗಳ್ದುದಿಲ್ಲ ಪರಹಂಗದಿಲ್ಲಂ ॥
ಕೊರಚಾಟಮದಿಲ್ಲ ನಿರ್ನೆರಂ ಬಿಡದೆಡಗರ್ಳಂದು ।
ರ್ಚರಿತ್ತರೆನಲ್ಕೆವೇಚ್ಛೆಲಂಘಿಸಲದಾರ್ಗೆಬರ್ಕರ್ಮಂ ॥೪೫॥

ಓಡಮು ಬಲ್ಲುದೆ ರುಚಿಯುಂ ।
ಕೊಡಗಮೇಂಬಲ್ಲುದೆ ಸೆಳೆಮಂಚದ ಸೊಗಮುಂ ॥
ನೋಡಲ್ಲಿ ರಿಶಾಕೃತಿಯೊ ।
ಳ್ಮೂಡಿದ ಗುರುತೇಜಮನರಿವರೆ ಜಗದೆಗ್ಗರ್ ॥೪೭॥

ಅಳಲಿಸಿ ಬಳಲಿಸಿ ಗುರುವಂ ।
ತಿಳಿಗೆಟ್ಟರ್ಬಳಲುವಂತೆ ಗುರುಬಳಲ್ದಪನೇ ॥
ನಳೆಯಳೆದಂತಳೆದರ್ತಾಂ ।
ಬಳಲ್ದಪರಲ್ಲದೆ ಕೊಳಗಮದೇಂ ಬಳಲ್ದಪುದೇ ॥೪೭॥

ನಡೆತಂದೊಡೆ ಕುಳಿತೊಡೆ ಪೋ ।
ದೊಡೆ ಮೇಣ್ಬಿಡದುಸಿಕನಿರ್ದೊಡಂ ಮುನಿಸಿಂಕೆಂ ॥
ಗಿಡಿಗೆದರಿ ಕಾಡಿದರ್ಬೆಂ ।
ಬಿಡದೆ ಮಹಾತ್ಮರಚರಿತ್ರಮೀವಿಧಮಲ್ತೇ ॥೪೮॥

ಚಂ॥ ವಾ॥ ವೃ॥

ತ್ರಿಪುರವನಂಬುಜಾಕ್ಷತನುಸಂಭವನಂ ಸುಡುತಿರ್ಪಕಾಲದೊ ।
ಳ್ಕುಪಿತವನಾಳ್ದಿದಂಪರಶಿವಂ ಸುವಿಚಾರಿಸೆ ತದ್ಗುರೂತ್ತಮಂ ॥
ಕುಪಿತವನಾಂಪುದೊಂದೆಡೆಗದಿರ್ಕೆ ವಿಕೋಪದಶಬ್ದ ಶಬ್ದಕೋ ।
ಶ ಪುಟದೊಳಲ್ಲದೀತನ ಮನೋಬ್ಜದೊಳುಣ್ಮದಲಿತ್ತು ಸಂತತಂ ॥೪೯॥

ಏರಿಳಿತದೆನ್ನಶಾಂತಿಯು ।
ಮೇರಿಳಿತಗಳೊಂದುಪೊಣ್ಮದೀತನಸ್ಥಿರಸಂ ॥
ಪೂರಿತಸಾತ್ವಿಕಶಾಂತಿಂ ।
ಗೋರ್ಠಗೆಯಲ್ತೆಂದುಡುಪತಿ ನೈಗೆಟ್ಟಳಿದಂ ॥೫೦॥

ಪೆರತೊಂದು ಲೀಲೆಯಂ ಬಿ ।
ತ್ತರಿಪೆಂ ಲಿಂಗಸ್ಮರಣದೊಳಿರ್ಪವಸರದೊಳ್ ॥
ಭರದಿಂದೇಳ್ದೊರ್ಮೆಗಿವಂ ।
ಪೊರಗಿರದೇಳ್ತಂದುನಿಂದು ಮಠದಂಗಣದೊಳ್ ॥೫೧॥

॥ ಚಂ॥ ಮಾ॥ ವೃ ॥

ಪುಳುಕೊರೆದರ್ಕಕಾಷ್ಠಮಿಳೆಯಲ್ಲದು ಬೀಳ್ದಿರೆಕೊಂಡು ನೆಟ್ಟದಂ ।
ಕುಳಿಯೊಳೆ ಪಾತಿಯಂರಚಿಸಿ ನೀಸೆರೆದೋವುದುಮಲ್ಪಕಾಲದೊಳ್ ॥

ನಳಿನಳಿಸೇಳ್ದು ಮೊಗ್ಗೊಡೆದು ಪಲ್ಲವಿಸುರ್ವಿಪೊದಳ್ದುಪರ್ಚೆ ಕಂ ।
ಗೊಳಿಪ ಪವಾಡ ಸದ್ಗುರುಸಮಾಧಿ ಯಶಂಬಡೆದಿಲ್ಲಿ ರಾಜಿಕುಂ ॥೫೨॥

ತನ್ನೊಳ್ತಾನುಚ್ಚರಿಸಿದ ।
ನಿನ್ನೇನಾಶ್ಚರ್ಯಮೆಂದು ನೆರೆದವರೆಲ್ಲರ್ ॥
ಪನ್ನಳಿನಕೆರಗಿ ಭಯದಿಂ ।
ಬಿನ್ನವಿಸಲ್ದೇಶಿಕಾಬ್ಧಿರಾಕಾಚಂದ್ರಂ ॥೫೩॥

ಮ॥ ಸ್ರ॥ ವೃ॥

ಗುರುಲೀಲಾರಂಗಭೂಮಿ ಪ್ರಚುರ ಪರಶಿವಾದ್ವೈತಶಾಸ್ತ್ರಾರ್ಥಪೌರಾ ।
ಣ ರಸಂಗೊಂಡಿರ್ಪರ್ಧರ್ಮಪ್ರವಚನಪಠನಂ ಬ್ರಹ್ಮಪೈಶಾಚ ರೋಗೋ ॥
ತ್ತರಣಂ ನಾನಾವಿಧಾಭೀಷ್ಟದುದಯದನೆಲಂ ವಾರ್ಷಿಕಸ್ಯಂದನಂ ಮೇ ।
ಐರಿಯಲ್ತಾನಿಲ್ಲಿಯೇ ತೋರ್ಕುಮನುತೆ ಭವಿಷದ್ವಾಣಿಯಿಂಪೇಳ್ದನೀತಂ ॥೫೪॥

ಗುರುಕರಸಂಸ್ಪರ್ಶನದಿಂ ।
ಕೊರಡುಂಕೊನರುವದೆನಿಪ್ಪ ನಿಗಮೋಕ್ತಿಯವೋ ॥
ಲರಿಯಲ್ಕೊರಡು ಕೊನರಿತ ।
ಚ್ಚರಿಯೆಂದು ಸಮಸ್ತಭಕ್ತರುದ್ಘೋಷಿಸಿದರ್ ॥೫೫॥

ದುರಿತದುರಾತ್ಮಕನಾಂ ನೀಂ ।
ದುರಿತಾಂಬುಜವನಮದೇಭನಾಂಕಠಿನಂ ನೀ ॥
ನುರುಮೃದುವಾಂತನುಜಂನೀಂ ।
ಪೊರೆವಾಳ್ದಂಪೊರೆ ನಿರಂತರಂಶಿವರುದ್ರ ॥೫೬॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ಪಂಚ
ಮಾಶ್ವಾಸಂ

—ಸಮಾಪ್ತಂ—

॥ ಶ್ರೀಮದೇಕೋರಾಮಂವಂದೇ ॥

## ಷಷ್ಠಾಶ್ವಾಸಂ.



ಶ್ರೀವೀರಶೈವ ಚಿದ್ಬೋ।
ಧವಂ ತದಂತಸ್ಥಸಾರಮಂ ನಿರವಿಸಿದಂ ॥
ಪಾವನನಿಜಗುರುತನಗಿ।
ತ್ತೋವಿದ ತತ್ಸಂಪ್ರದಾಯ ಬೋಧಾಗತಿಯಿಂ ॥೧॥

ಪತಿತಾವನಶೀಲಂ ಫಣಿ।
ಪತಿಭರಣಂ ಬಲರಿಪುವರದಂ ಭವಸಂತಾ ॥
ಪ ತಿಮಿರರಜನೀಶಂ ಯತಿ।
ಪ ತಿಲಕನೀವುಗೆ ಮಹದಪವರ್ಗಾಮೃತಮಂ ॥೨॥

(ಈ ಕಂದಪದ್ಯವು ಯಮಕ ಪ್ರಾಸಿಸಿಂದಲೂ ಪವರ್ಗಾಕ್ಷರಗಳಿಂದಲೂ ಹೆಣೆಯಲ್ಪಟ್ಟಿದೆ)

ಹಿಗ್ಗದೆ ತಗ್ಗದೆ ಯೆಗ್ಗರ।
ಮೊಗ್ಗರದೊಳ್ನುಗ್ಗದೆಯಿವನಗ್ಗಳನಡೆಯಿಂ ॥
ಬಗ್ಗದೊವಲುಡಿಯನಂ ನುತಿ।
ಪಗ್ಗಳಿಕೆಯ ಸುಗ್ಗಿಯಲ್ಲಿಯೊಗ್ಗಿರುವಾಗಳ್ ॥೩॥

॥ ಗೀತಿಕೆ ॥

ಎಂದಿನಂತೆ ಭಸಿತಾಳಿಕ ಭಕ್ತ।
ರ್ಬಂದು ಪದಾಂಬುಜಾತಕ ವರ್ಸಾ ॥
ನಂದದೊಳೆಯ್ದಿ ಮಣಿದು ಭಕ್ತಿಯಿಂದಂ।
ನಿಂದೊರೆದರ್ನಯಭಾವಭೂಷರ್ ॥೪॥

ಚಂ॥ ಮಾ॥ ವೃ ॥

ಎಲೆಗುರುದೇವ ಘೋರ ಭವ ಸಂಕಟಕಳ್ಕಿ ಬೆಳರ್ತುಬೆಂದು ನೊಂ।
ದಲಸಿ ಭವತ್ಪದಕ್ಕೆ ಭವತಾರಣಕೆಂದು ಶರಣ್ಗೆ ವಂದೆವಾವ್ ॥

ಮಲಹರದೀಕ್ಷೆಯಂಗೊಳಿಸಿ ಮಂತ್ರಸದರ್ಥವನೆಯ್ದೆ ಪೇಳ್ದು ದು ।
ರ್ಮಲಿನ ಶರೀರಮಂ ಸಫಲಮಂಗೊಳಿಸೆಂದುಮವಂದಿರರ್ಥಿಸಲ್ ॥೫॥

ಭವಸಂತಾಪಾಗ್ನಿಯಿಂ ಮುಕ್ತರೆನಿಸಲೆಳಸಿರ್ದೀ ಮಹತ್ಪುಣ್ಯಬಾಹು ।
ಲ್ಯವನಾವ್ಯಾರ್ಗವರ್ಣಿಪರ್ನಿಮ್ಮವೊಲಿತರರಿಗೇಂಸಾಧ್ಯಮೇ ಬರ್ಕುಮೇ ಮೋ॥
ಹವಿಲೀನಾತ್ಮರ್ಗೆ? ಮೇಣ್ಸದ್ಗುರುವರನನಿಶಂ ಭಕ್ತರುದ್ಧಾರಕೆಂದೀ ।
ಭುವನಕ್ಕೇಳ್ತಂದುಮೂಡಿರ್ಪನಿದು ನಿಸದಮೆಂದಾಮುದಂಬೆತ್ತುಮಾಗಳ್ ॥೬॥

ಚಂ॥ ಮಾ॥ ವೃ॥

ಸತಿಯಳಿಗಾತ್ಮವಲ್ಲಭನಮಾಳ್ಕೆ ಸ್ವಧರ್ಮರಹಸ್ಯಮಂ ಪರ ।
ರ್ಮತಿವಿುಗೆಪೇಳ್ದೊಡೇಂ? ಪತಿಗಳಪ್ಪರೆ ಶುದ್ಧಪರಂಪರಾಗತೋ ॥
ನ್ನತಗುರುಪೂರ್ವದಲ್ಲೊರೆದ ಧರ್ಮವನಿನ್ನುಳಿದಿರ್ಪ ದುಷ್ಟದು ।
ರ್ಮತಿಗಳ ಬೋಧೆಸಮ್ಮತಮದಾದೊಡಮುಂ ಗುರುವಪ್ಪರೇನವರ್ ॥೭॥

ವಚನ ಬ್ರಹ್ಮಾನಂದರ ।
ಕುಚೋದ್ಯವಚನೋಪದೇಶಕೊಲಿಯದೆ ನೆಲದೊಳ್ ॥
ಶುಚಿ ಸಂಪ್ರದಾಯಕ ಲಸ ।
ತ್ಸುಚುರಗುರುವನಾಳ್ದರೆಂದು ಹರ್ಷಿಸಿಮನದೊಳ್ ॥೮॥
ಶಿವದೀಕ್ಷೆಗೆ ಮೊದಲಾಗನು ।
ನಿವಹಾಗತಸಮ್ಮತ ನಿಜದೀಕ್ಷಾಸಾರಾಂ ॥
ಶವನಾತ್ಮಲಿಂಗ ಪತಿಯಿಂ ।
ತವನೊರೆದಪನಂತರದೊರೆದಪನಿವಂ ಸ್ಫುರಿಸಲ್ ॥೯॥

ಚಂ॥ ಮಾ॥ ವೃ॥

ತನುಮನಭಾವಮಂ ಮುಸುಕಿಮೊಂದಭಿಮಾನಕೆ ಶೈವಶಾಸ್ತ್ರವಿ ।
ಜ್ಞನಮಲವೆಂಬರಾ ಮಲಮದಾಣವ,ಮಾಯಿಕಕಾರ್ಮಿಕಾ,ಖ್ಯಯಿಂ, ॥
ಜನಿಯಿಸಿ ಮೂದೆರಂದಳೆದಿರ್ಕು ನಿಜಾತ್ಮದಶಕ್ತಿಯುಳ್ಗಿಕುಂ ।
ತನುಗತ ತನ್ಮಲಂಗಳ ವಿಚಾರವನಾಲಿಪುದೆಯ್ದೆ ಪೇಳ್ದಪೆಂ ॥೧೦॥

ಮ॥ ಸ್ರ॥ ವೃ॥

ಮೃಡನೋತಪ್ರೋತ ಪೂರ್ಣತ್ವದಿರವಿಗರಿಯಲ್ಕೇತು ತಾನಾಗಿ ಭಾವಂ ।
ಬಿಡಿದಿಚ್ಛಾಶಕ್ತಿ ಸಂಕೋಚಕೆಳಸಿ ಜಡದಿಂ ಜೀವಗಾನೀಶನೆಂಬ ॥

ಕೊಡನಾಡುತ್ತಿರ್ಪ ದುರ್ವಾಸನೆಯನುಣುವ ದೇಹಾದಿ ಸರ್ವಸ್ವಮಂಮೇ ।
ಣ್ಣಡುಸತ್ಯಂದೋರ್ಪುದಿಂತಾಣವಮಲಮಿದವಿದ್ಯಾಮಹಾಮೋಹಯುಕ್ತಂ
॥೧೧॥

ಬಳಿಕಂಮಾಯಾಮಲಂ ಚಂದ್ರಧರನಿಗಿಹ ಸರ್ವಜ್ಞತಾ ವೃತ್ತಿಗೆಂದುಂ ।
ತಿಳಿಯಿಲ್ಲದ್ಧೇತುವಾಗಿರ್ದುಮಿಸಗುತಿಹ ಚಿಚ್ಛಕ್ತಿವಿಸ್ತಾರದಂಶಂ ॥
ಗಳಿಯಲ್ಕಿಂಚಿಜ್ಞನಾನೆಂಬುವಚಲಮನವಂ ಜೀವಗಂದೆತ್ತುಸೂಕ್ಷ್ಮಂ ।
ದಳೆದುದ್ಯದ್ದೇಹದಿಂದಂ ಮನವಿಡಿದುರಿ ಷಟ್ತ್ರಿಂಶತ್ತತ್ವಸಂಯುಕ್ತಮಿರ್ಕುಂ ॥೧೨॥

ವ॥ ವಿ॥ ವೃ॥

ಪಚಿಸಲ್ಕಾರ್ಮಿಕದುರ್ಮಲಂ ಶಿವನಿಗಾ ಸರ್ವಕ್ರಿಯಾ ಶಕ್ತಿಸಂ ।
ಕುಚಿತಂ ಬೊಂದಲದಕ್ಕೆಮಾರ್ದಳೆದು ಕಿಂಚಿತ್ಕರ್ತೃತಾ ಶಕ್ತಿಯೊಳ್ ॥
ವಿಚಲಂಗೊಳ್ಳದಲಿರ್ಪ ಜೀವನರಿಯಲ್ಕರ್ಮಂಗಳಂ ಭೋಗಿಪಂ ।
ಪ್ರಚುರಂ ತಾನಿದು ಪಂಚವಿಂಶತಿ ಸುತತ್ವಾಲೋಕದಿಂತೋರುಗುಂ ॥೧೩॥

ವಿಶದಂಮುತ್ತಿದ ಮುಮ್ಮಲಂಗಳಿನಿವಂ ಜೀವಾತ್ಮನಿಂತಾವಗಂ ।
ಪಶುಭಾವಾನ್ವಿತನಾಗಿ ಬೆಂಬಿಡದೆ ಸಂಸಾರಾಬ್ಧಿಯಾಘಾತಕಂ ॥
ವಶನಾಗುತ್ತಮನಂತಜನ್ಮತತಿಯೊಳ್ಸಾಲಿಟ್ಟ ಸಂತಾಪದಿಂ ।
ಕೃಶಗೊಂಡೀತನಿರಲ್ಪಶುತ್ವಮಯಭಾವೋತ್ತಾರಣೋದ್ದೇಶದಿಂ ॥೧೪॥

ಮ॥ ಲಿ॥ ವೃ॥

ದೀಕ್ಷೆಯೆಂಬ ವಿಧಾನಮುಂಟು ಮಲತ್ರಯಂಗಳ ದೋಷಮಂ ।
ತಕ್ಷಣಂ ಸದೆದಿಕ್ಕಿ ಚಿತ್ಸುಖಮೀವ ಸಂಸ್ಕೃತಿಪಾವನಂ ॥
ತ್ರ್ಯಕ್ಷನನ್ವಯಕಾದಿಯಿಂ ವಿಧಿವೆತ್ತುಸಕ್ರಮದಿಂದೆ ಸಂ ।
ವೀಕ್ಷಿಸಲ್ತ್ರಿವಿಧಾನದಿಂದದುಮಿರ್ಕುಪೇಳ್ದಪೆನೆಂತೆನಲ್ ॥೧೫॥

ತನುಗಿಷ್ಟವನೊಂದಿಸೆ ಪಾ ।
ವನ ಕ್ರಿಯಾದೀಕ್ಷೆ ಸೂಕ್ಷ್ಮಕಂವೇಧಿಪುದೆ ॥
ಮನುದೀಕ್ಷೆ ಭಾವಕನುವಿಂ ।
ಘನಮೆನೆ ಸಂಬಂಧಿಸುವುದೆ ವೇದಾದೀಕ್ಷಂ ॥೧೬॥

ಮ॥ ಸ್ರ॥ ವೃ॥

ಬರಿದೆಂದುಂ ವೀತಕಾಮಾತ್ಮರನುಳಿದಿತರರ್ಗಾರಯ್ಯಲ್ಮುಕ್ತಿಮಾತಂ ।
ಸ್ಫುರಣಂತಾಂಗೊಂಡುದಿಲ್ಲಂ ಬಳಿಕಮವಗೆ ದೀಕ್ಷಾಸುಸಂಸ್ಕಾರಮಿಲ್ಲಂ ॥
ಹರದೀಕ್ಷಾಚಾರಮಂಪೊರ್ದದಿರಲಣಗದುಂ ಮುಮ್ಮಲಂ ಮುಮ್ಮಲಂ ಸಾ ।
ದ್ರಿಕೆಚಿದ್ಭಾನೂದಯಂ ಕಾಣದದರಿನರಿಯಲ್ಮುಕ್ತಿಮಾತೆಂಬುದಿಲ್ಲಂ ॥೧೭॥

ಚಂ॥ ಮಾ॥ ವೃ॥

ಹರಮನುಬೋಧೆಯಷ್ಟಕವಚಕ್ರಮುಬೋಧೆ ನಿಜೇಷ್ಟಲಿಂಗಭಾ ।
ಸುರಮಯಬೋಧೆ ಷಟ್ಸ್ಥಲಸಮಾಹಿತಬೋಧೆ ಸುಪಂಚಕೋದ್ವಿಧಾ ॥
ಚರಣೆಯಬೋಧೆ ದಿವ್ಯಶಿವಮಂತ್ರಮಯಾಂಗವನೆಯ್ದೆ ಮಾಳ್ಪಬಂ ।
ಧುರಶಿವಬೊಧೆ ತತ್ಪರಮಸಂಸ್ಕೃತಿಹೀನರಿಗೇನದ[illegible]ಮೋ ॥೧೮॥

ಮ॥ ವಿ॥ ವೃ॥

ಗುರುದೇವಂ ಶಿಶುವಿಂಗೆ ಸುಪ್ತಮನುವಿಂದಿತ್ತಿರ್ದ ಚಿಲ್ಲಿಂಗಕಂ ।
ಮರುಳ್ದಾಜ್ಞಪ್ತಿಯನೀಯಲಿಕ್ಕಿರದೆ ತತ್ಸಂಬಂಧ ಪೂಜಾಕ್ರಮೋ ॥
ತ್ತರಮಂ ಬೋಧಿಪುದಾಗಿ ದೀಕ್ಷೆಯೆನಿಕುಂ ತದ್ದೀಕ್ಷೆಯುಂ ವೀರಶೈ ।
ವರಣಂ ಮಿಕ್ಕದೆ ಪೊರ್ದುತಿರ್ಪ್ಪುದೆಹಿತಂ ಮುಖ್ಯೋದ್ಯಮಂಸಂತತಂ ॥೧೯॥

ಇಂತಿರ್ಪನುಪಮ ದೀಕ್ಷಾ ।
ದ್ಯಂತವನೊಲವಿಂ ಪ್ರಸಾದವಾಣಿಯಿನುಸಿರಲ್ ॥
ಭ್ರಾಂತಿಯಣಂಗಿಯವರ್ಗಳ ।
ಸ್ವಾಂತಂಕಳೆಯೇರಿ ಸಿದ್ಧಿಕರವಾಪರದೊಳ್ ॥೨೦॥

ಪಂಚಗುರುಕಲಶಪೂರ್ವಕ ।
ಮಂಚಿತಮೆನೆ ಸಂಸ್ಕರಿಸಿ ವಿಧಿವಿಧಾನಗಳಿಂ ॥
ದಂ ಚಂಚದ್ಗುರುಗೆಯ್ದಂ ।
ಪಂಚಾಸ್ಯಶಿವಸ್ವರೂಪರಂ ಶುಭಮೆನ್ನಲ್ ॥೨೧॥

ಮ॥ ವಿ॥ ವೃ॥

ಬಗೆಗಂ ನಿಲ್ಕದಪಾರಸಾರ ಗುಣಗಂಭೀರಪ್ರಸಾದಪ್ರಭಾ ।
ಪ್ರಗತಶ್ರೀಗುರುವರ್ಯತ್ವತ್ಕರುಣದಿಂ ಜ್ಞಾನಾಂಜನಂ ಪ್ರಾಪ್ತಿಸಲ್ ॥

ಮಿಗೆಮುತ್ತಿರ್ದ ಜಡಾಂಧಕಾರಮಳಿದತ್ತೆಮ್ಮಕ್ಷಿಗಂಕಾಣ್ಬುದ ।
ತ್ತಗಜಾಧೀಶಶಿವಕ್ರಿಯಾನಿಧಿಯಲಾ ನಮ್ಮಿಂಪೆರರ್ಥನ್ಯರೇ ॥೨೨॥

ಚಂ॥ ಪ್ರಾ॥ ಕ್ಕ ॥

ಒದವಿದನಂತ ಹೇಯಮಯ ಪಿಂದಿನಪುಟ್ಟನೊಳೊರ್ಮೆಮಾಂಸಪಿಂ ।
ಡದೆ ಜನಿವೆತ್ತುಸತ್ತು ತೊಳಲುತ್ತಮದೀಗಮದಾವ ಪುಣ್ಯಸಂ ॥
ಪದಮೊ? ತ್ವದೀಯಪತ್ನಿಪೆಯನೊಂದಿ ಮಸೂತ್ತಮಪಿಂಡದಿಂದೆ ಮೂ ।
ಡಿದೆವಿರದೆಂದು ತದ್ಗುರುಪದಾಬ್ಜಕೆ ಸಲ್ಲಿಸಿದರ್ಪ್ರಣಾಮಮಂ ॥೨೩॥

ಘೋರಮಲತ್ರಯದುರಿಯೊ ।
ಳ್ಗಾರುವಡೆದು ಜನ್ಮಜನ್ಮದೊಳ್ಸಡುತಿರ್ಪೆಂ ॥
ಕಾರುಣ್ಯಾಮೃತ ಸೇಕದಿ ।
ನಾರಿಸಿ ಸಲಹೆನ್ನನನುದಿನಂ ಶಿವರುದ್ರಾ ॥೨೪॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್
ಷಷ್ಠಾಶ್ವಾಸಂ
—ಸಮಾಪ್ತಂ.—

॥ ಓಂಗುರುಪರಬ್ರಹ್ಮಣೇನಮಃ ॥

## ಸಪ್ತಮಾಶ್ವಾಸಂ.



ಲಸದಷ್ಟಾವರಣ ವಿಶಿ ।
ಷ್ಟ ಸತ್ವವನಿರದರಿಯಲ್ಕುತೂಹಲಮುಕ್ಕಲ್ ॥
ಬೆಸಗೊಂಡ ಭಕ್ತವಿತತಿಗೆ ।
ಹಸನದ್ಯುತಿಯುಣ್ಮೆವದನದೊಳ್ಬೋಧಿಸಿದಂ ॥೧॥

(ತ್ರ್ಯಕ್ಷರಾತ್ಮಕಯಮಕ)

ಶಂಕರನಾಕಾಶ ಸುಕೇ ।
ಶಂಕರಕಂಠಂಜಡಾಂಧಕಾರೌಘ ನಿಶೇ ॥
ಶಂಕರಪಾತ್ರಂಭಕ್ತ್ರನ ।
ಶಂಕರಮೀಗಿಷ್ಟಸಿದ್ಧಿಯಂ ವೃಷಪತ್ರಂ ॥೨॥

ಮೃಡನಷ್ಟಾಂಗದಿನಿಳೆಯಂ ।
ಬಿಡದೋವಂ ಭಕ್ತನಷ್ಟಕವಚಾಂಗವನಾ ॥
ಳ್ದಡಸಿರ್ದ ಮೋಹಭೂಜವ ।
ನುಡಿವಂ ತತ್ಕಾರಣಂ ಮುಖಂಕವಚಂಗಳ್ ॥೩॥

ಚಂ॥ ಪಾ॥ ವೃ॥

ಶಿವಭಸಿತಪ್ರಸಾದ ಚರಣಾಂಬುಗಳೆಯ್ದೆ ರಹಸ್ಯಮಾಳ್ದ ತ ।
ತ್ಕವಚಮುದಂಚಿತಾಮಲ ಗುರೂತ್ತಮಜಂಗಮನಕ್ಷಮಾಲೆ ದೃ ॥
ಷ್ಟವಹ ಸುಬಾಹ್ಯದಾವರಣಮಷ್ಟವಿಧಾಂಗಮಹೇಶನಾಜ್ಞೆಯಿಂ ।
ವ್ಯವಹರಿಸುತ್ತಲಿರ್ಕುಮಿವುಗಳ್ಭವಲೋಕ ಹಿತಾರ್ಥಮಾಗಿಯೇ ॥೪॥

ಗುರುವಿರದಿರ್ಕೆ ಯೋಗಿವರನಿಲ್ಲಮವಂ ದೊರೆಕೊಳ್ಳದಿರ್ಕೆ ತ ।
ತ್ಪರತರತತ್ವ ಸಂಭವಿಸದಾ ಗುರುಯೋಗಿವರ ಪ್ರಸಾದಗಳ್ ॥
ದೊರೆಯದೆ ಪೋಕೆ ಮೇಲಣ ದಶೇಂದ್ರಿಯತಾಪಗಳಿಂಗವತ್ತಣಿಂ ।
ಪರಶಿವಭೂತಿ ಭಾಸುರ ಶಿವೇಕ್ಷಣ ಮಂತ್ರಮಿರಲ್ಕೆ ಸಾರ್ಥಕಂ ॥೫॥

ಗುರುಶಿವಲಿಂಗಯೋಗಿವರರಂಚಿತ ಮೂರ್ತಿಗಳಂತವರ್ಗಳಂ ।
ಪಿರಿದೆನೆ ಪೂಜಿಸಲ್ಪರಮಸಾಧನಮುಂ ವರತತ್ರಿಮೂರ್ತಿಗಳ್ ॥
ಪರಿವಿಡಿಯಿಂಸಮರ್ಪಿಪ ಫಲಂಚರಣೋದಕ ಸುಪ್ರಸಾದಮೆಂ ।
ದರಿದವರೊಲ್ದು ಪೇಳ್ದಪರಶೇಷ ಗುರೂಕ್ತಮತಾನುವರ್ತಿಗಳ್ ॥೬॥

ತ್ರಿವಿಧಾತ್ಮಕ ವಸ್ತುಗಳೊ ।
ಳ್ಸವಿಚಾರಿಸೆ ವೇದಮಾರ್ಗದಿಂ ಭೇದಮೆನಿ ॥
ಪ್ಪವೊರೆಯಿನಿಸಿಲ್ಲಮಿರ್ಕೆಂ ।
ಬುವದೊರೆಯನ್ನೃತಂ ನಭಃಪಯೋಜಪ್ರಾಯಂ ॥೭॥

ಜಂಗಮನೊಲ್ದರ್ಚಿಪ ತ |
ಲ್ಲಿಂಗಂ ಗುರುವರ್ಯನತ್ತಣಿಂದೊದಗಿರ್ಕುಂ ||
ಸಾಂಗದಿನಿದನರಿಯಲ್ಗುರು |
ಜಂಗಮದೊಳಭೇದಮೆಂಬುವಾಗಮಸತ್ಯಂ ||೮||

ಪರಶಿವನಾವನವಂ ಗುರು |
ಗುರುವಾವನವಂಶಿವಂದಲೆಂದಾಮ್ನಾಯಂ ||
ಕರವೆತ್ತಿಪೊಡರ್ಪಿಂ "ಯೋ |
ಗುರುಸ್ಸಶಿವ" ಎಂದಜಸ್ರಮುದ್ಘೋಷಿಸುಗುಂ ||೯||

ಶಿವಸನ್ನಿಧಿಯಾಳ್ದೊಡಮುಂ |
ಭವದುರ್ಮರಣಂಗಳಿಂಗವೆಂದುಂ ಗುರುಪಾ ||
ದವನಾಂತರ್ಗೆ "ಭವಂನಾ |
ಸ್ತಿ"ವಲಂ ಎಂದೆನೆ ಗುರೂತ್ತಮಂಗೊರೆಯೊಳವೇ ||೧೦||

ಜಲಗಟ್ಟಿಗೊಂಡು ಮುಕ್ತಾ |
ಫಲಮೆನಿಕುಂ ಮುಗುಳ್ದು ಮೌಕ್ತಿಕಮೆದೇಂಬಗೆಯಲ್ ||
ಜಲಮುಪ್ಪುದೆ ಸದ್ಗುರುಕರ |
ಜಲಜದೊಳೊಗೆದಂ ಪುನರಪಿ ನರಸಪ್ಪುವನೇ ||೧೧||

ಕಡಿಯಲ್ಭವದುರ್ಲತೆಯಂ |
ಜಡಿಯಲ್ಕಾಮಾದ್ಯರಿತತಿಯಂ ಶಿವಪದಮಂ ||
ಪಡೆಯಲ್ಮೋಕ್ಷಾಂಗನೆಯಂ |
ಪಿಡಿಯಲ್ಗುರುಭಕ್ತಿಮೂಲಕಾರಣಮಶ್ತೇ ||೧೨||

ಮನೆಯೊಳ್ಮಡಗಿದ ಧನಮಂ |
ಜನಕಂ ದೋರ್ಪಂತೆ ತನ್ನೊಳಡಗಿದ ಸಚ್ಚಿ |
ದ್ಘನವಸ್ತುವನುರೆ ನಿಜಗುರು |
ಜನಕಂ ದೋರ್ಪಂತೆಯನ್ಯರೇಂತೋರ್ದಪರೇ ||೧೩||

ನೆಲೆಯಿಲ್ಲದ ಕಲೆಯಿಲ್ಲದ |
ಚಲಾ"ತ್ಯತಿಷ್ಠದ್ದಶಾಂಗುಲಾ"ಗೋಚರ ನಿ ||

ರ್ಮಲಲಿಂಗಮೂರ್ತಿಯಂ ಕರ ।
ತಲದೊಳ್ಕಾಣ್ಪಿಸಿದ ಗುರುಪರಾತ್ಪರನಲ್ತೇ ॥೧೪॥

ಭೀಕರಮಯಸಂಸೃತಿ ಮಕ ।
ರಾಕರದೊಳ್ತೊಳಲಿ ಬಳಲಿ ದಡಗಾಣದವ ॥
ರ್ಗಾ ಕಲುಷೋತ್ತಾರಕಕರು ।
ಣಾಕರಗುರುವೆಂಬತರಣಿ ಸಾಧನಮಕ್ಕುಂ ॥೧೫॥

ಒಡಲೆಂಬಕಟ್ಟಡವಿಯೊಳ ।
ಗಡಸಿದ ಮಮಕಾರವೆಂಬಕಿರ್ಚುರೆಚುರ್ಚಲ್ ॥
ಮೃಡದೇಶಿಕಕಾರುಣ್ಯದ ।
ಕಡುಸರಿಯಿಲ್ಲದೊಡೆ ಶಾಂತಮೇನಾದಪುದೇ ॥೧೬॥

ಮ॥ ಸ್ರ॥ ವೃ॥

ವಿಲಸತ್ಪಂಚಾಗ್ನಿಮಧ್ಯಂನೆಲಸಿ ಘನತಪಂಗೆಯ್ದೊಡೇಂ ಸಂತತಂ ಹೃ ।
ತ್ಸ್ಥಲದೊಳ್ಸನ್ಮಂತ್ರಮಂಗೌಪ್ಯದೆಜಪಿಸಿದೊಡೇಂಮೌನಿಯಾಗಿರ್ದೊಡೇಂಮೇ ॥
ಣೊಲವಿಂ ಸಿದ್ಧಾಂತ ವೇದಾಂತ ಸಕಲಸುಕಲಾಭಿಜ್ಞನಾಗಿರ್ದೊಡೇಂ ಸಂ ।
ದಲಘುಶ್ರೀದೇಶಿಕಾಗ್ರೇಶಕೃಪೆವಡೆಯದಾರ್ಗಾದೊಡಂ ಮುಕ್ತಿಯುಂಟೇ ॥೧೭॥

ಇಂತಿರ್ಪ ಸೆವಸ್ಥಾವರ ।
ಣಾಂತರ್ಗತಗುರುಮಹತ್ವಮಂ ಬಿತ್ತರಿಪೆಂ ॥
ಸಂತಸದಿಂ ಚಿತ್ತವಿಸುವು ।
ದಂತರಿಸದತೀವ ಭಕ್ತಿಪೂರ್ವಕಮೆಲ್ಲರ್ ॥೧೮॥

॥ ಮ॥ ಸ್ರ॥ ವೃ ॥

ಗುರುವಂಶಾಬೋಧಿರಾಕಾತ್ರಿಭವನಭವ ಸದ್ಭಕ್ತಿಸುಜ್ಞಾನ ವೈರಾ ।
ಗ್ಯ ರಮಾರಾಮಂ ದಯಾಪಾಂಗನಮಲ ಭಸಿತಭ್ರಾಜಿತಾಂಗಂ ನತಾಪ ॥
ದ್ಗಿರಿ ರುಗ್ವಜ್ರಾಯುಧಂ ಧಿಃಕೃತಭವಿಚರಿತಂ ವಿರೂಪಾಕ್ಷ ಭಕ್ತಂ ।
ವರಪಂಪಾಕ್ಷೇತ್ರದೊಳ್ರಾಜಿಸಿದನಘಹರಂಶ್ರೀಹರೀಶಾರ್ಯನೆಂಬಂ ॥೧೯॥

॥ ಅರ್ಧಸಮ ಮಾಲ್ಯಭಾರವೃತ್ತಂ ॥

ಶಿವಲಿಂಗಸಮರ್ಚನೈಕಚಿತ್ತಂ ।
ಕವಿತಾಕಾಮಿನಿ ಜೀವಿತೇಶನುದ್ಯ ॥

ಚ್ಛಿವಲಿಂಗಸುಭೋಗಿ ಶಾಪನಿಶ್ಚಾ ।
ಪ ವರೇಣ್ಯಂಮೆರೆದಂಮಹತ್ವಶೀಲಂ ॥೨೦॥

॥ ಅರ್ಧಸಮ ಪುಷ್ಪಿತಾಗ್ರಾವೃತ್ತಂ ॥

ತದಮಲಗುರುಹಸ್ತಸಂಭವಂ ಷ ।
ಟ್ಪದಿ ಪಥದರ್ಶಕನುರ್ವಿಪಾರ್ಚಿತಂ ದು ॥
ರ್ಮದಯುತ ಕವಿದಲ್ಲಣಂ ಸಮುಂತೊ ।
ಪ್ಪಿದನನಘಂ ಜಸವೆತ್ತು ರಾಘವಾಂಕಂ ॥೨೧॥

ಇವನೊರ್ಮೆ ಹರಿಶ್ಚಂದ್ರಕೃ ।
ತಿ ವಿರಚಿಸಿ ತದೀಯಗುರುಪದಾಬ್ಜಾಂತಿಕದೊಳ್ ॥
ಸವಿನಯದಿಂ ಮತ್ಕೃತಿಯಿದ ।
ನವಲೋಕಿಪುದೆಂದುಬಾಗಿ ಮುಂದೆಸೆಮಡಗಲ್ ॥೨೨॥

ನೋಡಲ್ಬಗೆದಾರದೆ ಮಾ ।
ತಾಡದೆ ಮೌನದೊಳಿರಲ್ಕಗುಳ್ದಿರಗಿ ನಿಮ್ಮಿಂ ॥
ದೀಡೇರುಗುಮೆಂದಿರಿಸ ।
ಲ್ನೋಡದೆಸೈತಿರ್ಪ ಒಗೆಯನುಸಿರುವದೆನ್ನೊಳ್ ॥೨೩॥

ಚಂ॥ ವೃ॥ ವೃ॥

ಶಿವಪರಸಚ್ಚರಿತ್ರಮಿರೆ ಸಮ್ಮತಿಸೆಂ ಭವಪಾಶಬದ್ಧ ದು ।
ರ್ಭವಿಚರಿತಕ್ಕೆ ಸಮ್ಮತಿಸೆನಿಂತಿರೆ ಕಾಣ್ಚಿದೆಯೇಕೆ ನೀನಿದಂ ॥
ಭವಿಯೆಡೆಗೊಯ್ದು ಕೇಳಿಸಲವರ್ಗಳೊರಲ್ದು ಭವನ್ಮನೋದಿತಾ ।
ರ್ಥವನುರೆತೆತ್ತು ಕೀರ್ತಿಪರೆನುತ್ತೊರೆಯಲ್ಬಿಸುಸುಯ್ದು ರಾಘವಂ ॥೨೪॥

ಮ॥ ವಿ॥ ವೃ॥

ಗುರುವಾಕ್ಯಾರ್ಥವನೆಯ್ದೆ ಕೇಳ್ದು ಸಟೆಯಿಂ ಭೂಪಾಲನಂಗೆಯ್ದು ದು ।
ರ್ನಿರಯಾಂಬೋನಿಧಿಯಾಳ್ದ ಭೂಭುಜರ ದುಶ್ಚಾರಿತ್ರಮಲ್ತುಂ ಪರಾಂ ॥
ಬರಿಸಲ್ಸಾಧ್ವಿಯನಾತ್ಮಪುತ್ರನನದೇಂ ನೈಜಾಂಗಮಂ ಪಾರ್ವತೀ ।
ಶ್ವರಗೊಲ್ದಿತ್ತ ಚರಿತ್ರಿಯಂ ಸೊರಹುವೆಂ ನೀನೆಂದೊಡಾಂ ಪೇಳ್ದಪೆಂ ॥೨೫॥

JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. ...315...

ಪೂರ್ವದೊಳಂ ಚೋಳಾದಿಮು ।
ಖೋರ್ವೀಪಾಲರ ಚರಿತ್ರೆಯನದೇಂ ಕತದಿಂ ॥
ಪರ್ವಿದ ಭಕ್ತ್ಯತಿಶಯದಿಂ ।
ಸರ್ವೋತ್ಕೃಷ್ಟಮೆನೆಗೆಯ್ದುದಂ ಪೇಳೆನ್ನಲ್ ॥೨೬॥

॥ ಮಂದಾಕ್ರಾಂತವೃತ್ತಂ ॥

ಗೌರೀಶಂಮೆಚ್ಚಿರೆ ನಿಜಪದಂಬೆಳ್ದರಂ ಕೀರ್ತಿಪೆಂ ಮಂ ।
ದಾರಾವಾಸಂ ತನಗೊಲಿಯೆ ಸತ್ಯಾತ್ಮಸಂಭೂತರಂ ಮೇ ॥
ಣ್ಬುರಾಮಾಶ್ರೀಯನೆರೆದನವಂಭಕ್ತಸಂಘಾತಕೆಂದುಂ ।
ದೂರಂ ತಾನೆಂದೊರೆಯಲೊರೆದಂ ಪಂಡಿತಂರಾಘವಾಂಕಂ ॥೨೭॥

ನರಪ ಹರಿಶ್ಚಂದ್ರಗವ ।
ರ್ಕಿರಿಯರ್ಕಳೆನೆ ವಿಕೋಪದಿಂ ಪಾವುಗೆಯಿಂ ॥
ತರಹರಿಸದಿಡಲ್ರಾಘವ ।
ನುರು ಮುಂಬಲ್ಕಳಚಿಬೀಳ್ದುವದನೇನೆಂಬೆಂ ॥೨೮॥

ಚಂ॥ ಮಾ॥ ವೃ॥

ಶಿವಶರಣಾಳಿ ನಿಂದೆಯನೊಡರ್ಚಿದ ದುರ್ಮಲಿಸಾತ್ಮ ಪಾಪಿಯಾ ।
ಸ್ಯವನವಲೋಕಿಸೆಂ ಗಡಮೆನುತ್ತೆ ತಳರ್ದು ಧರಾಘಹಾರಿಣೀ ॥
ಸುವಿಮಲತುಂಗಭದ್ರೆಯ ಸುಮಧ್ಯದೊಳಾಸನವಿಕ್ಕಿ ಭಕ್ತಿಯಿಂ ।
ಶಿವಪರನಿಂದೆಯಾಲಿಸಿದೆನೀತನುಮಂ ಶಿವನಂಭ್ರುಗಿತ್ತಪೆಂ ॥೨೯॥

ಎಂದುಜ್ಜುಗಿಸಲ್ದಿವಿಯಿಂ ।
ದೊಂದುರವಂ ಪೊಣ್ಮಿಬಿಡದೆ ಹೊ ಹೊ ಸೈರಿಸುನೀ ॥
ನೆಂದುತ್ತರಿಸಲ್ಕಾಕ್ಷ ।
ರ್ಯಂ ದಾಳ್ದವಲೋಕನದೊಳೆ ನಿಬ್ಬೆರಗಾದಂ ॥೩೦॥

ಮ॥ ವಿ॥ ವೃ॥

ಕೃಪೆಯಿಂ ದೀಕ್ಷೆಯನಿತ್ತುಮೇಣ್ಸಕಲ ವಿದ್ಯಾಭ್ಯಾಸಮಂ ಗೆಯ್ಸಿ ಭೂ ।
ಮಿಪರಿಂದರ್ಚಿಸಿಗೊಂಬ ಶಕ್ತಿಯುತನಂಗೆಯ್ದಿರ್ದತದ್ದೇಶಿಕಾ ॥
ಧಿಪನತ್ಯಂತನುಹೋಪಕಾರಗುಣಮಂ ದಾಕ್ಷಿಣ್ಯಕಂದಾರದೊ ।
ಳ್ವಿಪರೀತಂಗೊಳಿಸಿತ್ತು ತಾನರರೆ ವಿದ್ಯಾದರ್ಪಮೇಂಗೆಯ್ಯದೋ ॥೩೧॥

ಗಣಿಸಲ್ಕಷ್ಟಮದಂಗಳೊಳ್ನೆಲಸಿ ತಾನೊಂದಿರ್ಕೆ ಬೇರರ್ಕಳಂ ।
ಗಣಿಸಂ ಸರ್ವಮದಪ್ರವಿಷ್ಟನಿವನಾ ವಿದ್ಯಾಗುರೂತ್ತಂಸನಂ ॥
ತೃಣಕಿಂದಂ ಕಡೆಗಣ್ಚಿವಜ್ರರದವಂ ನೀಗಾಡಿಕೊಂಡಂದಮೇಂ ।
ಬಣುಗಂಗೆತ್ತಣದೊಡ್ಡಿತೆಂದು ಶರಣಪೂರ್ರಿತಂದರಲ್ಲಿಂದವರ್ ॥೩೨॥

ಸದರಂರಾಘವನೇಳ್ದು ಸಂಭ್ರಮಿಸಿ ತತ್ಪಂಪಾವಿರೂಪಾಕ್ಷನಿಂ ।
ರದನಂಪೊಂದುವೆನೆಂದುಬಂದುಮಣಿದೋ ಗೌರೀಶ ದೀನೌಘಸಂ ॥
ಪದ ಭಸ್ಮಾಂಗ ಭುಜಂಗಭೂಷ ಕರುಣಾವಾರಾಶಿ ಫಾಲಾಕ್ಷನಿ ।
ರ್ಮದಭಕ್ತೌಘವಿಲಾಸಪಾಲಿಸೆನುತುಂ ಕೊಂಡಾಡಿದಂಬೇಡಿದಂ ॥೩೩॥

॥ ಮಣಿವಿಭೂಷಣವೃತ್ತಂ ॥

ಇಂತವಂ ವಿಧವಿಧಂ ನಯದಿಂದುರೆ ಯಾಚಿಸ ।
ಲ್ಕಂತು ಸಂಹರಶಿವಂ ಕೃಪೆದೋರದಿರಲ್ಕೆ ಹೃ ॥
ಚ್ಚಿಂತೆಯಿಂ ಕೊರಗುತಾತ್ಮಶರೀರಮಿದೇಕೆನು ।
ತ್ತಂತಮಂಗೊಳಿಪ ಕಾಲದೊಳೇನದನೆಂದಪೆಂ ॥೩೪॥

ಮ॥ ಸ್ರ॥ ವೃ॥

ಗಗನೋದ್ಯದ್ವಾಣಿಯುದ್ಘೋಷಿಸಿ ಹರಮುನಿಯಲ್ದೇಶಿಕಂ ರಕ್ಷಿಪಂ ತಾ ।
ನೆ ಗುರೂತ್ತಂಸಂ ವಿಕೋಪಂದಳೆಯೆ ಪರಶಿವಂಕಾಯದಿರ್ಪಂ ಯಥಾರ್ಥಂ॥
ಬಗೆಯಲ್ನೀಂಪಂಡಿತಂ ತಳ್ವದೆಮಗುಳ್ದು ಮಹಾದೇಶಿಕೋತ್ತಂಸ ಪಾದಾ ।
ಬ್ಜಗಳಂಕಂಡೊಲ್ದು ಕುಂಬಿಟ್ಟು ರದವನೆರೆಯಲ್ಪೇಳ್ದುದೇನೆಂಬೆನಾಗಳ್ ॥೩೫॥

ಗಗನೋದ್ಯದ್ವಾಣಿಯಂಕೇಳ್ದು ನಿಸದಮೆನುತುಂ ರಾಘವಂಬಂದು ದೈನ್ಯಂ ।
ಮಿಗೆ ಸಾಷ್ಟಾಂಗಪ್ರಣಾಮಂರಚಿಸಿ ತರುಳನಾಂ ಪಾಪಿಯಾನಜ್ಞನಾಂವಿದ್ಯಾ ॥
ನಗಮಂಸಾರ್ದೇಳಿಸಿರ್ದಾಂ ಕಪಟ ಕುಹಕಿ ನೀಚಂ ಖಲಂ ಸರ್ವ ದುರ್ದೋ ।
ಷಗಳಂ ಪಿಂದಿಟ್ಟು ನೀನೋವುದಲೆ ಗುರುವೆ ಬಳ್ಳಿಂಗೆಕಾಯ್ದಿವ್ಮಿತೇಂ ಪೇಳ್ ॥೩೬॥

ಅಸಮಗುರು ನಿನ್ನನುಳಿಯ ।
ಲ್ರಸೆಯೊಳ್ಪೊರೆವರೊಳರೆ ಪೊರೆಯೆಂದಾರ್ತತೆಯಿಂ ॥
ಬಿಸಜ ಪದಕ್ಕೆರಗಿರ್ದಂ ।
ಬಿಸಿಯಿಲ್ಲದೆ ಘೃತಮದೆಂತುಮೇಂ ಕರಗುವದೇ ॥೩೭॥

॥ ಶಂ॥ ಮಾ॥ ವೃ ॥

ಪಡಿನುಡಿಯಾರ್ಪುದೆಲ್ಲಿ ದುರಹಂಕೃತಿಯೆಲ್ಲಿ ಪೊಡರ್ಪುದೆಲ್ಲಿ ಕೆಂ ।
ಪಡರಿದ ಕಣ್ಗಳೆಲ್ಲಿ ಛಲವೆಲ್ಲಿ ಕಟೂಕ್ತಿಗಳೆಲ್ಲಿ ಬಂದು ಸಂ॥
ಗಡಿಸಿದ ಕೋಪವೆಲ್ಲಿ ಘನಪಂಡಿತವೃತ್ತಿಯದೆಲ್ಲಿ ಕಂಡಪೋ ।
ಲೊಡನುಡಿವಿರ್ದ ಶಂಭುಶರಣಾವಲಿನಿಂದೆಯ ಬಲ್ಪದೆಲ್ಲಿ ಪೇಳ್ ॥೩೮॥

॥ ಮಾತ್ರಾಸಮಕವೃತ್ತಂ ॥

ಧರೆಯೊಳ್ಪುರಿತಕೆ ನಿಷ್ಕೃತಿಯಿರ್ಕುಂ
ಪರಮಾಮ್ನಾಯ ಪ್ರಾತದೊಳುದ್ಯ ॥
ದ್ಗುರುನಿಂದಕಗೆಂದುಂ ಪರಿಹಾರಂ ।
ದೊರಕದು ತಳ್ವದೆ ನೀಂಪೋಗೆಂದಂ ॥೩೯॥

ಮುಂದಪ್ಪುದನರಿಯದೆ ನಾಂ ।
ನಿಂದಿಸೆ ರದನಂಗಳುರ್ಚಿದುವೆನಲ್ಕಿನ್ನೇಂ ॥
ನಿಂದಿಸೆ ಪುಟ್ಟದೆ ಪೋಕುಮೆ ।
ಸಂದಣಿಗೊಂಡೊತ್ತಿಬೆಂದಬಾಯೊಳ್ಪುಳುಗಳ್ ॥೪೦॥

॥ ವಸಂತತಿಲಕವೃತ್ತಂ ॥

ನಾನಾವಿಧಂ ನುತಿಸೆ ಮೆಚ್ಚದಿರಲ್ಕರೀಶಂ ।
ತಾನೇಕೆ ನೀಗುವೆನೆನುತ್ತೆ ಪದಾಂಬುಜಕ್ಕಂ ॥
ದೀನತ್ವದಿಂ ವಿನಮಿಸೇಳ್ದತನೂಜನಂ ಕಂ ।
ಡಾನಂದದಿಂ ನಲಿದು ಮುದ್ದಿಸಿಯಪ್ಪಿ ಪೇಳ್ದಂ ॥೪೧॥

॥ ವೀರವೃತ್ತಂ ॥

ಮಾನಹೀನಕರಾವಸರಂ ನಿಜಂ ।
ಸೂನು ಬಂದೊದಗಿರ್ಪುದು ಭಾವಿಸಲ್ ॥
ಮೀನಲಾಂಛನಮಾನವಿಮರ್ದನೇ ।
ಶಾನ ಭಕ್ತರ ನಿಂದೆಯ ದೂಸರಿಂ ॥೪೨॥

॥ ಪ್ರಹರ್ಷಣವೃತ್ತಂ ॥

ಇನ್ನೆಂದುಂ ಕನಸಿನೊಳಾದೊಡಂ ವಿಮೋಹಾ ।
ಕ್ಲಿನ್ನಾತ್ಮರ್ಕಳನರಿತಿಂತು ಪಾಡದಿರ್ಕೇಳ್ ॥

ಪನ್ನಂಗಾಭರಣನಸಾತ್ಮಭಕ್ತರಂನೀಂ ।
ಚೆನ್ನಂಕೈಮಿಗೆ ನುತಿಸೆಂದನಾ ಹರೀಶಂ ॥೪೩॥

ಮ॥ ಸ್ರ॥ ವೃ॥

ನೆನೆಯಲ್ಸದ್ಬಂಧುವರ್ಗಂ ಸುಖಮತಿಶಯದಿಂದುಂಡು ಪೋಪರ್ಸಮುಹಾ ಬಂ ।
ಧನಮುಂ ತಳ್ಪೊಯ್ಯೆಲೇನಾರ್ಪರೆ ಭವಭವದತ್ಯಂತ ದುರ್ದಾಂತ ದುರ್ಬಂ ॥
ಧನಮಂ ಸೀಳ್ದಿಕ್ಕಿ ನಿರ್ವ್ಯಾಜದಿನನುಪಮ ಕೈವಲ್ಯಲಕ್ಷ್ಮೀಶನಂ ಮಾ ।
ಳ್ಪ ನಿಜಾಪದ್ಬಂಧುವನ್ಯರ್ದೊರೆಗುಮೆಗುರುವಿಂ ಮಿಕ್ಕಿದರ್ನಾಡೆ ನೋಡಲ್
॥೪೪॥

ಮ॥ ವಿ॥ ವೃ॥

ಗುರುವೇ ಮಂಗಲಶಾಂತಿಸೌಖ್ಯಕರವೇ ಸುಜ್ಞಾನ ಪೀಯೂಷಸಾ ।
ಗರವೇ ಸೇವಿತಭಕ್ತದೇವತರುವೇ ಧರ್ಮಾರ್ಥಮೋಕ್ಷೈಕ ಮಂ ॥
ದಿರವೇ ವಿಷ್ಣುವಿಧಾತ ರುದ್ರರಿರವೇ ಶಿಷ್ಯಾಳಿ ಕಾರುಣ್ಯ ನೀ ।
ರ್ಜರವೇ ನೀನೆನುತೊಲ್ದು ಪಾಡುತಿರಲೇನೆಂಬೆಂ ಮಹಾಶ್ಚರ್ಯಮಂ ॥೪೫॥

ಚಂ॥ ಮಾ॥ ವೃ॥

ಉದಿರ್ಚಿದಪಲ್ಗಳಾಗಳೆ ಕೊನರ್ದೊಡಮೂಡಿದುವೆಯ್ದೆನೋಳ್ಪೊಡಂ ।
ಸೊದೆಯುವರೆ ಸೇಕದಿಂದರಲ್ದ ದೇವಕುಜಾಂಕುರದಂತೆ ರಾಘವಂ ॥
ಮುದದೊಡಗೂಡೆ ಸದ್ಗುರುವಿನಿಂ ಪಿರಿಯರ಼್ಕಲೋರ್ವಿ ಭಾಗದೊ ।
ಳ್ಬೆದಕಿದೊಡಿಲ್ಲವೆಂದು ಶರಣಾವಳಿ ಕೀರ್ತಿಸಿದರ್ಹರೀಶನಂ ॥೪೬॥

ಕಿಡಿಗಣ್ಣಡಗಿಸಿ ಬಾಂಬೊಳೆ ।
ಮುಡಗಿರದುಡುಪತಿಯೊಳಸಿಮುರಸಿಯೆಲರುಣಿಯಂ ॥
ಜಡರೇಳ್ಗೆಗೆ ಗುರುರೂಪಂ ।
ಬಡೆದ ಭವತ್ಪಾದಕೆರಗುವೆಂ ಶಿವರುದ್ರ ॥೪೭॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ಸ
ಪ್ತಮಾಶ್ವಾಸಂ
—ಸಮಾಪ್ತಂ—

॥ ಓಂಚಿಲ್ಲಿಂಗರೂಪಿಣೇನಮಃ ॥

# ಅಷ್ಟಮಾಶ್ವಾಸಂ.



ಲಿಂಗಂ ಶಿವನಂಗಂ ನಿ ।
ಸ್ಸಗಂ ಶಿವಭಕ್ತನಂಗ ಮಂಗಲಸಂಗಂ ॥
ಲಿಂಗಂಜಗದಾಲಿಂಗಂ ।
ಲಿಂಗದ ನೆಲೆಕಲೆಯನೊಲ್ಮೆಯಿಂ ಬೋಧಿಸಿದಂ ॥೧॥

ಃ ಚತುರಕ್ಷರ ಯಮಕ ಃ

ಪರಮೇಶ ಹೇಮಗಿರಿಜಾ ।
ಪ ರಮೇಶಸುದರ್ಶನಾಸ್ತ್ರ ವರದತ ಸುರೂ ॥
ಪ ರಮೇಶನಂದನಹರಂ ।
ಪರಮೇಶ ಪದತ್ವಮೀಗೆ ವೃಷಭಾರೂಢಂ ॥೨॥

ಚಂ॥ ಮಾ॥ ವೃ॥

ಬಹುವಿಧ ಜನ್ಮದೊಳ್ಪಡೆದ ಪುಣ್ಯವಿಶೇಷದಿನಾತ್ಮಶುದ್ಧಿಯಾಂ ।
ತಿಹ ಜಡಜೀವನೇ ನಿಜ ವಿಚಾರದೊಳೂರ್ಜಿತ ಪಿಂಡ ವಿಜ್ಞಾನಾ ॥
ಗಿಹದತಿ ಘೋರ ಸಂಸರಣಕಳ್ಕಿ ಮಗುಳ್ದು ಗುರೂದ್ವನಂಪ್ರಸ ।
ದ್ವಿಹಿತ ಕೃಪಾಕಟೇಕ್ಷಣವನೊಂದಿ ತದೀಯಪದಾಬ್ಜ ರೇಣುವಂ ॥೩॥

ಃ ಭುಜಂಗಪ್ರಯಾತವೃತ್ತಂ ಃ

ಶಿರಃಶೇಖರಂಗೆಯ್ದು ಸಂಸಾರಕಂ ನೊಂ ।
ದು ರಾಜತ್ಪದಾಂಭೋರುಹದ್ವಂದ್ವಕೊಲ್ದಾಂ ॥
ಶರಣ್ಬೊಕ್ಕೆ ಕಾರುಣ್ಯದಿಂ ನೀನೆ ದೀನಾ ।
ಮರೋರ್ವೀರುಹಂ ರಕ್ಷಿಸೆಂದೆಯ್ದೆ ಮೊಳ್ಗಲ್ ॥೪॥

ಚಂ॥ ಮಾ॥ ವೃ॥

ವರದ ಕರಾಬ್ಜಮಂ ಶಿರದೊಳಿಟ್ಟು ಸಹಸ್ರದಳಾಂಕರೋಚಿಯಂ ।
ನಿರುಕಿಸಿ ಭಾವ ದೃಕ್ಕರಕೆ ಸಾರ್ಚಿ ಸಮುಂತದನಿಷ್ಟ ರೂಪಮಂ ॥

ವಿರಚಿಸಿ ಶಿಷ್ಯನಂಗದೊಳೆ ಸಕ್ರಮಸಂಸ್ಕೃತಿಯಿಂಸ್ವದೇಶಿಕಂ ।
ಧರಿಸಲದಿಷ್ಟಲಿಂಗಸಮಭಿಖ್ಯೆಯನಾಂತೆಸೆಗುಂ ಪರಾತ್ಪರಂ ॥೩॥

ಸ್ಫುಟ ಪೀಠಮೆ ಬಿಂದು ಸಮು ।
ತ್ಕಟ ಮೂರ್ಧಾಂಗಮೆ ಸುನಾದಮುಂ ಗೋಳಕಮೇ ॥
ಪಟುಕಲೆ ಪರವಸ್ತು ಸುಸಂ ।
ಘಟಿಸಿದ ತಲ್ಲಿಂಗಮಂ ಸಮಂತರ್ಚಿಸುಗುಂ ॥೬॥

ನ" ಮ" ವರ್ಣಂಗಳೆ ಪೀಠಂ ।
ಕ್ರಮದಿಂ ಮಧ್ಯಸ್ಥಲಮೆ ಶಿ"ಕಾರಂ ವಾ" ವ ॥
ರ್ಣಮೆ ಗೋಮುಖಂ ಯ" ಕಾರಂ ।
ಸಮನಿಸಿದುದ್ಗೋಳಕಂ ವಿರಾಜಿತ್ಪ್ರಣಮಂ ॥೭॥

ಲಿಂಗಮೆನಿಸಲ್ಕೆ ಚರಮಚ ।
ರಂಗಳನಿಚಯಮನೊಳಗೊಂಡು ಬಾಹ್ಯಾಂತರದೊಳ್ ॥
ಓಂಗದೆ ಬೆಳಗುವ ಲಿಂಗಂ ।
ಮಂಗಲಷಡ್ವರ್ಣರಚಿತಮೆನೆ ಬಣ್ಣಿಪರಾರ್ ॥೮॥

ಲಿಂಗಸುನಿಷ್ಠಾ ಬಲದಿಂ ।
ದಂಗಜಹರನಂಬರಿಸಿ ಶಿವಾಸ್ಥಾಯಿಕೆಯೊಳ್ ॥
ಕಂಗೊಳಿಸುವ ಶಿವಶರಣೆಯ ।
ಮಂಗಲ ಭೂಯಿಷ್ಠ ಪುಣ್ಯಚರಿತೆಯನೊರೆವೆಂ ॥೯॥

॥ ಶಿಖರಿಣೀವೃತ್ತಂ ॥

ಧರಾಕೈಲಾಸಂ ಭಕ್ತಿಜನನಿನಿವಾಸಂ ಚಿದಮೃತೋ ।
ತ್ಸರಂವೈರಾಗ್ಯಾಂಭೋಜಖರಕಿರಣಂ ಮುಕ್ತಿಸ್ಥಲಲನಾ ॥
ಗರಂಸಂಪತ್ಕೋಶಂ ಶಿವಶರಣರಾಡುಂಬೊಲಮಿಳಾ ।
ಸ್ಫುರತ್ಕಲ್ಯಾಣಾಂಕಂ ಮಿಸುಗಿದುದು ಕಲ್ಯಾಣಕಟಕಂ ॥೧೦॥

ಕಮಲದಳ ವಿಶಾಲೇಕ್ಷಣೆ ।
ಕಮಲಾರುಣಚರಣೆ ತನ್ಮಹಾಪಟ್ಟಣದೊಳ್ ॥
ಕಮಲಮುಖಿ ಭುವನ ಸುಂದರಿ ।
ಕಮಲಾಯಿ ಪಣಾಂಗನಾಮಣಿವಿರಾಜಿಸಿದಳ್ ॥೧೧॥

ಮ॥ ಸ್ರ॥ ವೃ॥

ಶಿವಧರ್ಮಾಚಾರಸಂಪನ್ನೆ ವಿಟರನೊಡಗೊಂಡಿರ್ಪ ಕಾಲಕ್ಕೆ ತಲ್ಲಿಂ ।
ಗವನೆಂದುಂಮಂಚಕಂ ನೇತಿರಿಸಿ ಕರಮುಮಂ ಮತ್ತೆ ಮೇಲಿಟ್ಟು ಪುಷ್ಪೇ ॥
ಷು ವಿಲಾಸಂಗೊಳ್ವಳಿಂತೆಂಬುದನರಿದಭವಂ ಲಿಂಗದಾ ನಿಷ್ಠೆಯಂ ತಾಂ ।
ಭುವನಕ್ಕಂ ವ್ಯಾಪಿಸಲ್ವೇಳ್ಕೆನುತೆಸೆಯುವ ಕಲ್ಯಾಣಕೌತ್ಸುಕ್ಯದಿಂದಂ ॥೧೨॥

ಚಂ॥ ಪಾ॥ ವೃ ॥

ಇಭದಜಿನಂ ದುಕೂಲಮೆನಿಸಲ್ತೊಡೆದಿರ್ದ ಮನೋಜ ಭೂತಿಯೇ ।
ಶುಭಕರ ಚಂದನಂಬೊಲೆಸೆಯಲ್ಫಣಿರಾಜ ಸುರತ್ನ ಭೂಷಣ ॥
ಪ್ರಭೆ ಪೊರಪೊಣ್ಮೆ ರಮ್ಯಮೆನಿಸಲ್ಗರಳಂ ಮೃಗನಾಭಿಯೆಂಬವೊ ।
ಲ್ಸುಭಗಮನೊಂದಿರಲ್ಜಡೆಯಸುತ್ತದು ಚಿಮ್ಮುರಿಯಾಗೆ ಶಂಕರಂ ॥೧೩॥

ಮ॥ ಸ್ರ॥ ವೃ॥

ಜವದಿಂದೇಳ್ತಂದು ತದ್ವಾರವನಿತೆಯರ ಸೀಮಂತ ರತ್ನಂಬೊಲೊಪ್ಪಿ ।
ರ್ಪುವ ಸರ್ವಾವಸ್ಥೆಯೊಳ್ಸರ್ವಸುಖವನನುವಿಂ ಲಿಂಗಮೂರ್ತಿಂಗೆ ಕೂರ್ತೀ ॥
ಯುವ ಭಾಸ್ವದ್ರಮ್ಯ ಹರ್ಮ್ಯಾಗ್ರದೊಳೆಸೆವ ಸಖೀವೃಂದದಿಂ ಸೇವೆಯಂ ಕೊ।
ಳ್ಳುವಳಂ ಕಂಡೊಲ್ದು ಸಾರ್ದಂಕಪಟಭುಜಗ ವೇಷಾಂತರಂದಾಳ್ದು ಮಾಗಳ್
॥೧೪॥

ವಿಟರೂಪಂ ಬೆತ್ತುಸಾರ್ತಂದಭವನನನುವಿಂ ಪಾಣ್ಬೆಯೇಳ್ತಂದು ಮುದ್ಯ ।
ತ್ಸ್ಫುಟ ಪರ್ಯಂಕಾಗ್ರದೊಳ್ಕುಳ್ಳಿರಿಸಿ ಮದನಲೀಲಾ ವಿಲಾಸಂಗಳಿಂದಂ ॥
ಚಟುಲಂಕೈಮಿಕ್ಕು ಕರ್ಪೂರದಿನಿವೆರೆದ ತಾಂಬೂಲಮಂದೆತ್ತು ಮೋಹಂ ।
ಘಟಸಲ್ಕಂದರ್ಪಭೋಗಕ್ಕನುಸರಿದು ದೃಢಾಲಿಂಗನಂ ಗೊಂಡಳಾಗಳ್ ॥೧೫॥

ಚಂ॥ ಮಾ॥ ವೃ ॥

ಬರೆ ತೆಗೆದಪ್ಪಿ ಚೆಂದುಟಿಯನೊಯ್ಯನೆಚುಂಬಿಸಿ ಮುದ್ದುಗೆಯ್ದು ಮುಂ ।
ಬರಿವ ವಿಮೋಹದಿಂದೊಡನಮರ್ಚಿ ನಿಮಿರ್ಚಿ ನಖಕ್ಷತಂಗಳಂ ॥
ಗುರುಕುಚದಲ್ಲಿ? ಸತ್ಕಲೆಗಳುಣ್ಮುವ ತಾಣವನಂಟ ಪಾಣ್ಬೆಯೊ ।
ಳ್ಬೆರೆದುಚಿತೋಕ್ತಿಯಿಂ ರಮಿಸಿದಂನವಿರೇಳೆ ಪೊದಳ್ದು ಶಂಕರಂ ॥೧೬॥

ಬಿಗುಹುಳಿದಿರ್ಪಪೆರ್ಮೊಲೆ ತೊಲಂಗಿದವಸ್ತ್ರಮುದಿರ್ದರಲ್ಕುರಂ ।
ನಿಗುರಿದಮೈನವಿರ್ಬಗೆಯುಲರ್ದನಿಮೀಲಿತನೇತ್ರಪದ್ಮದಿಂ ॥

ದೊಗೆದ ಸುಖಂಗಳಂಸಲಿಸಿಲಿಂಗಕೆ ಷಣ್ಮುಖದಿಂಸ್ವಲಿಂಗಮಂ ।
ಕ್ರೆಗೆದು ರತಾಂತ್ಯದೊಳ್ಬಿಡದೆ ಸುಂಚದಕಾಲ್ಗೆ ತಗುಳ್ಚಿಸಿದ್ರಿಸಲ್ ॥೧೭॥

ಮ॥ ವಿ॥ ವೃ॥

ಅನಳಾಪಾಣ್ಪೆ ಶಿವಾತ್ಮಸೂತ್ರದೆಡೆಯೊಳ್ತಾನಿಟ್ಟ ಹಸ್ತಾಬ್ಜಮಂ ।
ತವಕಂಗುಂದದೆ ಮೆಲ್ಲನೋಸರಿಸಿ ತಾಂಕೊಂಡೆಯ್ದೆ ತಲ್ಲಿಂಗದ ॥
ಲ್ಲವಿತೊಪ್ಪಿರ್ದಸುವಂ ನಿರೀಕ್ಷಿಸಿಶಿವಂ ಮೆಚ್ಚುತ್ತೆ ತನ್ನೊಳ್ಳಸಮೋ ।
ದವನಾಂತೆಯ್ದಿದನಾಗಳಾಶಯನದಿಂ ತದ್ವಾರ್ತೆಯಂಪರ್ಬಿಸಲ್ ॥೧೮॥

ಚಂ॥ ಮಾ॥ ವೃ॥

ಪರವು ತದೀಯಲಿಂಗದೊಡಗೂಡಿ ಪಣಾಂಗಿಯಜೀವಮಂಕವ ।
ರ್ದಿರಪವನೊಯ್ದನೆಂದೊರೆವವೋಲದು ಚೀರಿತುಕೋಳಿ ಶಂಭುಮಂ ॥
ದಿರದೊಳೆ ಭೂರಿ ಭೇರಿರವಮುಣ್ಮಿತು ತಾವರೆಯುಮ್ಮಳಂಗೊಳ ।
ಲ್ಸರಿಯಿತುಮರ್ವಿನಬ್ಬರಮುದೆಲ್ಲೆಡೆಯಲ್ಲಿ ಪ್ರಭಾತಕಾಲದೊಳ್ ॥೧೯॥

ಕಮಲಾಯಿ ಲಿಂಗನಿಷ್ಠೋ ।
ತ್ತಮ ಸತ್ವಪರೀಕ್ಷೆಗೆಯ್ದೆ ಬಸವಮಹಾತ್ಮಂ ॥
ಗಮಿಪಂ ನೋಡಲ್ಕೆನುತಾ ।
ಗಮಿಪಂತಿನನೊಗೆದನಿಂದ್ರ ದಿಕ್ಪರ್ವತದೊಳ್ ॥೨೦॥

ಯುವತಿ ಕಮಲಾಯಿಸಖಿಯು ।
ರ್ಜವದಿಂ ತದವಸರದಲ್ಲಿ ಶಿವನರ್ಚನೆಗೆ ॥
ಲ್ಲವನಣಿಗೊಳಿಸಿ ಪೊಳೆವಪೊಂ ।
ಜವನಿಕೆಯಂಬಿಡಿಸಿನೋಡೆ ತಲ್ಪಸ್ಥಲದೊಳ್ ॥೨೧॥

ಮ॥ ಸ್ರ॥ ವೃ॥

ಶವಮಾತ್ರಂ ಬೀಳ್ದಿರಲ್ಕಂಡುಕಳವಳಿಸಿ ಕಂಗೆಟ್ಟು ಬಾಯ್ಬಿಟ್ಟು ಸರ್ವಾಂ ।
ಗವನಾಗಳ್ಮುಟ್ಟಿ ನೋಡಲ್ಕುಸಿರಿರದಿರೆ ತದ್ದೇಹಮಂಕೊಂಡು ದುರ್ಜೀ ॥
ವವಿದೇಕಿನ್ನೆಂದು ಪೆರ್ಗಂಬಗಳನಿರದೆ ಮೇಣ್ಕೈಗಳಂ ಪಾಯ್ದು ತಾಪೋ ।
ದ್ಭವದಿಂಭೋರೆಂದು ಕಣ್ಣೀರ್ಗಳ ಸುರಿಸುರಿದತ್ತಳ್ತು ಮೇಲ್ವಾಯ್ದರೆಲ್ಲರ್ ॥೨೨॥

ಭವಿಸಂಗಂ ಸ್ವಪ್ನದೊಳು ।
ದ್ಭವಿಸಿತೊ? ಗುರುಲಿಂಗನಿಂದೆಯಂ ಕೇಳ್ದಿಯೊ? ಲಿಂ ॥
ಗವನದನೇಂ ಮರೆದೆಯೊ? ಪ್ರಾ ।
ಣವನುಳಿದಿರ್ಪಂದವನದನೊರೆನೀನೆನ್ನೊಳ್ ॥೨೩॥

ಕೂಟದೊಳೊದವಿದ ಸೊಗಮಂ ।
ಮೀಟೆನಿಪಾಯಾಯಲಿಂಕರ್ಪಿಸದೆ ಕ್ರಮಂ ॥
ದಾಟದುದೆಂದಿರದೆ ತನುವಂ ।
ಕೋಟಲೆಯಿಂನೀಗಿದಿಯೊ? ದಿಟಮನುಸಿರೀಗಳ್ ॥೨೪॥

ಲಿಂಗಸಮರ್ಚೆಗಲಿಸಿ ಮೌ ।
ನಂಗೊಂಡಿರ್ಪುದುನಿನಗುಚಿತಮೆ ಸೇವೆಯೊಳೇಂ ॥
ಭಂಗಮದಾದುದೊ? ಲಿಂಗಾ ।
ಲಿಂಗಿತೆ ಪೇಳುಸಿಕನಿರ್ಪುದಂ ಬಿಡದೆನ್ನೊಳ್ ॥೨೫॥

ಕಕ್ಕುಲತೆಯ ಕಮಲಕ್ಕನ ।
ನೊಕ್ಕಲಿಸಿರದೊಯ್ದು ದುಕ್ಕದಿಕ್ಕಲಿಗೆನ್ನಂ ॥
ಮುಕ್ಕಣ್ಣನೆ ಪಕ್ಕಿರಿಸಿದೆ ।
ರಕ್ಕಿಪರಾರೆಂದು ಬಿಕ್ಕಿಯಳ್ತರ್ಸಖಿಯರ್ ॥೨೬॥

ಕಮಲಾಯಿ ಮೃತಿಯೊಸಗೆಯಂ ।
ಕಮಲಾಯಿಪಥಾನುಗರ್ಕಳಿಂಚೇಟಿಯರಿಂ ॥
ಗಮನಿಸಿ ಜವದಿಂಬಸವಂ ।
ಪ್ರಮಥಗಣಾನೀಕದಿಂದೊಡನವಂಬಂದಂ ॥೨೭॥

ಇವಳಸುವಂ ನೀಗಿದ ಚಿ ।
ತ್ರವನರಿಯಲ್ಕರಿದಿದೆಂದು ಬಸವಂಬಗೆಯೊಳ್ ॥
ಸುವಿಚಾರಿಸಿ ಲಿಂಗಾಸ್ಯದಿ ।
ನವಲೋಕಿಸಿ ಹಡಪದಪ್ಪಣನನಿರದಾಗಳ್ ॥೨೮॥

ಚಂ॥ ಮಾ॥ ವೃ॥

ಕರೆಯಿಸಿ ಸತ್ಯನಾಥಶರಣೋತ್ತಮನತ್ತಣಿನಲ್ಲದನ್ಯರಿಂ ।
ಪರಿಯದು ಬೇಗಮೆಯ್ದಿ ಕರೆತರ್ಪುವದೆಂದೆನೆ ಪೋಗಿಯಪ್ಪಣಂ ॥

ಚರಣಕೆಬಾಗಿನಿಂದು ಶರಣಾರ್ಥಿಮುಹಾಶಿವಲಿಂಗ ನಿಷ್ಠೆಭಾ ।
ಸುರಶಿವಧರ್ಮಭೂಷೆಕಮಲಾಯಿ ಗತಾಸುವಿನಿಂದೆ ಬೀಳ್ದಿರಲ್ ॥೨೯॥

ಮ॥ ವಿ॥ ವೃ॥

ಅದರಂತಸ್ಥವನೀಕ್ಷಿಸಾತುರತೆಯಿಂ ಶಂಭುಸ್ವರೂಪಂ ದಯಾ ।
ಸ್ಪದನುದ್ಯದ್ವಸವೇಶಮುಖ್ಯಶರಣರ್ನಿನ್ನಂಫ್ರಿಗಂ ಸೂಚಿಸಲ್ ॥
ಪದಪಿಂದಟ್ಟಿದರೆಂದು ಬಿನ್ನವಿಸಲಾ ಸತ್ಯಣ್ಣನಪ್ಪಣ್ಣನಂ ।
ಮುದದಿಂದೀಕ್ಷಿಸಿ ಹಾಸಮುಣ್ಮೆಮೊಗದೊಳ್ಸಾತ್ವಿಸಿಂತವಂ ಪೇಳ್ದಿದಂ ॥೩೦॥

ಮದನಹರಂ ಕಮುಲೆಯಸುರ ।
ತದೊಳಿರ್ದುಕವರ್ದು ಲಿಂಗಮಂ ಪೋಗಿರ್ಪಂ ॥
ಮುದದಿಂದವನಾಕೆಯು ಪೊರೆ ।
ಗೊದಗಲ್ಪ್ರಾಣಪವಮಾನಮೆಯ್ದುಗುಮೆನ್ನಲ್ ॥೩೧॥

ಮ॥ ವಿ॥ ವೃ॥

ಅದನಾಕರ್ಣಿಸಿಯಪ್ಪಣಂ ಮಗುಳ್ದುವೈತಂದೆಯ್ದಿ ತದ್ವಾರ್ತೆಯಂ ।
ಪದಪಿಂ ಪೇಳ್ವುದುಮೊಲ್ದುವರ್ಕರಿತರಲ್ಕಿಲ್ಲಿಂಗಮಂ ದೇಹದೊಳ್ ॥
ಮದನಧ್ವಂಸಕಮೂರ್ತಿಗೊಳಿಸಲ್ಪ್ರಾಣಂ ತಟದ್ವೇಗದಿಂ ।
ದುದಯಂಗೊಂಡುದು ತದ್ಗುಣಕ್ಕೆರಗಿದಳ್ಪ್ರೋತ್ಸಾಬ್ಧಿಯುಕ್ಕೇರಿರಲ್ ॥೩೨॥

"ಶರಣಸತಿಲಿಂಗಪತಿ"ಯೆಂ ।
ಬುರುತರ "ಲಿಂಗೋಪಭೋಗಿ" ಯೆಂಬಾಗಮು ದೊ ।
ಳ್ಪೊರೆಯಂತಿರೆ ನಿಜನುಡಿಯಂ ।
ಸ್ಥಿರಗೊಳಿಸಿದಳೆಂದು ಬಸವಮುಖ್ಯಪ್ರಮಥರ್ ॥೩೩॥

॥ ಹರಿಣೀವೃತ್ತಂ ॥

ಕಮಲೆ ವಿಮಲೇ ಲಿಂಗಪ್ರೀತೇ ಶಿವಾನ್ವಯಭೂಷಿತೇ ।
ಶಮಿತಶಮನೇ ಧರ್ಮಾಕಾರೇ ದಯಾರಸಪೂರಿತೇ ॥
ವಿಮಲಚರಿತೇ ಮಾತೇ ಸದ್ಭಕ್ತಿಶಾಂತಿಸುಶೋಭಿತೇ ।
ಸುಮನೆ ಜಯವೆಂದಾಮೋದಂಬೆತ್ತು ಪಾಡಿದರೆಲ್ಲವರ್ ॥೩೪॥

ಚಂ॥ ಮಾ॥ ವೃ॥

ಸುರನದಿ ಭಾಳಲೋಚನಮುದಂಚಿತಭೋಗಿಗಳಾಗೆಭೂಷಣಂ ।
ಪರಶುಮೃಗಾಂಕಮಸ್ತಕ ವಿಭೂತಿವಿಲೇಪಿತಗಾತ್ರನಾಗಳುಂ ॥
ಮಿರಗುವ ವಿಷ್ಣುನೇತ್ರಮಿಭಚರ್ಮ ಕರಸ್ಥಿತಶೂಲಸೊಪ್ಪುತುಂ ।
ಮರೆಯಿಸಿಮುನ್ನಿನಾಕೃತಿಯನೊರ್ಮೆಗೆಕಾಣಿಸಿದಂ ಪಣಾಂಗಿಗಂ ॥೩೫॥

॥ ಮಂಜುಭಾಷಿಣೀವೃತ್ತಂ ॥

ಸುಮವೃಷ್ಟಿಸೂಸೆ ದಿವಿಜಾನಕ ಪ್ರರಾ ।
ವಮದುಣ್ಮೆ ಪುಷ್ಪಕದೊಳೊಲ್ದು ಕೂರ್ಮೆಯಿಂ ॥
ರಮಣೀಯ ರುದ್ರಮಹಿಳಾಧಿಪತ್ಯಮಂ ।
ಕಮಲಾಯಿಗಿತ್ತನಭವಂ ದಯಾರ್ಣವಂ ॥೩೬॥

ಬಿಡದೊಳಗೆ ಪೊರೆಗೆ ಬೆಳಗುವ ।
ಮೃಡಲಿಂಗಾಭ್ಯರ್ಚನಾನುಸಂಧಾನತೆಯೊಳ್ ॥
ತೊಡಗಿ ಪರಾತ್ಪರಸುಖಮಂ ।
ಪಡೆವಂತೆಸಗುವದನವರತಂ ಶಿವರುದ್ರ ॥೩೭॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ
ಷಷ್ಟಮಾಶ್ವಾಸಂ
—ಸಮಾಪ್ತಂ—

॥ ಶ್ರೀಮಜ್ಜಂಗಮೇಭ್ಯೋನಮಃ ॥

# ನವಮಾಶ್ವಾಸಂ.



ಲಲಿತ ಷಡರ್ಥಗಳಂ ತಿಳಿ ।
ದಲಸದೆಯಾಚರಿಸಿ ವಿರತಿಯಿಂ ಶಿವಮತದು ॥
ತ್ಕಲೆಯಂ ಬೋಧಿಸಿ ನೆಲದೊ ।
ಳ್ಚಲಿಸುವ ಜಂಗಮರಹಸ್ಯಮಂ ಭೋಧಿಸಿದಂ ॥೧॥

ಃ ಶಕಾರವಲ್ಲಿ ಕಂದ ಃ

ಶಶಿಚೂಡ ಶಾಮಲ ಗಲ ಶೀ ।
ಲ ಶೂಲಿ ಶೇಷಧರ ಶೈಲಮಂದಿರ ಶೋಭಾಂ ॥
ಗ ಶಮನಹರ ಶೌನಕ ವಂ ।
ದ್ಯ ಶಂಕರ ಶವರ್ಣಯುಕ್ತ ಪೊರೆವೃಷಪತ್ರ ॥೨॥

ಅವನೀರುಹ ಮೂಲಕ್ಕಂ ।
ಬುವ ನೆರೆಯಲ್ಸಕಲ ಶಾಖೆಗಳ್ತಣೆಯುವವೊಲ್ ॥
ಶಿವಯೋಗಿಯೋರ್ವಗುಣಿಸ ।
ಲ್ಭುವನಾಶೇಷಂ ಸಮಂತು ಸಂತುಷ್ಟಿಸುಗುಂ ॥೩॥

ಶಿವಭಕ್ತನಂಗಮಾಚಾ ।
ರವನಾಂತಿರ್ಕುಂ ನಿರಂತರಾಚಾರಂ ಪ್ರಾ ॥
ಣವನಾಂತಿರ್ಕುಂ ಚಿಲ್ಲಿಂ ।
ಗವನಾ ಪ್ರಾಣಂದಳೆದು ವಿರಾಜಿಸುತಿರ್ಕುಂ ॥೪॥

ಶಿವಯೋಗಿಯೊಳ್ಮಹೋತ್ತಮ ।
ಶಿವಲಿಂಗಮದಿರ್ಕು ಲಿಂಗಮೆ ಕ್ರಿಯಾಂಗಂ ತ ॥
ಚ್ಛಿವಯೋಗಿ ಚಿದಂಗಂ ಭ ।
ಕ್ತಿವರಪ್ರಾಣಂದಳೆದೆಸೆಗುಂ ಚರನಧಿಕಂ ॥೫॥

ಚಂ|| ಮಾ|| ವೃ||

ವಿತತ ಮಹಾವ್ರತ ಪ್ರತತಿಯೊಳ್ಸವಿಚಾರಿಸೆ ಪ್ರಾಣಲಿಂಗ ಸ ।
ದ್ವ್ರತಮೆ ಮಿಗಿಲ್ತದೀಯ ಪರಮವ್ರತಮೇ ಗಿರಿಜಾವರಂಗೆ ಸ ॥
ನ್ನುತ ತನುವಕ್ಕು ಯೋಗಿಯೆಮದೀಯಮುಖಂ ನಿಜಮೆಂದು ಶೈಲಜಾ ।
ಪತಿ ನಿಗಮಾಸ್ಯದಿಂದೊರೆದಿಹಂ ಶಿವಯೋಗಿಗೆ ಸಾಟಿವರ್ಪರಾರ್ ॥೬॥

ತನುಮನಧನಮಂ ನಿರ್ವಂ ।
ಚನೆಯಿಂದರ್ಪಿಸುವ ಭಕ್ತವರ್ಯಂ ಸನ್ಮು ॥
ಕ್ತನೆನುತ್ತ ಭವಾನುಭವ ।
ರ್ಸನುಮತದಿಂದೊರೆದಪರ್ಚರವರಂಪೂಜ್ಯಂ ॥೭॥

ಉದಯಸ್ಥಿತಿ ಲಯಗಳ್ವಿಧಿ ।
ಮದನಪಿತಂ ರುದ್ರಮುಖ್ಯರಿಂಗೆಸೆಯುವವೊಲ್ ॥
ಸದಭಿಸ್ತುತ ಭಕ್ತೋತ್ತಮ ।
ಗದು ಗುರುಲಿಂಗಚರವೃಂದದತ್ತಣಿನೆಸೆಗುಂ ॥೮॥

ಗುರುಲಿಂಗಮಂ ಭಜಿಸಿ ತ ।
ಚ್ಚರ ಪೂಜಾಮುಖದಿನಸಮಕೈವಲ್ಯಮನಾ ॥
ಳ್ದರುಪುಣ್ಯಪ್ರದಚರಿತೆಯ ।
ನೊರೆವೆಂ ಚಿತ್ತವಿಪುದೆಲ್ಲವರ್ಮನದೊಲವಿಂ ॥೯॥

ಚಂ|| ಮಾ|| ವೃ||

ಶರಣಿ ಶಿವಾಧ್ವಸಂಚರಣಿ ಮೋಹ ವಿದಾರಿಣಿ ಸತ್ಯವಾಣಿ ಚಿ ।
ದ್ಧರಣಿ ದಯಾತರಂಗಿಣಿ ಸುಮಾನಿ ಮೃಡಾಣಿ ಪರಾವತಾರಿಣೀ ॥
ತರುಣಿ ನಯಪ್ರಚಾರಿಣಿ ವಿರಾಗನಭೋಮಣಿ ಸೌಖ್ಯಕಾರಿಣೀ ।
ಚರಚರಣಾರ್ಚನಾಭಿರತಿ ನಿಂಬೆಯೆನಿಪ್ಪವಳೊಪ್ಪಿ ತೋರಿದಳ್ ॥೧೦॥

ಹರಶರಣರ ದುರುಗಾವಂ ।
ತರುಳಂತಾಂ ನೀರನಡಕುವಳ್ಕಟ್ಟಳೆಯಾ ॥
ಗಿರೆತನಗೊದವಿದಧನದಿಂ ।
ಚರಮೂರ್ತಿಪದಾಬ್ಜಮಂ ಸಮಂತರ್ಚಿಸುವಳ್ ॥೧೧॥

ಇಂಬಾಗಿರೆ ಚರವರ ರೂ ।
ಪಂ ಬೊಂದಿಸಿ ಭಕ್ತಯುಕ್ತನೇಳ್ತಂದೊಲವಿಂ ॥

ತ್ರ್ಯಂಬಕನವಲೋಕಿಸೆ ಶರ ।
ಣಾಂಬೆ ಗಿರಿಶಸಿಂಬಿನಿಂಬಿಯವರಂಕಂಡಳ್ ॥೧೨॥
ಕಂಡಾಗಳೆ ನಿಂಬಿಮುದಂ ।
ಗೊಂಡೆಯ್ದೆರಗಿ ಚರಣಾಬ್ಜಮಂತೊಳೆದು ದಯಾ ॥
ಮಂಡಿತಮತಿಯತಿಥಿಗಳಂ ।
ಮಂಡಿಸವೇಳ್ದಳ್ ಮೃದುಮಯತಲ್ಪಸ್ಥಲದೊಳ್ ॥೧೩॥
ರಸಭಕ್ಷ್ಯಭೋಜ್ಯಮುಖ ಪಾ ।
ಯಸಂಗಳಂಸಮೆದು ಜಂಗಮಸಮರ್ಚನೆಗೆಂ ॥
ದೊಸೆದು ಕಲಶಮಂಪೊತ್ತುವ ।
ಳಸವಸದಿಂ ನೀರ್ಗೆಪೋದ ಸಮನಂತರದೊಳ್ ॥೧೪॥

ಚಂ॥ ಮಾ॥ ವೃ॥

ತುರುಗಳ ಕಾಯಲೆಯ್ದಿದಣುಗಂ ಪಸಿವಿಂದುರಿದೇಳ್ದು ಬೆಂದು ನಿಂ ।
ದರಚುತೆ ಮಾತೆಯಿಲ್ಲದಿರೆ ಬಾಸಣಿಸಿರ್ಪುವ ಪಾಕಪಾತ್ರಮಂ ॥
ತೆರೆದುರೆ ಕಂಡುಮೊದನಮನುಣ್ಬುವ ಕಾಲದೊಳೆಯ್ದಿ ಕಂಡು ಕಾ ।
ತರಿಸಿಕನಲ್ದುತಾಂ ಮುಸಲದಿಂಪೊಡೆದಿಕ್ಕಿದಳಾತ್ಮಜಾತನಂ ॥೧೫॥

ತುಡುಗುಣ್ಬುವ ಪೇರಡಿಯಂ ।
ಬಡಿವೊಲ್ಬಡಿದಿಕ್ಕಿಮಿಕ್ಕಿ ಸರಸರನಡಿಯಂ ॥
ಪಿಡಿದೆಳೆದು ಪುಲ್ಲಮರೆಯೊ ।
ಳ್ಮಡಗಿ ಮೃತಿಸ್ನಾನಕರ್ಮಮಂ ವಿರಚಿಸಿದಳ್ ॥೧೬॥

॥ ಸುಂದರವೃತ್ತಂ ॥

ಮಂದಿರಮಂ ಶುಚಿಗೆಯ್ದು ಭಕ್ಷಸುಭೋಜ್ಯಮಂ ।
ಸಂದಿರದೆಂದಿನವೋಲೊಡರ್ಚಿ ಶಿವಾರ್ಚನಂ ॥
ನಂದಮಲರ್ಚಿರೆಗೆಯ್ಸಿ ಲಿಂಗಸುತೃಪ್ತಿಗೆಂ ।
ದಿಂದುಧರಾತಿಥಿಗಳ್ಗೆವಂದಿಸಿ ನಿಂದಿರಲ್ ॥೧೭॥

ತನುಭವನೆಲ್ಲಿದನಾಗಳೆ ।
ತನುಪಸಿವಿಂಬೆಂದುನೊಂದು ನಿಟ್ಟುಸಿರಿಂದಂ ॥
ಜಿನುಗಿ ಕರೆಕರೆದು ಕಾಣದೆ ।
ಮನೆಯ್ಪೋದಂಜನನಿಕರೆವುದಾತ್ಮಜನಂ ॥೧೮॥

ಇನಿತೇಕೆ ನಿನಗೆ ಕಲ್ಲೆರ್ದೆ ।
ತನಮಾತ್ಮಜರೆಯ್ದೆ ಬರಲವರ್ಗುಣ್ಣಿಸುತುಂ ॥
ತನುಶಾಂತಿಗೊಳಿಸದಿರ್ದೊಡೆ ।
ಜನಿಯೊಳ್ಜನರಾಳವಾಡದೇನಿರ್ದಪರೇ ॥೧೯॥

ಇಳೆಯೊಳೆಳೆಯರಂ ನಾವೇಂ ।
ತಳೆದರಿಯವೆ ತಳೆದ ಬಸಿರಿದೆಂತಿರ್ಪುದುಣ ॥
ಲ್ಕೆಳಸಿದೆಳೆಯಂಗೆ ನೀಡದೆ ।
ಯಳವಡಿಸಿದೆ ಭಕ್ಷ್ಯಭೋಜ್ಯಭೋಜನಮನಿದಂ ॥೨೦॥

ನಲವೆತ್ತರ್ಭಕರಿಲ್ಲದ ।
ನಿಲಯಂವಿಲಯಂ ತನೂಜರೊಡನಿರದೂಟಂ ॥
ಬಲುಕಾಟಂ ಸುತರಿಲ್ಲದ ।
ನೆಲಸಿದಸಿರಿದಳ್ಳುರಿಯೆನುತೊರೆವರ್ವಿಬುಧರ್ ॥೨೧॥

ಎಂದಿಂದುಧರಂ ಸುಂದರ ।
ಕಂದಂ ಮಡಿದಂದವನರಿಯದವೊಲ್ನುಡಿಯಲ್ ॥
ಮಂದಪ್ರಹಾಸಮುಣ್ಮೆಮು ।
ಖೇಂದೀವರದಲ್ಲಿ ನಿಂಬಿನಯದಿಂನುಡಿದಳ್ ॥೨೨॥

ನುಡಿಯದಿರು ನಿನ್ನಟಕ್ಕಿನ ।
ನುಡಿಯಂ ಸಿಕ್ಕುವೆನೆ ನಿನ್ನಪಂಗಿನೊಳಿರ್ಪಂ॥
ಬಡಸಿರಿಯೊಳ್ವನವನವೊ ।
ಲ್ಪೊಡವಿಯೊಳಾನಲ್ತುದೇವನಿರ್ಜಡಳಿರ್ಪೆಂ ॥೨೩॥

ತನುಜನ ರಕ್ಷಿಪ ಭಕ್ಷಿಪ ।
ಮನದನುಮಾನವೆಮಗೇಕೆ ನೀನೀವ ಲಸ ॥
ದ್ಘನಪದವಿಯನರ್ಥಿಸೆ ನಾಂ ।
ಚಿನುಮಯ ನೀನುಂಡೊಡಲ್ಲದಡಿಯಿಡಲೀಯೇಂ ॥೨೪॥

ನಿಮಗಾಂ ನೇಮದೊಳಿಸಗಿದ ।
ವಿಮಲಾನ್ನಮನಿರದೆಕಳ್ದು ಮೆಲ್ದಘಮವನಂ ॥
ಶಮನಂಗೆಯ್ದುದು ಸಂತಾ ।
ಪಮನೊಂದದೆ ಭುಂಜಿಸೆಂದನುವಿನಿಂ ನುಡಿದಳ್ ॥೨೫॥

ತರುಣೀಮಣಿನಿಂಬಿಯು ಸ |
ದ್ವಿರಕ್ತಿಭಾವಕ್ಕೊರಲ್ದು ಬ್ರಹ್ಮಕಪಾಲಂ ||
ಕರದೊಳ್ಕಿರದೊಳ್ಪಿರಿ ಪೇ |
ರುರದೊಳ್ಭುಜಗಂವಿರಾಜಿಸೆಶಿವಂಮೆರೆದಂ ||೨೬||

|| ಶಿಖರಿಣೀವೃತ್ತಂ ||

ಶಿವಂರೂಪಂದೋರಲ್ಕೊಡನನುವಿನಿಂ ನಿಂಬಿ ನಸುನ |
ಕ್ಕು ವೇಷಂದಾಳ್ದೀಳ್ತಂದಿರೆ ತೆಗಳ್ದನೇ ಪೂರ್ವದೊಳಿದಾಂ ||
ಭವಜ್ಜಂದ್ರಂಶೂಲಂ ಗಜದಜಿನಮುಂಕಂಡ ದಿನಮಿಂ |
ದು ವಿಶ್ವೇಶಂ ನೀನೆಂದರಿದೆನೆ ಬಿಜ್ಜೈ ವೈಶಿಕಮಿದಂ ||೨೭||

ಮ|| ವಿ|| ವೃ||

ವೆಂಲೆವಾಲೂಡೆನುತ್ತೆ ಡೋದಿಪತನೂಜಾತಂಗೆ ಬೇಡೊಂದದಂ |
ಘಲವಂತಂದಿಡುತೆಯ್ದೆ ತನ್ನಮೊಲೆಯಂ ತಾಯ್ವಂಚಿಪೋಲ್ಭೋಹಮಂ ||
ಸಲೆ ನೀಂಕಾಣಿಸಿ ಭಕ್ತಿಶಕ್ತಿ ಮರೆಮಾಂಜಲ್ಕಾತುರಂಗೊಳ್ವಬೇ |
ಡೆಲೆ ತನ್ಮಾಯಿಕರೂಪಕಾಂ ಸಡೆವನೇ ಮಾಣೀಗಳೀ ರೂಪಮಂ ||೨೮||

ಉ|| ಮಾ|| ವೃ||

ಸೌಂದರನಂಬಿಯಿರ್ದನೆಲೆಗಾವಗನಂದನೆ ಗೂಡಿಪೋದೆ ನೀಂ |
ಸುಂದರಸಾಮವೇದಿಗಳ ಯಜ್ಞಕದಾವಹಿಭೂಷಮಾಂತು ಮೇ ||
ಳ್ತಂದೆಲೆ ದಾಸಿಮುಯ್ಯನೆಡೆಗಾವನಲಾಂಬಕಮಾಳ್ದುಪೋದೆ ಚೆ |
ಲ್ವೊಂದಿದ ಬಿಜ್ಜದೇವಿಯೆಡಗಾವ ಮೃಗಾಜಿನಮಾಂತು ಬಂದೆ ಪೇಳ್ ||೨೯||

ತಳೆದಾವ ಪಂಚಮುಖಮಂ |
ಸುಳಿದೈ ಪಿಟ್ಟವ್ವೆಯೆಡೆಗೆ ಘಳಿಲನೆಪೇಳ್ಬಾಂ ||
ಬೊಳೆಯನದಾವುದನಾಳ್ದಾ |
ಗಳೆಗಮಿಸಿದೆ ದಭ್ರಭಕ್ತವರನಂಗಣದೊಳ್ ||೩೦||

ಉಪಚರಿಸರೆ ನಿನ್ನನವ |
ರ್ವಿಪುಲಮಹಿಮರಂತವರ್ಗಳನುಚರಳಾಗಿ ||
ರ್ಪ ಪಸುಳೆಯೆನ್ನೊಳಿದೇತಕೆ |
ವಿಪರೀತಂ ಬಿಸುಟು ನಿನ್ನಕೈತವಕೃತಿಯಂ ||೩೧||

ಪೆರತೆಣಿಸದೆ ಗಣಿಸದೆ ಮೇ. ।
ಣ್ಪೆರತಾಡದೆ ಭುಂಜಿಸೆಂಬ ನಿಂಬಿಯ ವಿಲಸ ॥
ದ್ವಿರತೆಯ ನಲ್ವಾತಿಗೊಲಿದು ।
ಗಿರಿಶಂ ಸಂತೋಷಮುಣ್ಮಲಾರೋಗಿಸಿದಂ ॥೩೨॥

ಮ॥ ಸ್ರ॥ ವೃ॥

ಸಿರಿಯಾಳಂಸೀನೆಸಿಂದೊರ್ಮೆ ಸುತನನೆಳಸಲ್ಕಿತ್ತು ಮೇಣ್ಪುತ್ರನಂ ನೀ ।
ನೆರೆದಯ್ನಿರ್ಮೋಹ ನಿರ್ಲಿಪ್ತ ಹೃದಯದಿನಿವಳ್ಪುತ್ರನಂಕೊಂದು ಪುಲ್ಲೊಳ್॥
ಮರೆಗೆಯ್ದುಂ ಯೋಗಿಯಂತೃಪ್ತಿಗೊಳಿಸಿದಳಿವಳ್ನಿಂಬಿ ನಿಷ್ಕಾಮ ಭಕ್ತಿಂ ।
ಗೊರೆಯಲ್ತೆಂತಾದೊಡಂ ನೀನೆನುತೆ ಮನದಹಂಕಾರಮಂ ಮಾಣಿಸಿರ್ದಂ ॥೩೩॥

ನಿಂಬಿ ತನುಜಂಗಸುವಿ ।
ತ್ತಂಬರಯಾನದೊಳತಿಸಡಗರದಿಂಪೆರೆಸು ॥
ತ್ತಂಬಾವರನಾತ್ಮ ನಿವಾ ।
ಸಂ ಬುಗಿಸಿದನೊಪ್ಪಿ ದೇವದುಂದುಭಿ ಮೊಳಗಲ್ ॥೩೪॥

ಸಾಲೋಕ್ಯಮುಖ ಚತುರ್ವಿಧ ।
ಲಾಲತ್ಯ ಪದತ್ವಗಳಿನಿತೋಪ್ಯತಿಶಯಮೆಂ ॥
ದಾಲೋಕಿಸಿ ಚರಸೇವಾ ।
ಲಾಲಸೆಯಿಂ ನಿಂಬಿ ರಾಜಿಸಿದಳೀಜಗದೊಳ್ ॥೩೫॥

ಪರಮ ನಿರಂಜನ ನಿರುಪಮ ।
ನಿಪಘ ನಿರಾಭಾರಿ ಜಂಗಮಂ ನೀನಿಂತೆಂ ॥
ಬುರು ನಂಬಿಗೆಯಿತ್ತೋವುದು ।
ನಿರುತಂಚರಚಕ್ರವರ್ತಿ ಭೋಶಿವರುದ್ರ ॥೩೬॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ನವ
ಮಾಶ್ವಾಸಂ
—ಸಮಾಪ್ತಂ.—

॥ ಓಂ ಪಾದೋದಕ ರೂಪಿಣೇನಮಃ ॥

## ದಶಮಾಶ್ವಾಸಂ.



ಶಿವಪಾದೋದವನಗಲದೆ ।
ಶಿವಭಾವದಿನೀಂಟುವಂಸ್ವಕುಲಬಂಧುಗಳಿಂ॥
ಸವೆಯುದ ಸಾಯುಜ್ಯವನೆ !
ಯ್ದುವ ಪಾದೋದಕ ರಹಸ್ಯಮಂ ನಿರವಿಸಿದಂ ॥೧॥

ಧರ್ಮಕಲೇವರನಿರ್ದುಂ ।
ಧರ್ಮಹರಂ ಭೂಧ್ರಧರ್ಮನಿರ್ದುಂ ಕರುಣಾ ॥
ಧರ್ಮಂ ವಿರುದ್ಧಮಯಗುಣ ।
ಧರ್ಮಗನೆಮಗೀಗೆ ಸೌಖ್ಯಮುಂ ವೃಷಪತ್ರಂ ॥೨॥

ಮುಟ್ಟಿದೊಡಘ ಸಂಕುಲಮುಂ ।
ಸುಟ್ಟಳಿಗುಂ ಬ್ರಹ್ಮಘಾತಮುಖ ದುರ್ದೋಷಂ ॥
ಬಿಟ್ಟೋಡುಗೂರ್ಮೆ ದಿಟ್ಟಸ ।
ಲಿಟ್ಟಣಿಸಿದ ಸರ್ವಸೌಖ್ಯಗಳನೊಂದಿಸುಗುಂ ॥೩॥

ಸಾರ್ದೊರ್ಮೆ ಶಿರಃಕಂಜದೊ ॥
ಳಿರ್ದೊಡೆ ನಿಶ್ಚಂಚಲನಿಜಭಕ್ತ್ಯತಿಶಯದಿಂ ॥
ಪೀರ್ದೊಡೆ ಚಿನ್ಮಯ ಪದಮುಂ ।
ಪೊರ್ದಿಸುಗುಂ ಗುರುಪದೋದಮೇಂ ಕೇವಳಮೇ ॥೪॥

ಶಾ॥ ವಿ॥ ವೃ॥

ಪಾಕಾರಂ ಶಿವಚಿತ್ಕರಂ ದುರಿತದುರ್ದೋಷಂಗಳಂ ತಳ್ಳುಗುಂ।
ದೋಕಾರಂವಿಮಲಂ ದಕಾರಮೆ ಜನಿಚ್ಛೇದಂ ಕಕಾರಂ ಮಹಾ ॥
ಭೂಕರ್ಮಂಗಳನಿಕ್ಕುಗುಂ ಪ್ರವಿಲಸಲ್ಲಿಂಗಕ್ಕೆ ಕಿಂಚಿನ್ಮನೋ ।
ದ್ರೇಕಂಗೊಳ್ಳದೆ ತತ್ಪದೋದನೆರವಂ ಸದ್ಭಾವಿತಂ ಸೇವಿತಂ ॥೫॥

ಚಂ|| ಮಾ|| ವೃ||

ಸಕಲನದೀನದಸ್ನಪನದಿಂದೊಗೆವರ್ಗಳ ಸಿದ್ಧಿ ಶೀರ್ಷದೊ |
ಳ್ಪ್ರಕಟಿತಪಾದಶಂಬರವನಾಳ್ದನಿತಕ್ಕೊಡಗೂಡಿಬರ್ಕುಗುಂ||
ಸುಕರ ಸುತೀರ್ಥದೊಳ್ಮಿನಿದ ಸತ್ಫಲಮುಂ ಚರುಣಾಂಬು ಬಿಂದುವೊಂ |
ದಕೆ ಸರಿಯಲ್ತು ನಿಶ್ಚಲನಿರಾಮಯನಿಷ್ಕಲ ನಿತ್ಯನಿರ್ಮಲಂ ||೬||

ಮ|| ವಿ|| ವೃ||

ಗುರುಪಾದೋದಕದತ್ತಣಿಂ ಸುಳಿದು ಝುಂಝೂವಾರುತಂ ಕಂಪನಿಂ |
ದುರು ತಂಪಿಂದವನೊಂದಿ ಶೇಷಪತಿ ಪಾನಂಗೆಯ್ದು ಭೂಭಾರಮಂ ||
ಧರಿಪತ್ಯುನ್ನತಶಕ್ತಿಯಂ ತಳೆದನಾ ಗೌರೀಶಗಾಲಂಕೃತಂ |
ವರಭೋಗೀಶ್ವರನೆಂಬಪೆಂಪುವಡೆದಂ ಪಾದೋದಕಂಚಿತ್ಕರಂ ||೭||

ಚಂ|| ಮಾ|| ವೃ ||

ಘನಗುರುಲಿಂಗಜಂಗಮ ಪದೋದಿತಸತ್ಕರುಣಾಜಲಂ ಮಹಾ |
ವಿನಯಜಲಂ ಸಮತ್ವಪರಿಪೂರ್ಣಜಲಂ ತ್ರಿವಿಧಪ್ರಸನ್ನ ಪಾ ||
ವನಜಲಮಂ ವಿಶೇಷಶಿರದೊಳ್ತಳೆಯಲ್ತೊಡಗಿರ್ದ ಸಂಚಿತಾ |
ದಿ ನಿಯುತ ಮೂದೆರಂದಳೆದ ಕರ್ಮಗಳುರ್ಕಳಲ್ಚಿ ಪೋಕುಗುಂ ||೮||

ಮ|| ೯|| ವೃ||

ನುಡಿಯಲ್ಪ್ರಾಣಕೆ ತೋಯಮೇ ಪರಮಮೂಲಾಧಾರಮಾಗಿರ್ದೊಡೇಂ |
ಜಡಮುಂ ತಾನದನೊಂದನೊಂದಿ ಸವಿಯಲ್ಪ್ರಾಣೇಂದ್ರಿಯಾನೀಕಕಂ ||
ಜಡದುರ್ಭಾವನೆಯಂಟಿಯಕ್ಷನಿಕರಂ ದುಸ್ಸಂಗದುಶ್ಶೀಲದಿಂ |
ದೊಡಗೂಡಿರ್ಕುಮದತ್ತಣಿಂದವುಗಳಂ ಸನ್ಮರ್ದಿಸಲ್ಕಾಷಧಂ ||೯||

ಶ್ರೀಸದ್ಗುರುಚರಣಾಬ್ಜದೊ |
ಳು ಸಂಭವಿಸಿದರ್ಗಳ ದಶವಿಧಪದಸಲಿಲಂ ||
ಲೇಸಂ ದಶವಿಧಮರುತನ |
ನೋಸರಿಸಲ್ಮುಖ್ಯಸಾಧನಂ ಪೆರತಿಲ್ಲಂ ||೧೦||

ಚ|| ಮಾ|| ವೃ||

ಅನಿಲಮದೊಂದಿ ನಿಲ್ಲದೊಡೆ ತನ್ಮನಮುಂ ಸ್ಥಿರಗೊಳ್ಳದಿರ್ಕುಮಾ ||
ಮನವನೆಕಟ್ಟದಿಂದ್ರಿಯ ಕುಚೇಷ್ಟೆಯಣಂಗದದರ್ಕೆಸಿಕ್ಕಿಜೀ ||

ವನಮತಿನೊಂದು ಬೇಗೆವಡೆದಿರ್ಪನಭೀಲಮರುತ್ರ್ರತಾಪಮಂ ।
ಹನನಿಸೆ ನಿಶ್ಚಯಂದಶವಿಧಾತ್ಮಕಪಜ್ಜಲವೇಳ್ಕುಮಾವಗಂ ॥೧೧ ॥

ಕುಟಿಲಂ ಕುಹಕಂ ಮೂರ್ಖಂ ।
ಕಟುಕಂ ಚಾಂಡಾಲನಿರ್ದೊಡಂ ಸಂಸೃತಿ ಭಿ ॥
ತ್ಪಟುಗುರುತೀರ್ಥವನೀಂಟ ।
ಲ್ದಿಟಮಿಗೆ ಮೃತ್ಯುಂಜಯಶಿವನಪ್ಪಂತಪ್ಪಂ ॥೧೨॥

ಚಂ॥ ಮಾ॥ ವೃ॥

ಗುರುವರಶೀರ್ಷ ಭೂಜದೊಗೆದುಂ ಪದಶಾಖೆಯ ತುಟ್ಟತೂರಲು ।
ತ್ತುರಫಲ ಪಾದಶಂಬರಮೆ ಪಂಚವಿಧಾತ್ಮಕಸೂತಕಂಗಳಂ ॥
ತರಿದತಿ ಘೋರಸಂಸೃತಿಯರಣ್ಯದೊಳಳ್ವ ಜಡಾತ್ಮಜೀವರಿಂ ।
ಗರಿಯೆ ಪ್ರಶಾಂತಸದ್ಗತಿಯನೀವುದುವೋವುದು ತಪ್ಪದೆಂದಿಗುಂ ॥೧೩।

ಪಾ॥ ವಿ॥ ವೃ॥

ಶಿವಶೀರ್ಷಾಂಬುಜದಿಂ ಧರಾವಲಯಮಂ ಸಾರ್ದೆಯ್ದೆ ಮೀವರ್ಕಳಂ ।
ಗವನೊಂದಿರ್ಪುವ ಬಾಹ್ಯದುರ್ಮಲಗಳಂ ತಳ್ಪೊಯ್ವದೇವಾಪಗಾಂ ॥
ಬುವಿನಿಂದೂರ್ಜಿತಮರ್ಗಳಂ ಗುರುಪದಾಂಗುಷ್ಠಾಗ್ರದಿಂ ಪುಟ್ಟಬಾ।
ಹ್ಯವನಂತರ್ಯಮನಾಂತ ದುರ್ಮಲಗಳಂ ತಳ್ಪೊಯ್ವ ಪಾದೋದಕಂ ॥೧೪॥

ಸಂದರ್ಭಕ್ಕುಚಿತಮೆನಿ ।
ಪ್ಪೊಂದತಿ ಪುಣ್ಯಪ್ರದೇತಿಹಾಸಮನೊರೆವೆಂ ॥
ಸಂದೆಗಮನುಳಿದು ಬಗೆಯಂ ।
ದಂದಾಲಿಪುದು ಬಿಡದೆ ಶ್ರವಣೇಚ್ಛುಗಳೆಲ್ಲರ್ ॥೧೫॥

॥ಸ್ವಾಗತವೃತ್ತಂ ॥

ಭಕ್ತಿ ಚಿದ್ವಿರತಿ ಸಂಪದಕೋಶಂ ।
ತ್ಯಕ್ತ ದುಃಖಕರಸಂಸೃತಿಪಾಶಂ ॥
ವ್ಯಕ್ತ ಶೈವಮತಪದ್ಮದಿನೇಶಂ ।
ಯುಕ್ತ ಜಂಗಮಸಮರ್ಚನವೇಶಂ ॥೧೬॥

ನಿರ್ಗತ ಷಡ್ರಿಪುವರ್ಗಂ ।
ಭರ್ಗಕಥಾಮೃತಸುಭೋಜನಂ ದುರ್ಭಿವಿ ಸಂ॥

ಸರ್ಗರಹಿತಶೀಲಂ ನೈ ।
ಸರ್ಗಿಕ ದಿವ್ಯಾಪ್ರತರ್ಕ್ಯಮಹಿಮಾಧಾರಂ ॥೧೭॥

ರಾಜ್ಯಸುಖವಿಭವಮಂ ಸಂ ।
ತ್ಯಾಜ್ಯಂಗೆಯ್ದಿರದೆ ಜನಿಜರಾಮೃತಿಗದ ಭೈ ॥
ಷಜ್ಯಂ ಮೋಳಿಗೆಮಾರಂ ।
ಪ್ರಾಜ್ಯಾಮಲ ವಿಶದಕೀರ್ತಿಯಿಂರಂಜಿಸಿದಂ ॥೧೮॥

॥ ತರಳವೃತ್ತಂ ॥

ನಿರುತಮುಗ್ರವನಕ್ಕೆಪೋಗಿ ಕುಠಾರದಿಂಸಮಿಧಂಗಳಂ ।
ತರಿದು ಬಲ್ಪೊರೆಗಟ್ಟಿ ನೆಟ್ಟನೆ ಪೊತ್ತುಸಂತಸದಿಂದ ಮು ॥
ಳ್ಳಿರದೆ ಮಾರಿ ತದರ್ಥದೊಳ್ತಣಿಸುತ್ತೆ ಜಂಗಮವೃಂದಮಂ ।
ಪರಮಸಂಭ್ರಮದಿಂದೆ ಮೋಳಿಗೆಮಾರನೆಂಬವನಿರ್ದನಂ ॥೧೯॥

ಬಸವಪ್ರಭುಮಂದಿರ ಷ ।
ಡ್ರಸಭೋಜನದಿಂತಣಿಯದೆ ಜಂಗಮನಿಕರಂ ॥
ಮಿಸುಪಂಬಕಳಮನಾರೋ ।
ಗಿಸಿತಣಿಗುಂ ಮಾರದೇವನಾ ಮಂದಿರದೊಳ್ ॥೨೦॥

ಅಂತಾರೋಗಿಸಿ ಜಂಗಮ ।
ಸಂತಾನಮದೊರ್ಮೆ ಬಸವಮಂದಿರಕೇಳ್ತಂ ॥
ದಂತರಿಸದೆ ತನ್ಮುಖಮಂ ।
ಸಂತಸದಿಂಗೂಡಿನೋಡಿ ಬಿಡದಿಂತೆಂದರ್ ॥೨೧॥

॥ ನರ್ದಟಕವೃತ್ತಂ ॥

ಎಲೆಬಸವೇಶ ನಿನ್ನಗೃಹದೊಳ್ಸಮೆದಿರ್ದ ರಸಾ ।
ಮಲ ನವಷಡ್ರಸಾನ್ನತತಿ ಮೋಳಿಗೆಮಾರನ ತ ॥
ನ್ನಿಲಯದೊಳಿಂಬುವೆತ್ತ ಮಿಸುಪಂಬಕಳಕ್ಕೆಣೆಯ ।
ಲ್ಲಲಸದೆ ಮೆಲ್ಪನಾಲಿಗೆಗೆ ಮಿಕ್ಕರಸಂ ವಿರಸಂ ॥೨೨॥

ಅವಿರತಮಾತ್ಮಕಾಯಕದಿನೊರ್ಕೊಳಗಂಬರೆ ಬ ।
ತ್ತವನಪನೆಯ್ದೆ ತಂದುಮನೆನಿತಲ್ಲಿಗೆಬಂದೊಡಮುಂ ॥

ಶಿವಚರವೃಂದಮಂತಣಿವುಗುಂ ನೆಗಳ್ದಾತನ ಭ ।
ಕ್ತಿವಿಭವಮಂ ಗಿರೀಶನರಿವಂ ಪೆರರೆಂತರಿವರ್ ॥೨೩॥

॥ ಸುಂದರವೃತ್ತಂ ॥

ಎಂದು ಮುಗುಳ್ದುಮುಗುಳ್ದು ಸಂತಸವೆರ್ಚಿಪೇ ।
ಳ್ವಂದುವೃಷಂ ನೆರೆಕೇಳ್ದುವಿಸ್ಮಿತನಾಗಿ ಪೆಂ ॥
ಪೊಂದಿರೆನೋಳ್ಪ ಸದಿಚ್ಛೆಯಿಂ ನಿಜಭಕ್ತನಂ ।
ಬಂದವನಂಗಣಮಂ ಪ್ರವೇಶಿಸಿ ಭಕ್ತಿಯಿಂ ॥೨೪॥

ಮಾರಯ್ಯನ ಸತಿಯಂ ಸ ।
ಚ್ಚರಿತ್ರೆಯಂಕಂಡು ಭಕ್ತಿಯಿಂಮಣಿದು ಕರಾಂ ॥
ಭೋರುಹಮಂ ಮುಗಿಯೆಮುಗಿದು ।
ಕರಾಬ್ಜಮಂ ವಿನಯದಿಂ ತುಳಿಲ್ಗೆಯ್ದಾಗಳ್ ॥೨೫॥

ತಂದಂಬುವನೀಳ್ದುಕೊಳು ।
ತ್ತಂದದಕಾಲ್ಗರ್ಚಿ ಲೀಲೆಯಿಂದೊಳಗಿರದೇ ॥
ಳ್ತಂದಾಸನದೊಳ್ಕುಳ್ಳಿ ॥
ರ್ದಿಂದುಧರ ಮಹಾಶಿವಾರ್ಚನಾನಂತರದೊಳ್ ॥೨೬॥

ಚಂ॥ ಮಾ॥ ವೃ॥

ಪಸಿವೆಡೆಗೊಂಡುದೆಮ್ಮ ಶಿವಲಿಂಗಕೆ ಗೇಹದೊಳಿರ್ದುದಂ ನಿವೇ ।
ದಿಸೆನೆ ನಿವೇದಿಸಲ್ಸುದುತಿ ಸಲ್ಲಿಸಿ ಮೇಣ್ದ್ವಿಸಹಸ್ರಸಂಖ್ಯೆಯಾ ॥
ಪೊಸತೆನೆ ಪೊನ್ನನೀವಿಗಳನಲ್ಲಿಯೆ ಮಜ್ಜನಪಾತ್ರೆಸಾರ್ಕೆಯೊ ।
ಳ್ಮಿಸುಗದಮಾಳ್ಕೆ ಬೈತಿಡುತಮೇಳ್ದುಗೃಹಾಂಗಣಕೆಯ್ದಿಗೇಹಮಂ ॥೨೭॥

ಪದೆದವಲೋಕಿಸುತ್ತೆ ಭವಮೋಹತಮಂಧಕೆ ನೀರಜಾಪ್ತಮ ।
ಗ್ಗದ ಸುಖಶಾಂತಿಸಂಪದಕೆಜನ್ಮದಭೂಮಿ ದುರಂತವಿಘ್ನನೀ ॥
ರದಕೆ ಪ್ರಭಂಜನಂ ದುರಿತದುರ್ಗುಣಭೂಮಿಜಕಗ್ನಿ ನೋಳ್ಪೊಡಿಂ ।
ತಿದು ಪರಮುಕ್ತಿಲಕ್ಷ್ಮಿಸುವಿಲಾಸಕೆ ಮಂಜುಲಸೌಧಮೊಚ್ಚತಂ ॥೨೮॥

ಇಂತು ಪೊರೆಯೇರಿಮೀರಿಸ ।
ಮಂತು ಬಗೆಯಲರ್ದುಪಾಡಿ ನಲಿದಾಡಿ ಮುಗು ॥

ಳ್ದಂತರಿಸದಭೀಕ್ಷಿಸಿ ಕೃ ।
ತಾಂತಹರನಿಭಂನೃಷಂ ನಿಜಗೃಹಂಬೊಕ್ಕಂ ॥೨೯॥

ನಡುವಗಲಿನೊಳಂ ಬಿಣ್ಪಿಂ ।
ತಡುಗರ್ಬಿನ ಬಲ್ಪೊರೆ ತಳೆದು ಸಮುತ್ಸವದಿಂ ॥
ಮೃಡನಂ ನೆನೆಯುತೆ ನಿಜಗೃಹ ।
ದೆಡೆಗೆಯ್ತಂದು ಕ್ರಮದಿನಿಳುಪಲ್ಮಾರಯ್ಯಂ ॥೩೦॥

॥ ಅನವದ್ಯವೃತ್ತಂ ॥

ನಿಜಸತೀಮಣಿ ಮೆಲ್ಲಡಿಯಂ ಕರ್ಚಲ್ಕೊಳಪೊಕ್ಕು ಚರಾರ್ಯರಂ ।
ಭುಜಗಕಂಕಣಲಿಂಗಮುಮಂ ಸಂಪೂಜಿಸಿ ನಿಶ್ಚಲಭಕ್ತಿಯಿಂ ॥
ಭಜಿಪವೇಳೆಯೊಳಲ್ಲಿ ವಿರಾಜನ್ನೂತನ ಪೊಂಗಳನೀಕ್ಷಿಸೀ ।
ನಿಜವನೆಯ್ದಿರೆ ಬಂದವರಾರ್ತಾನೆಲ್ಲಿಯವೀ ಪೊಸನೀವಿಗಳ್ ॥೩೧॥

॥ ವಂಶಸ್ಥವೃತ್ತ ॥

ಎನಲ್ಸತೀರತ್ನಮದಾವನೋರ್ವನೆ ।
ಯ್ದನೂನ ಚಿಲ್ಲಿಂಗಸಪರ್ಯೆಮಂ ಮನೋ ॥
ವಿನೋದದಿಂತೀರ್ಚಿತಳರ್ದನೆಂದವ ।
ಳ್ವಿನೀತೆ ಸತ್ಯಾಂಶವನೆಯ್ದೆ ಪೇಳ್ದಿದಳ್ ॥೩೨॥

॥ ಮಂಗಳವೃತ್ತಂ ॥

ಭವನಕಿಂದು ನಡೆತಂದು ಶಿವಾರ್ಚನೆಗೆಯ್ದು ಪೋ ।
ದವನವಂಬಸವನನ್ಯರದಾರೆನವೇಡನೀಂ ॥
ಯುವತಿ ದೀನತತಿಗೀಯಲುಮೋವಲುಮೋರ್ವನೇ ।
ವಿವರಿಸಲ್ಪಟುಸಮರ್ಥನಿಳಾಗ್ರದೊಳನ್ಯರಾರ್ ॥೩೩॥

ಚಂ॥ ಮಾ॥ ವೃ॥

ವಿಪುಲ ಸುಭಾಗ್ಯ ಸಂಗತರೊರಲ್ದು ದರಿದ್ರಜನಾಳಿಯಂ ಸಮಂ ।
ತು ಪೊರೆವುದೇಂ ವಿಚಿತ್ರಮೆ ಸುಭಾಗ್ಯಸಮನ್ವಿತನೀವೃಷಂಗಡಾ ॥
ನೆಪದೆ ದರಿದ್ರಭಾವಹತರೆಮ್ಮನಿಳಾಗ್ರದೊಳೆಯ್ದೆನೋಡಿ ದಾ ।
ನ ಪಟು ದಯಾಳು ನೀಡಿತಳರ್ದಂ ಮನೆಯೊಳ್ಪೊಸ ಪೊನ್ನರಾಶಿಯಂ ॥೩೪॥

ಎಮುಗೆಮ್ಮಲಿಂಗದೇವಂ ।
ಕ್ಷಮೆಯೊಳ್ತಾನೊಲವಿನಿತ್ತ ತತ್ಕಾಯಕದಿಂ ॥
ಸಮನಿಸುಗುಮರ್ಥಮಿಂತೀ ।
ಕ್ರಮವಂ ಬಸವನರಿವನದನಾನೆಂತರಿವೆಂ ॥೩೫॥

ಎಂದು ವಿಡಂಬಿಸಿ ತಳ್ತಾ ।
ನಂದದಿನೆಯ್ತಂದ ಜಂಗಮದ್ವಯಕೆ ಮನಂ ।
ದಂದುರೆ ಪೊಂಜಾಳಿಗೆಗಳ ।
ನಂದು ವಿನಯಪೂರ್ವಕಂ ಸಮರ್ಪಿಸುತಾಗಳ್ ॥೩೬॥

॥ ತರಳವೃತ್ತಂ ॥

ಶರಣಮೋಳಿಗೆ ಮಾರದೇವನ ದಿವ್ಯಭಕ್ತಿಯನಿಂತುಟೆಂ ।
ದರಿದು ಬಣ್ಣಿಸಲಾರ್ಗೆಗೋಚರಮಕ್ಕು ಜಂಗಮವರ್ಯರಾ ॥
ಚರಣಮಂ ತೊಳೆದಂಬುವಂತಳಿದಿಂಧನಂಗಳನೀಕ್ಷಿಸ ।
ಲ್ವರಸುವರ್ಣಗಳಾಗೆ ಖಂಡಿಸಿ ಜಂಗಮೌಘಕೆ ನೀಡಿದಂ ॥೩೭॥

ಕನಕಕಾಷ್ಠಗಳಂ ಚರವ್ರಜಮೆಯ್ದೆಕೊಂಡು ಮಹೋತ್ಸವಂ ।
ಮಿನುಗೆ ಭಾವದೆಸಂದು ತದ್ಬಸವೇಶನಾಲಯಕೆಯ್ದೆ ಭೂ ॥
ವಿನುತ ಭಕ್ತನಲೀಲೆಯಂಮನವೊಲ್ದುಕೀರ್ತಿಸೆ ಕೇಳ್ದು ತ ।
ನ್ಮನದೊಳಚ್ಚರಿಯಾಂತು ಸಾಧ್ವಸಮುಣ್ಮೆಕಂಪಿಸಿ ಭಕ್ತಿಯಿಂ ॥೩೮॥

ನಗಚಾಪರೂಪ ನತಸುರ ।
ನಗ ಭೂಕಲ್ಯಾಣಕಾರ್ಯಧುರ್ಯ ಶಿವೇಶಾ ॥
ನಗಣವಿರಾಜಿತ ಜನಿಮೃತಿ ।
ನಗಪವಿ ಪೊರೆಯೆನ್ನನೆಂದುಬಸವಂಪೊಗಳ್ದಂ ॥೩೯॥

ನುಡಿಯಲರಿದಾದ ಬಡತನ ।
ಮೆಡೆಗೊಂಡ ದರಿದ್ರನೆನ್ನನಿಂತೀತಕನೀಂ ॥
ಸಡಗರದಿಂ ಪಾಡಿದಪ ।
ಯ್ಬಡವರನೇಂ ದಾನಶೌಂಡರಭಿವರ್ಣಿಪರೇ ॥೪೦॥

ಮೊದಲಾನರಿಯದ ಪೊಳಪೊಂ ।
ದಿದ ಪೊಂಜಾಳಿಗೆಗಳನರಿದೆಂ ತ್ವತ್ಕೃಪೆಯಿಂ ॥

ದೊದಗಿದ ಬಡತನಮಂ ನೀ ।
ಗಿದೆನೆನಗಗ್ಗದ ವದಾನ್ಯನೀನೋರ್ವನೆ ದಲ್ ॥೪೧॥

ಮಂ॥ ಕ್ರಾಂ॥ ವೃ॥

ದಾರಿದ್ರ್ಯಂಬೆತ್ತು ನವೆದಪನೀ ಭಕ್ತನೆಂದೊಲ್ದುನೀಂ ಸ ।
ತ್ಕಾರುಣ್ಯಂದಾಳ್ದಿರಿದೆ ಪೊಸಪೊನ್ನೀವಿಯಂತೆತ್ತ ನಿನ್ನೊಳ್ ॥
ಸಾರಾಪ್ತವ್ರಾತಮೆನಗೊಳರೇ ನೀನೆಕಾರ್ಪಣ್ಯಜೀವ ।
ರ್ಗೋರಂತರ್ಥಂಗಳನೊದವಿಸಲ್ಪೇಳದಾರ್ತಕ್ಕರನ್ಯರ್ ॥೪೨॥

ಪೊಸತೊಂದು ವದಾನ್ಯಗುಣಂ ।
ಕೊಸರೇಳ್ತಂದತ್ತುಬಸವ ದೀನರೆಡೆಗೆ ಸಾ ॥
ರ್ದೊಸೆದು ಧನರಾಶಿಯಿತ್ತಪೆ ।
ರಸಯೊಳ್ನಿನಗೆಣೆಯೆ ಸಗ್ಗದುರುವುಂ ಮರನುಂ ॥೪೩॥

ಎಂದವಹೇಳಿಸೆ ಬಸವಂ ।
ದಂದುಗದಿಂ ಮಾರದೇವನಡಿದಾವರೆಯೊಳ್ ॥
ನಿಂದಲ್ಲಿ ಬೆಮರ್ತು ಬೆಗಡಿಂ ।
ಮುಂದರಿಯದ ಮೂಢನಾಗಿ ಕಂಪಿಸುತಾಗಳ್ ॥೪೪॥

ಗಾಂಪನೊಳಧಮನೊಳಾಶಾ ।
ಲಂಪಟನೊಳ್ದರ್ಪಸರ್ಪದಷ್ಟನೊಳೆಂದುಂ ॥
ಸಂಪದ ಗರ್ವಾವಿಲನೊ ।
ಳ್ನೀಂ ಪಶುವೆನ್ನೊಳ್ಗುಣಾವಳಿಯನರಸುವುದೇ ॥೪೫॥

ಬಳಲ್ದಪನೀ ಪ್ರಭುವೆಂದಾ ।
ನೆಳಸೇಳ್ತಂದು ತಣಿಪಲ್ಬಗೆದೆನಕಟ ಧರಾ ॥
ತಳದೊಳ್ನಿರ್ಧನನೆಂದುರೆ ।
ತಿಳಿದೆಂ ನನಗಾನೆ ಪಾಪಿ ಪೊಪೊ ಪೆರತೊಳರೇ ॥೪೬॥

॥ ಪಂಚಚಾಮರವೃತ್ತಂ ॥

ಹಿತಾಪ್ತನೀನೆ ಬಂಧುನೀನೆ ದಾನಿನೀನೆ ಭಾವಸಂ ।
ಗತಪ್ರಭುಸ್ವರೂಪನೀನೆ ಸಂಗಮೇಶನೀನೆ ಯ ॥

ತ್ಯತೀವ ಸೌಖ್ಯಸಂಪದಾಲಿನೀನೆ ಭಾಗ್ಯನೀನೆ ನೀ ।
ನೆ ತಳ್ವದೆನ್ನನೋವುದೆಂದು ದೈನ್ಯದಿಂದೆ ಬೇಡಿದಂ ॥೪೭॥

ಎಂದಪರಾಧ ಕ್ಷಮೆಯಂ ।
ನಿಂದೆರೆದು ಪದಾಬ್ಜದೊಳ್ಮಣಿದಬಸವನನಾ ॥
ನಂದಂಮಿಗೆ ತೆಗೆದಪ್ಪಿ ದ ।
ಯಂದೋರಿ ಕೃಪಾಶರಧಿಯೊಳವಗಾಹಿಸುತುಂ ॥೪೮॥

ವೃದುಸಲ್ಲಾಪಗಳಿಂ ಮುದ ।
ಮೊದವಲ್ನಿಜನಿಲಯಕೆಯ್ದೆ ವೃಷನೆಂದಿನವೊಲ್ ॥
ಸದಯಂ ಮೋಳಿಗೆಮಾರಂ ।
ಸದಭಿಸ್ತುತ ಶರಣಜನಯುತಂ ಸುಖಮಿರ್ದಂ ॥೪೯॥

ಗುರುಲಿಂಗಜಂಗಮಪದಾಂ ।
ಬುರುಹೋದಿತಸಲಿಲಮಂ ನಿರಂತರಮೀಂಟು ॥
ತ್ತುರು ಭವಬಂಧನಮಂ ಸಂ ।
ತರಿಸುವುದಂ ಕರುಣಿಸು ಶಿವರುದ್ರಾಚಾರ್ಯ ॥೫೦॥

ಶ್ರೀಗುರುಪಾದಪದ್ಮಪರಾಗಭಸಿತ

ಫಾಲಪಟ್ಟ ಚೆನ್ನಕವಿವಿರಚಿತಂ

ಶಿವರುದ್ರವಿಜಯಲೀಲಾ

ಪ್ರಬಂಧದೊಳ್ದಶ

ಮಾಶ್ವಾಸಂ

—ಸಮಾಪ್ತಂ.—

|| ಓಂ ಪ್ರಸಾದರೂಪಿಣೇನಮಃ ||

## ಏಕಾದಶಾಶ್ವಾಸಂ.



ತಾಮಸ ದುರ್ಭಾವನೆಯಂ |
ತೆಮುರ್ದು ಶಿವಸತ್ವಭಾವಮಂ ನೀಡುವ ತ ||
ತ್ತೋರ್ಮಾರ್ಧಚೂಡ ಶಿವಶೇ |
ಷ ಮರ್ಮಮಂ ಲಿಂಗಶೇಷರಸಿಕಂ ಪೇಳ್ದಂ ||೧||

|| ಮುಕ್ತಪದಗ್ರಸ್ತಕಂದ ||

ಶಿವಧಾಮ ಧಾಮ ಧಾಮ ಹ |
ರ ವರೀಯ ವರೀಯ ಪೂಜಿತ ಜಿತ ರಮಾತ್ಮೋ ||
ದ್ಭವ ಭವ ಭೂಧ್ರಾಶಸಿ ಶಸಿ |
ತವಿಸುವನೀಗೆ ಸಕಲಾರ್ಥಮಂ ವೃಷಪತ್ರಂ ||೨||

||ಶಿಖರಣೀವೃತ್ತಂ||

ಪ್ರಸಾದಂ ಜ್ಞಾನೈಶ್ವರ್ಯಕರಮಮಲಂ ಶಾಂತಿಸದನಂ |
ಪ್ರಸಾದಂ ದುರ್ವಾರ್ಯಮೋಹಗಿರಿಕುಲಿಶಂ ಪಾಪಹರಣಂ ||
ಪ್ರಸಾದಂ ಚೈತನ್ಯಂ ಸಕಲಸುಖಸೌಭಾಗ್ಯಕರಣಂ |
ಪ್ರಸಾದಂಶೈವಂ ಸರ್ವಜನಿಮರಣಾಂಬೋಧಿತರಣಂ ||೩||

ಕಪಿಲಕಣಾದಮುಖಮಹ |
ರ್ಷಿಪರ್ಪರಶಿವ ಪ್ರಸಾದಮಂಸೇವಿಸಿ ದುಃ ||
ಖ ಪರಂಪರೆಯಂ ಕಳಿದುಳಿ |
ದು ಪರಾತ್ಪರಶಿವಪದತ್ವದೊಳ್ರಂಜಿಸಿದರ್ ||೪||

|| ಮಂಜುಭಾಷಿಣೀವೃತ್ತ ||

ಶತಕೋಟಿಯಜ್ಞಮನೊಡರ್ಚಿ ಬಾಡಬಂ |
ಕ್ಷಿತಿಯಂ ಹಿರಣ್ಯಮುಮುನಿತ್ತ ಸತ್ಫಲಂ ||

ನುತಭಕ್ತಿಯಿಂ ಪರಶಿವಪ್ರಸಾದಮಂ ।
ಕ್ಷಿತಿಯಲ್ಲಿಸೇವಿಸಿದವನಾತ್ರದಾಳ್ದಪಂ ॥೫॥

ಚಂ॥ ಮಾ॥ ವೃ॥

ವಿಮಲಪ್ರಸಾದವನಿಳಾತಳಕೊಕ್ಕುವಮಾಳ್ಕೆ ಭುಂಜಿಪಂ ।
ಗಮನಿಸೆ ಕಿಲ್ಬಿಷಕ್ಕೆಣೆಯವಂ ಭವಿಪಾಪಿ ನಿರಂತಘೋರ ದು ॥
ರ್ದಮನರಕಾಬ್ಧಿಯಲ್ಲಿಳಿದು ಜೀವಿಸುವಂ ಬಿಡದಾವನೊರ್ಮೆಸ ।
ತ್ತಮ ಶಿವಶೇಷಮಂಸವಿದಪಂ ಶಿವನಪ್ಪನವಂ ಸುನಿಶ್ಚಯಂ ॥೬॥

॥ ಮಂಜುಭಾಷಿಣೀವೃತ್ತಂ ॥

ಗುರುಶೇಷಮುಸ್ತಿಗತ ಪಾಪವೃಂದಮಂ ।
ತರಿಗುಂ ಸರೋಜನಯನಂ ಸರೋಜಜಂ ॥
ವರಭಕ್ತಿಯಿಂ ಸವಿದು ಪಾರ್ವತೀಶನಿಂ ।
ದುರು ಶಕ್ತಿಯಂ ಪಡೆದರೇವ್ರೊಗಳ್ದಪೆಂ ॥೭॥

ಚಂ॥ ಮಾ॥ ವೃ॥

ಅಣುತೃಣಕಾಷ್ಠ ಕಪ್ಪುರ ವಸಾನ ವಿಭೂಷಣ ಗಂಧಲೇಪನಂ ।
ಮಣಿಕನಕಂತುರಂಗ ಮುಖವಾಹನಮಂಜನಸಿದ್ಧಿ ತೈಲಮಂ ॥
ಫಣಿಪ ವಿಭೂಷಗರ್ಪಿಸದೆ ಭೋಗಿಸೆ ಪುಲ್ಕಸವಿಟ್ಸಮಾನನೆಂ ।
ದಣೆಯರಮಾಜ್ಞೆಯಿತ್ತಪರವರ್ಶಿವಶೇಷಮಹೋಪಭೋಗಿಗಳ್ ॥೮॥

ಮೃಡಘನಲಿಂಗಶೇಷಮೆ ಚರಪ್ರಭುತೃಪ್ತಿಗೆ ಕಾರಣಂ ಸ್ವಯಂ ।
ಬಿಡದದನೊಲ್ದು ಭೋಗಿಸದೆ ಮೋಸದೊಳೊರ್ಮೆ ಕೃಶಾನುಮುಖ್ಯ ದು ॥
ರ್ಜಡಕದನಿತ್ತೊಡೇ ಪೊಗಳ್ದಪೆಂ ಶಿವಧರ್ಮವಿರೋಧಿ ದುರ್ನರಂ ।
ಸುಡುವತಿ ಘೋರನಾರಕಮನಾಳ್ದು ಪಜೀವಿಸುವಂ ನಿರಂತರಂ ॥೯॥

ಮ॥ ವಿ॥ ವೃ॥

ವಿಮಲಾನ್ನಂದೊರೆಕೊಳ್ಳದಿರ್ಕೆಬಗೆಗಂ ನೈರ್ಮಲ್ಯಮುಂ ಪೊರ್ದದೆಂ ।
ದುಮದುಂ ಶುದ್ಧಿಯನಾನದಿರ್ಕೆ ಸಕಲಾಕ್ಷಂನಿರ್ಮಲಂ ಬೊಂದದಿ ॥
ರ್ಕುಮದುಂ ತನ್ಮತಿಪುಣ್ಯಪಾಪದಿರವಂಸಂಭಾವಿಸಲ್ಕಾರ್ಪದೆಂ ।
ದುಮದುಂಕಾರಣಮದ್ರಿಜಾರಮಣಶೇಷಂಶೈವರಿಂಗಾಶ್ರಯಂ ॥೧೦॥

ಚಂ॥ ಮಾ॥ ವೃ॥

ತ್ರಿವಿಧವಿಶೇಷಶೇಷದೊಳಗಿರ್ಪುವಸದ್ರುಚಿಯಂ ಸಮಂತುರೂ ।
ಪವನುರೆತೃಪ್ತಿಯಂ ಪರತರೇಷ್ಟಕೆ ಪ್ರಾಣಕೆ ಭಾವಲಿಂಗಕಂ ॥
ಸವಿಯಿಸಿ ಮಿಕ್ಕುದಂ ಶಿವಸಮರ್ಚನವೃತ್ತಿ ಚರಪ್ರಶಕ್ತಿಗೆಂ ।
ದವಧರಿಸೇಗಳುಂ ಗ್ರಹಿಪರೊಲ್ದು ಪ್ರಸಾದಮಹೋಪಭೋಗಿಗಳ್ ॥೧೧॥

ಶಿವಗರ್ಪಿಸುತೇಪೊಳ್ತುಂ ।
ಸವಿವನ್ನಂಬಗೆಯಲೆಂಜಲಲ್ತುದುವಿಮಲಂ ॥
ಶಿವಗರ್ಪಿಸದನ್ನಂ ಶಾಂ ।
ಭವಮತಪಥದಿಂ ವಿಚಾರಿಸಲ್ಕಾನೆಂಜಲ್ ॥೧೨॥

ಮ॥ ವಿ॥ ವೃ॥

ಜನಕಂಶಾಂಭವಸುಪ್ರಸಾದಮರಿಯಲ್ತನ್ಮಾತೆಯೇ ಭಕ್ತಿಯಿಂ ।
ತನುವಿಂದೀರ್ವರಕೂಟದೊಳ್ಪರಮಕೈವಲ್ಯಾತ್ಮಜಂ ಲೋಕದೊಳ್ ॥
ಜನಿಸುತ್ತಿರ್ದಪನೆಂಬುಪಾರ್ಯರನುಭಾವಾಚಾರಮಂ ಮೀರದಂ ।
ತೆನಸುಂಕೊಂಬ:ದೆ ಸಕ್ರಮಂ ಹಿತಕರಂ ಸದ್ಭಕ್ತಿಯಿಂಸಂತತಂ ॥೧೩॥

ದೇಶಿಕಕೃಪಾಗತಾಮಲ ।
ವಿಶಾಲ ಶೇಷೇತಿಹಾಸಮುಸಿರ್ವೆಂಭಕ್ತ್ಯಾ ॥
ವೇಶದಿನಂತರಿಸದೆ ತ ।
ತ್ಪ್ರಶಸ್ತಲೀಲೆಯನಿರದುರೆ ಲಾಲಿಪುದೆಲ್ಲರ್ ॥೧೪॥

ಮ॥ ವಿ॥ ವೃ॥

ಧರಣೀಭಾಗದೊಳೇಳ್ಗೆವೆತ್ತೆಸೆವ ಗೊಬ್ಬೂರೆಂಬ ತದ್ಗ್ರಾಮದೊ ।
ಳ್ಮೆರೆದಂ ಸನ್ಮಹಿಮಾಂಬುಧಿ ತ್ರಿವಿಧಶೇಷಾನಂದತೃಪ್ತಂ ದಯಾ ॥
ಪರನತ್ಯದ್ಭುತಸಾರವೀರಚರಿತಂ ದುರ್ವಾದಿವಾಗ್ಭಂಜನಂ ।
ಗುರುದತ್ತಪ್ರಭುಲಿಂಗಸಂಗರಸಿಕಂ ಶ್ರೀಬಿಬ್ಬಿಬಾಚಾಹ್ವಯಂ ॥೧೫॥

॥ ತರಳವೃತ್ತಂ ॥

ಪ್ರಕಟಸತ್ಪ್ರಮರ್ಥರ್ಕಳೂರ್ಜಿತ ದಿವ್ಯಸುಂದರ ಪಾದುಕಾ ।
ಶಕಲದಿಂಸಮೆದಿರ್ದಲಂಕರಣಂಗಳಂ ಭುಜ ಕರ್ಣ ಮ ॥

ಸ್ತ್ರಕ ಕರಾಬ್ಜಮೆನಿಪ್ಪ ತಾಣದೊಳೊಲ್ದುತಾಳ್ದು ಪೊದಳ್ದುದೇ ।
ಶಿಕ ಪದಾಬ್ಜಪರಾಗಮೆಂಬಮಲಾಂಗರಾಗಮನಂಗಕಂ ॥೧೭॥

ಚಂ॥ ಮಾ॥ ವೃ॥

ವಿರಚಿಸುತಂ ಚರೋತ್ತಮರ ಬೀಳುಡೆಯಂ ಪದೆದೊಲ್ದುತಾಳ್ದು ಚಿ ।
ತ್ತಪರಮಮಹೇಶಭಕ್ತರೆಸಗಲ್ಗಣಪರ್ವಕೆಪೋಗಿ ಮೆಲ್ಲನ ॥
ಲ್ಲಿರದೆ ಚರೋತ್ತಮರ್ಕಳೊಲಿದುಂಡುಳುಪಿರ್ದಪ್ರಸಾದಮಂ ಕರಾಂ ।
ಬುರುಹದಿನೆತ್ತಿತೀವಿ ಶಕಟಾಂತರದೊಳ್ಬಿಡದಾಯ್ದುತಂದವಂ ॥೧೭॥

ಸವಿಯುತ್ತವಿರತಮತ್ತ್ಯ ।
ತ್ಸವದಿಂದಿರೆ ಬಿಬ್ಬಿಭಾಸ್ಕರಂಪೌರರ್ಚಿ ॥
ತ್ರವಿಚಿತ್ರಮೆಂದಿವನಿರವ ।
ನವಲೋಕಿಸಿ ಕಡುಕನಲ್ದು ಗುಜಿಗುಜಿಸುತ್ತುಂ ॥೧೮॥

ಬಗೆಬಗೆಯಿಂ ನಿಂದಿಸುತಿರೆ ।
ನಗಜಾವರಭಕ್ತವರ್ಯನಾ ಗೊಬ್ಬೂರೊಳ್ ॥
ಬಗೆದಂದು ನಡೆದಸದ್ಭ ।
ಕ್ತ ಗಣದಪರ್ವಕ್ಕೆ ತಳರ್ದನತಿಸಂಭ್ರಮದಿಂ ॥೧೯॥

ಉ॥ ಮಾ॥ ವೃ॥

ಜಂಗಮಪುಂಗವರ್ಗೆರಗಿ ಮೀರಿದ ಭಕ್ತಿರಸಪ್ರವಾಹದಿಂ ।
ಮಂಗಲತತ್ಪ್ರಸಾದ ತತಿಯಂ ಬಿಡದಾಯ್ದುಪೊದಳ್ದು ಜೋಕೆಯಿಂ ॥
ಪಿಂಗದೆಕೊಂಡು ತೀವಿಶಕಟಾಂತರದೊಳ್ಕಿವಭಕ್ತಸಂಕುಲಂ ।
ಮುಂದೆಸೆ ಪಾಡತಾಡುತೆಸೆಯಲ್ಜಯರಾವಮಳರ್ದುತೀವಿರಲ್ ॥೨೦॥

ಪಳಯಿಗೆ ಮಿಳಿರುತ್ತಿರೆ ತೊಳ ।
ತೊಳಗುತ್ತಿರೆಸತ್ತಿಗೆ ಕಳತೂರ್ಯತ್ರಯದು ॥
ತ್ಕಳಕಳರವಮೆಣ್ದೆಶೆಯಂ ।
ಪಳಂಚಿರೆ ಬಿಡದುಘೇಚಾಂಗುಭಲೆಯೆನುತೊಲವಿಂ ॥೨೧॥

ರಥಮಂ ತರುತಿರೆ ಪುರಧೊ ।
ಳ್ಪಥದೊಳ್ತಡೆಗಟ್ಟೆ ವಿಪ್ರರಣ್ಮುತಲಿದಿರೊಳ್ ॥

ಪೃಥುಲ ಪ್ರಸಾದಮಹಿಮೆಯ ।
ಯಥಾರ್ಥಮನರಿಯದೆ ಮೂಢರವರಿಂತೆಂದರ್ ॥೨೨॥

ಪುಗದಿರ್ಪೊಳಲಂ ನಿಲ್ಲೊಗು ।
ಮಿಗೆಯೇನದ್ಭುತಮಿದೇನುಪಿರ್ಪುದೀಗಳ್ಕೆ ॥
ಮ್ಮಗೆ ಸಡಗರಮಂ ನೆಗಳ್ದಪೆ ।
ಬಗೆತೋರ್ದಂತೆ ಕಡುಕೂರ್ತ ಧೂರ್ತಪ್ರಜದೊಳ್ ॥೨೩॥
ಬಗೆದುಜ್ಜುಗ ಕೈಸಾರ್ದುದೊ! ।
ಮಿಗಲಚ್ಚಣಪಚ್ಚ ಭಕ್ತನಳಿದನೊ! ಪೆರತೊಂ ॥
ದೊಗಪಿನ ಪೇರೊಸೆಗೆಯೊ! ಬ ।
ಲ್ಪಿಗೆಯಂ ಸದೆದಿಕ್ಕಿದತಿಶಯ ಪರಾಕ್ರಮವೋ ॥೨೪॥

ಪೇಸದೆ ಶೂದ್ರೋಚ್ಛಿಷ್ಟಮ ।
ನೋಸರಿಸದೆಮೆಲ್ದು ಪೋಗದನಿತಕೆನೀನೀ ॥
ಮೀಸಲ ಪಾರ್ವರ ಪೊಳಲಂ ।
ಹಸಂಗೆಡಿಸಲೆಯ್ದುವೆ ರಥದೊಳ್ಸಂಭ್ರಮದಿಂ ॥೨೫॥
ಸವಿವಾಂತಿಂದೆಮ್ಮಿಂ ನೀಂ ।
ಸುವಿವೇಕಿಯೆನಿಸೆ ತಳುವದೆ ತೊಲಗುವದೆನುತುಂ ॥
ಕವಿದದ್ವಿಜರೆನಲ್ಕೇಳುತ್ತೆ ।
ಶಿವಶರಣಾಗ್ರಣಿ ಸರೋಷಭೀಷಣನಾದಂ ॥೨೬॥

ಚಂ॥ ವೃ॥ ವೃ॥

ಪಡಪಡ ಪಾಪಕರ್ಮರಿರ ಶಾಪವಿದಗ್ಧ ನಿತಾಂತಘೋರಪೆ ।
ರ್ಬಡಕಿನ ದುರ್ಮಲಾಂಗರಿರ ಪ್ರೋನ್ನತಸನ್ನುತ ವೀರಶೈವಮಂ ॥
ಪಡೆಯದೆ ದುಃಖಪಾಶಕೊಳಗಾಗಿ ಯಥಾರ್ಥಮನಾರದುರ್ಕಿನಿಂ ।
ನುಡಿದಪಿರೇಕೆ ಜಾವಳರೆ ಜಾನ್ಹವಿಚೂಡನಭಕ್ತರುರ್ವಿಯೊಳ್ ॥೨೭॥

ಕುಲಜರ್ಕುಲಗೆಟ್ಟನಿಯಳ ।
ನಲಸದೆ ತಳ್ತಿರೆ ತನುತ್ರಯಾಮಲಿನತೆಯಾಂ ॥
ತಲಘುಶಿವಭಕ್ತರಂ ನೀ ।
ನ್ನೆಲದೊಳ್ಕುಲಹೀನರೆಂಬಿರಚ್ಚರಿಯಲ್ತೇ ॥೨೮॥

ಪಾವನಗುರುಪ್ರಸಾದಮ |
ನಾವಂತಾಸಾರದೆಂಜಲೆಂಬನವಂ ದು ||
ರ್ಜೀವಿ ನರಕದರಮನೆಯೊ |
ಳ್ಜೀವಿಸುವಂ ಜನ್ಮಜನ್ಮದೊಳ್ಸಿದ್ಧಾಂತಂ ||೨೯||

ಶಿವಭಕ್ತಸುಪ್ರಸಾದಂ |
ಭವಿಕುಲಕುಜವನ್ನಿ ಮುಟ್ಟದಿರ್ಕೊಲಗೆನ್ನಲ್ ||
ತವೆ ಮಾಮಸಕಂಮುಸಗ |
ಲ್ಕೆ ವಿಪ್ರರುರಿದು ನೆರೆದು ಕದನಕ್ಕಣಿಯಾಗಲ್ ||೩೦||

ನಿಜಹಸ್ತಾಂಬುಜದಿಂಭವ |
ಕುಜಾನಲ ಶಿವಪ್ರಸಾದಮಂ ನೊಗೆದೆತ್ತು ||
ತ್ರೆಜಪದಿನೀಪೊಳಲಂದಹಿ |
ಸು ಜೋಕೆಯಿನೆನುತ್ತೆ ಬಾಚಯಂಕೆದರಲೊಡಂ ||೩೧||

ಚಂ|| ಷಾ|| ವೃ||

ಪಸರಿಸುತೊತ್ತಿ ಪತ್ತಿ ಮಸೆಯುತ್ತೆ ಛಿಟಲ್ಛಿಟಲೆಂದು ಭೋರನಾ |
ಗಸಕೊಗೆದೇರಿ ಮೀರಿ ಕಿಡಿಸೂಸಿ ಪೊದಳ್ದುರಿಮಾಲೆ ಪರ್ಬಿದ ||
ಳ್ಪಿಸಿ ಸುಮನೋಜ್ಞ ಮುಪ್ಪೊಳಲನೊರ್ಮೆಗೆ ಮುತ್ತಿದ ಶರ್ವನುಗ್ರಸಾ |
ಧ್ವಸನಯನಾಗ್ನಿಯಂತೆಸೆದು ಮುತ್ತಿಪುದಾ ಪೊಳಲಂ ಕ್ಷಣಾರ್ಧದೊಳ್ ||೩೨||

ಎಲೆಎಲೆ ಕಿರ್ಚು ಚುರ್ಚಿದುದು ಬಂದುದು ನಿಂದುದು ನಿಲ್ಲಲೀಯದ |
ಗ್ಗಲಸಿ ಪಳಂಚಿ ಪಲ್ಲವಿಸಿ ತಲ್ಲಣಗೊಂಡುದು ಬೆಂದುದಾಲಯಂ ||
ಜಲಕನೆಪೋಗುಸಾಗು ಪರಿದೋಡಿರದೋಡು ಧನಾದಿ ಧಾನ್ಯಮಂ |
ಚೆಲುವೆಳವಕ್ಕಳಂ ತೆಗೆಯೆನಿಪ್ಪರವಂ ಪಿರಿದಾಯ್ತು ಪಾರ್ವರೊಳ್ ||೩೩||

ಬಿಡುಗಣ್ಣಮುರ್ಪಪ್ಪೊಳಲಂ |
ಮೃಡನುರಿಗಣ್ಣಿಂ ದಹಿಪುದನೀಕ್ಷಿಸಿ ಮುದಮಂ ||
ಪಡೆದೊಲ್ಪಿವಶೇಷಾನಲ |
ಮಡದುರ್ಗರಂಮುತ್ತೆ ಭಕ್ತರಾನಂದಿಸಿದರ್ ||೩೪||

ಪಾರ್ವರ ಪ್ರಯತ್ನಮೆಲ್ಲಂ |
ಪರ್ವತಕರೆ ಪೊತ್ತವೋಲನರ್ಥಮನೊಂದಲ್ ||

ಪರ್ವಿದನಲೋಪ ಶಮನಕೆ ।
ನಿರ್ವಾಹಂಗಾಣದೆ ಬಹುನಿರ್ವಿಣ್ಣತೆಯಿಂ ॥೩೫॥

ಪರಿತಂದು ಪಲ್ಗಿರಿದು ತರ ।
ಹರಿಸದೆ ಗೋಳುಂಡೆಗೊಂಡು ಪರಶಿವನಿಂದಾ ॥
ಪರಿತುಷ್ಟರ್ಮಣಿದುರೆ ಕಿಂ ।
ಕರತ್ವದಿಂ ಬಿಬ್ಬಿಬಾಚನಡಿದಾವರೆಯೊಳ್ ॥೩೬॥

॥ ಚಂ॥ ವಾ॥ ವೃ ॥

ತನುಜಜನದೋಷ ದುರ್ಗುಣಮನಾರದೆ ತಳ್ತಮರ್ದಪ್ಪಿ ಮುದ್ದಿಸು ।
ತ್ತನುನಯದಿಂ ಪಿತಂ ಮರೆದು ಪಾಲಿಸುವಂತೆಸಗಿರ್ದ ದೋಷಮಂ ॥
ಘನಗುಣಶಾಲಿ ಮನ್ನಿಪುದುಮಳ್ಗಿಪುದಿಂದೆಮಗಾದತಾಪಮಂ ।
ವಿನಮಿತಬಂಧು ದೀನಜನವೃಂದಮನೆಯ್ದೆ ದಯಾಕಟಾಕ್ಷದಿಂ ॥೩೭॥

ವಿಮಲಪ್ರಸಾದತೇಜಂ ।
ಕಮರಿಸಿತೆಮ್ಮಗ್ರಹಾರಮಂ ದ್ವಿಜರೆಲ್ಲರ್ ॥
ದುಮುಕಿ ಸೊಡರಿಂಗೆರಗಿದಾ ।
ಕ್ರಿಮಿಯಂತಿರೆ ಬೆಂದುನೊಂದು ಕರಿಮುರಿವೋದರ್ ॥೩೮॥

ಸಕುಟಿಲರಭವಶರಣ ನಿಂ ।
ದಕರೆನಿಪೆಮ್ಮಲ್ಲಿ ಗುಣಗಳನರಸದೆ ಭವ ॥
ತ್ಪ್ರಕಟಗುಣಂ ಮೆರೆದೆಮ್ಮಂ ।
ಸುಕರಂಮಿಗೆಪಾಲಿಸೆಂದು ಮಗುಳ್ದಿರಗಲೊಡಂ ॥೩೯॥

ಉ॥ ವಾ॥ ವೃ ॥

ವಿಪ್ರವಿತಾನಕಂದೊಲವಿನಿಂ ವರವಿತ್ತನಲಸ್ವರೂಪ ದಿ ।
ವ್ಯಪ್ರಥಿತಪ್ರಸಾದರುಚಿಯಂ ಬಸವೇಳ್ದದನಾಂತು ಶೀರ್ಷದೊಳ್ ॥
ಕ್ಷಿಪ್ರದೊಳೆಂದಿನಂತೆ ಪೊಳಲಂರಚಿಸುತ್ತಿಳಿದಿರ್ದ ಸರ್ವಜೀ ।
ವಪ್ರಕರಕ್ಕಸುಂಗೊಳಿಸಿ ಪಾಲಿಸಿದಂ ಸಲೆಬಿಬ್ಬಿಭಾಸ್ಕರಂ ॥೪೦॥

ಹರಗುರುಜಂಗಮಮೂರ್ತಿಗ ।
ಳರದಿತ್ತ ವಿಶೇಷಶೇಷಭೋಗವನೊಲವಿಂ ॥

ದುರೆ ಸೇವಿಪ ಭಾವನೆಯಂ ।
ಕರುಣಿಸಿ ಸಂರಕ್ಷಿಸು ಶಿವರುದ್ರಾಚಾರ್ಯ ॥೪೧॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳೇ
ಕಾದಶಾಶ್ವಾಸಂ
—ಸಮಾಪ್ತಂ—

---

॥ ಓಂಭೂತಿಸ್ವರೂಪಿಣೀನಮಃ ॥

## ದ್ವಾದಶಾಶ್ವಾಸಂ.



ಭೂತಿಗಿರಿಜಾವರಾಂಗ ।
ಜ್ಯೋತಿರ್ಭವಾರಾತಿ ಲೋಕಸದ್ಭೂತಿದಸಂ ॥
ಪ್ರೀತಿಗತಭೀತಿವಿಲಸ ।
ದ್ಭೂತಿಪ್ರೀತಂವಿಭೂತಿಸಂಪದಮೊರೆದಂ ॥೧॥

॥ ವರ್ಗೀಯಕಂದ ॥

ಭಜಕಜನಾವನ ನಿಪುಣಂ ।
ಭುಜಂಗಕಂಕಣನಮೋಘನನುಪಮನನಘಂ ॥
ನಿಜಮಿಗೆಮುದದಿಂ ಪಟುತನು ।
ಗಜಾಜಿನಂ ಗೋಪದಂಗುಡುಗೆ ಗೋಗಮನಂ ॥೨॥

ಮ॥ ಸ॥ ವ॥

ಶಿವಸದ್ಯೋಜಾತವಕ್ತ್ರಾಂಬುಜದಿನೊಗೆಪುದಾ ನಂದೆಯೆಂದೆಂಬ ನೀಲಾಂ ।
ಕ ವಿರಾಜದ್ಧೇನು ತದ್ಗೋವಿನಮಲ ಮಯದಿಂಭೂತಿ ಪುಟ್ಟಿತ್ತದಂ ಪ್ರೋ ॥

ತ್ಸವದಿಂ ವಿಧ್ಯುಕ್ತದಿಂ ಧಾರಣವನೆಸಗೆ ಸರ್ವಾರ್ಥಸಂಸಿದ್ಧಿ ಲೋಕೈ ।
ಕ ವಿಶಾಲೈಶ್ವರ್ಯಸಂಪತ್ಸುಖಮೊದಗಿ ಲಸನ್ಮೋಕ್ಷಲಕ್ಷ್ಮೀಶನಪ್ಪಂ ॥೩॥

ಚಂ॥ ಮಾ॥ ವೃ ॥

ವಿಲಸಿತವಾಮದೇವಮುಖದಿಂದುದಿಸಿತ್ತಸಿತೋದ್ಭವರ್ಣಸಂ ।
ಕಲಿತ ಸುಭದ್ರೆಯೆಂದೆನಿಪಧೇನು ತದೀಯ ಮಯಪ್ರಭಾವದಿಂ ॥
ಸಲೆಜನಿಸಿತ್ತುತದ್ಭಸಿತಮಂತದನೊರ್ಮೆಪೊದಳ್ದು ತಾಳ್ದಪಂ ।
ಜಲರುಹಮಿತ್ರಪುತ್ರನನಿದಿರ್ಚುವ ವಿಕ್ರಮದಿಂ ವಿರಾಜಿಪಂ ॥೪॥

॥ ಶಿಖರಿಣೀವೃತ್ತಂ ॥

ಶಿವಾಘೋರಾಸ್ಯಾಂಭೋಜದಿನೊಗೆದುದಾರಾಜಿತ ವಿರ ।
ಕ್ತವರ್ಣಂದಾಳ್ದುದ್ಯತ್ಸುರಭಿ ತದಮೋಘಾಮಯದಿನು ॥
ದ್ಭವಂಗೊಂಡತ್ತುಂ ಭಸ್ಮಮದನಿರದಾವಂ ಧರಿಸುವಂ ।
ಭವಾರಣ್ಯಂದಾಟುತ್ತೆಸೆದಪನವಂ ನಿತ್ಯಪದದೊಳ್ ॥೫॥

ಉ॥ ಮಾ॥ ವೃ॥

ತತ್ಪುರುಷಾಸ್ಯದಲ್ಲಿ ವರಗೌರಿಮ ವರ್ಣಸುಶೀಲೆಯೆಂಬ ಭಾ ।
ಸ್ವತ್ಪರಿಪೂತವತ್ಸಮೊಗೆದತ್ತು ತದೀಯಮಯಪ್ರಭಾವದಿಂ ॥
ಚಿತ್ಪರಮಪ್ಪ ಕ್ಷಾರಮುದಿಸಿತ್ತದನಾವನದೊರ್ಮೆ ತಾಳ್ದಪಂ ।
ತತ್ಪುರುಷಂ ಮಹಾಪ್ರಮಥರಾಜಿಯೊಳೆಯ್ದಿ ವಿರಾಜಿಪಂನಿಜಂ ॥೬॥

ಮ॥ ಸ್ರ॥ ವೃ॥

ಗಿರಿಶೇಶಾನಾಸ್ಯದಿಂ ತತ್ಸುಮನೆಯೆನಿಪ ಗೋ ಭಾಸುರಾನಂತ ವರ್ಣಂ ।
ಮೆರೆಯಲ್ಪುಟ್ಟಿತ್ತು ತದ್ಗೋಮಯದಿನೊಗೆದುದುದ್ರಕ್ಷೆ ತದ್ರಕ್ಷೆಯಿಂದು ॥
ರ್ಧರಭೂತಂಬ್ರಹ್ಮಪೈಶಾಚ ಮುಖಮುಖಿಲ ಸಂತಾಪಮಂ ವಿಘ್ನಮಂ ಸಂ।
ತರಿಪಂ ವಿಶ್ವಾಸದಿಂತಾಳ್ದನಿತಕಿದು ಶಿವಾಮ್ನಾಯಮಾರ್ಗಪ್ರಬೋಧಂ॥೭॥

ಚಂ॥ ಮಾ॥ ವೃ॥

ಸಕಲ ಸಮುಂಚಿತೋತ್ತಮ ವಿಭೂತಿಯನಿಂತು ತ್ರಿಕಾಲದಲ್ಲಿತಾ ।
ನಕುಟಿಲ ಯಾಜ್ಞವಲ್ಕ್ಯಜಮದಗ್ನಿ ಪರಾಶರ ಕಶ್ಯಪಾತ್ರಿಗಳ್ ॥
ಸುಕರ ಘಟೋದ್ಭವಂ ಹರಿವಿರಿಂಚಿಮುಖಾಮರವೃಂದವೊಲ್ಪುವ ।
ಪ್ರಕಟಮೆನಲ್ಕೆತಾಳ್ದಿಪರಮಾಯುವನಿತ್ತುದು ಪೇಳ್ವುದೇನದಂ ॥೮॥

ಸತ್ಯಂಶರ್ವಾಮ್ನಾಯಂ ।
"ಭೂತ್ಯೈನಪ್ರಮದಿತವ್ಯ"ಮೆಂಬುದು ಮದರಿಂ ॥
ನಿತ್ಯಂ"ತ್ರಿಯಾಯುಷಾದಿ" ।
ಪ್ರತ್ಯಕ್ಷಮನುಮುಖದಿಂ ಪ್ರಬೋಧಿಪುದಲ್ತೇ ॥೯॥

ಓತದು "ಸಪಿಷಭಸ್ಮ ।
ಜ್ಯೋತಿ" ಯೆನುತ್ತುಂ ಶಿವಾಧಿಕತೆಯಂ ತಂತ್ರ ॥
ಖ್ಯಾತಿಮಿಗೆ ಪೇಳ್ಗುಮನಿಶಂ ।
ಭೂತಾಶೇಷಪ್ರಪಂಚಪರಿಪೂರ್ಣತೆಯಂ ॥೧೦॥

॥ ಚಂ॥ ಮಾ॥ ವೃ ॥

ಧರಿಸದೆ ಭೂತಿಯಂ ಪರಮಮುಕ್ತಿಯನಾಳ್ದಿದೆನೆಂಬವಂ ಮಹೋ ।
ದ್ಗರಳಮನೀಂಟಿ ಜೀವಿಸಿದೆನೆಂಬವನಂತಿರೆ ಹಾಸ್ಯಮಕ್ಕು ಭಾ ।
ಸುರಶಿವಭಸ್ಮಮಂ ಜರೆವದುರ್ಮನುಜಂ ಶಿವನಿಂದಕಂ ಪ್ರಭಾ ।
ವರಣವಿಭೂತಿಧಾರಕನುಮಾವರಧಾರಕನಕ್ಕುಮೊಚ್ಚತಂ ॥೧೧॥

ದಿನರಾಜನಿಲ್ಲದ ಪಗ ।
ಲ್ವನರುಹಮಿಲ್ಲದ ಸರೋವರಂ ಯಾಮೀಶಂ ॥
ಜನಿಸದಯಾಮಿನಿ ನಿರ್ಗತ ।
ಮನೋಜಭಸಿತರಹಿತಾಳಿಕಸ್ಥಲಮಶುಭಂ ॥೧೨॥

ತೀರ್ಥಸ್ನಾನೋದಿತಫಲ ।
ಮರ್ಥಂಗಳನಿತ್ತೊಡೇಂ ವಿಚಾರಿಸೆ ಕ್ಷಣಿಕಂ ॥
ವ್ಯರ್ಥಂಭೂತಿಸ್ನಪನಂ ।
ಸಾರ್ಥಂ ಶಾಶ್ವತಮದೆಂತೆನಲ್ಬಿತ್ತರಿಸೆಂ ॥೧೩॥

ಮ॥ ವಿ॥ ವೃ॥

ಸಿರಿಯಿಂ ಸಂಪದದಿಂ ಶಿವಾಲಯಗಳಿಂಸದ್ಧಾರ್ಮಿಕಾಚಾರ ತ ।
ತ್ಪರರಿಂನೀತಿನಿಧಾನದಾನಪರರಿಂ ವಾಣಿಜ್ಯರೊರ್ಗಿಂ ಗಿರೀ ॥
ಶ್ವರ ಭಕ್ತ್ಯೈಕಸುಶೀಲರಿಂ ಸುರುಚಿರೋದ್ಯಾನಂಗಳಿಂ ತಳ್ತು ಸುಂ ।
ದರ ಪಾಂಚಾಳಮೆನಿಪ್ಪ ದೇಶಮೆಸೆಗುಂ ಸರ್ವಪ್ರಜಾವರ್ಗದಿಂ ॥೧೪॥

ಅದನಾಳ್ವಂ ಸಿಂಹಕೇತಾಭಿಧನೃಪತಿಲಕಂ ಬೇಂಟೆಗೆಂದೊರ್ಮೆತಾಂ ಸ ।
ಮ್ಮುದದಿಂಭಿಲ್ಲರ್ಕಳಿಂತಳ್ತ್ತಕಠಿನವಿಪಿನಕ್ಕೈಯ್ದಿರಲ್ಕಲ್ಲಿ ಸೌಖ್ಯಾ ॥
ಸ್ಪದಲಿಂಗಂಬೀಳ್ದಿರಲ್ಕೊರ್ವ ಶಬರನದನುರ್ವೀಶಗಂ ಕಾಣ್ಬಿಸಲ್ಕಾ ।
ಸುದತೀಶಂಭಕ್ತಿಯಿಂಪೂಜಿಸಲಭಿಮತಗಳ್ಸಾರ್ಗುಮೆಂದಾಡಲಾಗಳ್ ॥೧೫॥

ಮ॥ ವಿ॥ ವೃ॥

ಯಜನಂಗೆಯ್ವ ವಿಧಾನಮಂ ವಿಧಿಸೆನಲ್ಭಾಂರಜಚ್ಚಿತಾ ಭೂತಿಯೇ ।
ಯಜಿಸಲ್ತಕ್ಕುದುಮಂತದಂ ಪ್ರತಿದಿನಂ ಸಂಲೇಪನಂಗೆಯ್ಯದೇ ॥
ಭುಜಗಾಲಂಕೃತ ಶಂಭುಲಿಂಗಕನುವಿಂದೆಂತಾದೊಡಾಹಾರಮಂ ।
ನಿಜದಿಂದರ್ಪಿಸಲಾಗದೆಂದೊರೆವುದುಂ ಭೂಮೀಶ್ವರಂ ಹಾಸ್ಯದಿಂ ॥೧೬॥

ನುಡಿಯಂಕೇಳ್ದೊಡನಿರದಾ ।
ಬಡದಂಪತಿಗಳ್ವಿಧಿಯನದಂ ಕೈಕೊಂಡರ್ ॥
ಮೃಡನಂ ನಂಬಿದಭಕ್ತ ।
ರ್ಗೆಡರಡಸುವದೇನೊ ಭಕ್ತಿಮುಕ್ತಿದ್ವಾರಂ ॥೧೭॥

ದಂಪತಿಗಳ್ಪ್ರತಿನಿತ್ಯಂ ।
ಪೆಂಪಾಂತ ಚಿತಾವಿಭೂತಿಯಂ ಸುಡುಬಲಿಯೊಳ್ ॥
ಸಂಪಾದಿಸಿತಂದು ಗಿರಿಶ ।
ನಂ ಪೂಜಿಪರೊಲ್ದು ಭಕ್ತಿರಸಮುಕ್ಕೇರಲ್ ॥೧೮॥

॥ ತರಳವೃತ್ತಂ ॥

ನಿಯತದಿಂ ಕೆಲಕಾಲಮಿಂತು ಚಿತಾವಿಭೂತಿಮಹಾವ್ರತಂ ।
ಲಯಿಸದಂತಿರಲೊರ್ಮೆ ಭಕ್ತಿಪರೀಕ್ಷೆಗೆಯ್ಯಲೊ! ಭಕ್ತರಂ ॥
ಪ್ರಿಯದಿನೀಕ್ಷಿಸಿ ಕಾಮಿತಾರ್ಥವನಿತ್ತು ಮುತ್ತಿಡಲೆಂಬ ಹೆ ।
ಬ್ಬಯಕೆಯಿಂದಲೊ! ಲೋಕದೊಳ್ಮೆರೆಸಲ್ಕೊ! ಭಕ್ತಿಸುಗಂಧಮಂ ॥೧೯॥

॥ ಭ್ರಮವಿಲಸಿತವೃತ್ತಂ ॥

ಚಿತಾಭಸ್ಮಮೆಲ್ಲೆಲ್ಲೆಯುಂ ಸಿಕ್ಕದೊ ।
ಲ್ದಿತಾಂಗೋದ್ಭವಂ ಮಾಡೆ ಸಂಶೋಧಿಸಲ್ ॥
ವ್ರತಂಭಂಗಮಾಯ್ತೆಂದು ದುರ್ಭ್ರಾಂತಿಯಿಂ ।
ದೆ ತದ್ಭಿಲ್ಲನಿರ್ಪನ್ನೆಗಂ ತತ್ಪ್ರಿಯಳ್ ॥೨೦॥

ಇನಿತೇಕೆಯೋಚನೆಯಿದ ।
ಕ್ಕನುಕೂಲಮೆನಲ್ಪ್ರತರ್ಕೆ ಮತ್ತನುವಂ ಸೀ ॥
ವೆನದಂ ಚಿತಾವಿಭೂತಿಯ ।
ನನಘಂಶಿವಗರ್ಪಿಸೆಂದು ಪೇಳ್ದಿರದಾಗಳ್ ॥೨೧॥

॥ ತರಳವೃತ್ತಂ ॥

ಮನೆಯೊಳೊಂದೆಡೆ ಗೆಂಟನೊಳ್ಮರುತಾಪ್ತನಂ ಪುಟಗೆಯ್ದು ತ ।
ದ್ವನಿತೆ ಸೀಯೆ ನಿಜಾಂಗಮಂ ನಿಜವಲ್ಲಭಂ ಪೊರೆಯೇರೆ ಪಾ ॥
ವನ ತದೀಯವಿಭೂತಿಯಂ ಶಿವಲಿಂಗಮೂರ್ತಿಗೆ ಲೇಪಿಸು ।
ತ್ತನುವಿನಿಂ ಧರಣೀಧರೋಪಮಪೂರ್ಣನಿಶ್ಚಲಭಕ್ತಿಯೊಳ್ ॥೨೨॥

ಜ್ಞಪ್ತಿಗೆ ತಾರದೆ ಮಡದಿಗೆ ।
ಪ್ರಾಪ್ತಿಸು ನೈವೇದ್ಯಮಂ ಜವದಿನೆನೆಸತಿಸಂ ॥
ಪ್ರಾಪ್ತಿಸಿ ಮಣಿದುರೆ ನಿಂದ ।
ಳ್ದೀಪ್ತಾಮರವಧುವಿನಂತೆ ಪತಿಯಂತಿಕದೊಳ್ ॥೨೩॥

ಸತಿಪತಿಗಳ್ಶಿವಲಿಂಗಕೆ ।
ಘೃತಪಾಚಿತ ಷಡ್ರಸಾನ್ನಮಂ ಸಲ್ಲಿಸಿ ಸಾ ॥
ರ್ದತಿ ನಿಶ್ಚಲಗುಣಪೂರ್ಣೋ ।
ದಿತ ಸಮ್ಯಗ್ಭಕ್ತಿಯಿಂದೆರಗಿ ಕೀರ್ತಿಸಿದರ್ ॥೨೪॥

॥ ಮಾಲಿನೀವೃತ್ತಂ ॥

ಜಯಜಯ ಶುಭಧಾಮಾ ಭಕ್ತಚೇತೋವಿರಾಮಾ ।
ಜಯಜಯ ಶಮಸೋಮಾ ದಿವ್ಯಲೀಲಾಭಿರಾಮಾ ॥
ಜಯಜಯ ಭವಭೀಮಾ ಚಂದ್ರಭಾಸ್ವಲ್ಲಲಾಮಾ ।
ಜಯಜಯ ಜಿತಕಾಮಾ ಲೋಕಕಲ್ಯಾಣಸೀಮಾ ॥

॥ ಚಾಮರವೃತ್ತಂ ॥

ಇಂತುಗೆಯ್ದು ಭಕ್ತಭಕ್ತಿಗೀತದೀಪ್ತಿಯಲ್ಲಿ ಮೋ ।
ದಾಂತರಂಗದಿಂ ವಿಧಾತವಿಷ್ಣುವಂದಿತಂಶಿವಂ ॥
ಕಂತುದಗ್ಧ ಭೂತಿಗಾತ್ರನಗ್ನಿನೇತ್ರರಾಜಿತಂ ।
ಕಾಂತಕಾಂತೆಪಾರ್ವತೀಸಮೇತ ಮೂಡಿತೋರಿದಂ ॥೨೬॥

ಮ|| ವಿ|| ವೃ||

ಸತಿಯಂ ಸುಂದರ ದಿವ್ಯರೂಪವತಿಯುಂ ನಿರ್ಧೂತ ನಿರ್ಮೋಹ ಸ |
ನ್ಮತಿಯಂ ಧರ್ಮಗುಣಾಬ್ಧಿ ರಾತ್ರಿಪತಿಯಂ ಸದ್ಭಾವೆಯುಂ ಸದ್ದಯಾ ||
ವತಿಯಂ ಸಿಶ್ಚಲಭಕ್ತಿಭಾಗ್ಯರತಿಯುಂ ಸದ್ಭಕ್ತಿಯಿಂ ಲಿಂಗಕಾ |
ಹುತಿಯಂತೆತ್ತಪರುಂಟೆಯನ್ಯರೆಸುತುಂ ತಳ್ತಪ್ಪಿದಂ ದೇಹಮಂ ||೨೮||

|| ಮಲ್ಲಿಕಾಮಾಲಾವೃತ್ತಂ ||

ಭಾವದಿಷ್ಟಮನಿತ್ತಪೆಂ ಬಿಡದೊಲ್ದು ಬೇಡುವದೆಂದೆನ |
ಲ್ತಾವಕೀನ ಮಹಾಚಿತಾಮಲಭೂತಿ ಸದ್ವ್ರತಮೆಂದಿಗುಂ ||
ಭಾವಿಸಲ್ಚ್ಯುತಿಯಂಟದಂತಿರೆಮಾಳ್ಪದೆಂದೆನೆ ಶಂಕರಂ |
ಭಾವದೊಳ್ನಸುನಕ್ಕು ಚಿತ್ಸದವಿತ್ತುಭಕ್ತರನೋವಿದಂ ||೨೮||

ಇದನೀಕ್ಷಿಸಿ ಭೂಪಂ ಹಾ |
ಸ್ಯದೊಳಾನೊರೆಯಲ್ಪುಲಿಂದಜಾಯಾಪತಿಗಳ್ ||
ಸದರಂ ನಂಬಿ ಮಹೇಶನ |
ಪದಮೆಯ್ದಿದರೆಂಬೊಡಾನವರ್ಗಳಿಂತೀಗಲ್ ||೨೯||

ನಡೆದಾ ಮೃಡನಡಿಯೆಡೆಯಂ |
ಪಡೆವೆಂ ನಿಜವೆಂದು ಭಿಲ್ಲದಂಪತಿಗಳ ಮೆ ||
ಲ್ಲಡಿಗೆರಗಿ ತಥಾಕ್ರಮದಿಂ |
ಮೃಡನಂಮಚ್ಚಿಸಿ ಶಿವಸುಖರಾಜ್ಯಮನಾಳ್ದಂ ||೩೦||

ಶಿವನಂಗಕಾಂತಿಭಸಿತವ |
ನವನೀತಲದೊಳ್ತಳೆದುಹೊಳೆದು ಸಂಚರಿಪಾ ||
ಶಿವಭಕ್ತರ ನೆರೆಯೊಳ್ಬಾ |
ಳುವುದಂ ದಯಿಗೆಯ್ವುದು ಶಿವರುದ್ರಾಚಾರ್ಯ ||೩೧||

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ದ್ವಾ
ದಶಾಶ್ವಾಸಂ
—ಸಮಾಪ್ತಂ.—

॥ ಓಂ ಶಿವಾಕ್ಷಮಣಿಭೂಷಿಣೇನಮಃ ॥

# ತ್ರಯೋದಶಾಶ್ವಾಸಂ



ಸಾಕ್ಷಾದ್ರುದ್ರಾಕ್ಷಿಯನನು ।
ಲಕ್ಷಿಸಿ ಪಾವನಗುರೂಕ್ತಮತದಿಂಧರಿಸಲ್ ॥
ರಾಕ್ಷಸಮುಖಬಾಧೆಗಳಿಂ ।
ರಕ್ಷಿಪ ರುದ್ರಾಕ್ಷಿಸತ್ವಮಂ ನಿರವಿಸಿದಂ ॥೧॥

— ಅವರ್ಗೀಯಕಂದ —

ಹೀರಯಶೋವೈಶಾಲ್ಯ ವ ।
ಸುರಾಶಿ ವಿಷಹರಶಿವೇಶ ಸೂರಿವಿಲಾಸಾ ॥
ಸಾರಹರಶೇಷಲೋಲಾ ।
ಸುರೇಶ ಶಶಿಶೀರ್ಷಶರ್ವಶಿವ ಸರ್ವೇಶಾ ॥೨॥

ಚಂ॥ ಮಾ॥ ವೃ॥

ಜನಪತಿಯಕ್ಷಿಯಾಶ್ರಯದೆ ಸಂದುಸಜೀವಿಪ ಮಾನವಾಳಿಗಂ ।
ಧನವತಿಸಾರುಗುಂ ನಿಸದಮಂತದುಮಿರ್ಕೆ ಚತುರ್ದಶೋರ್ವಿಗಂ ॥
ಜನಪತಿಯಪ್ಪಮೋಘ ಸಕಲೋತ್ತಮ ದಿವ್ಯಶಿವಾಕ್ಷಿಯಾಶ್ರಯಂ ।
ತನಗಿರೆಪೇಳ್ವುದೇನಿಹಪರತ್ರ ಸುಖೋಭಯಸಾರದಿರ್ಕುಮೇ ॥೩॥

ತ್ರಿಪುರವನಂದು ಚುರ್ಚುವೆಡೆಯಲ್ಲಿ ತ್ರಿಲೋಚನದಿಂ ನಿರೀಕ್ಷಿಸ ।
ಲ್ಕೆ ಪಳಪಳಂ ಧರಾತಲಕುದಿರ್ದತ್ರಿಲೋಚನಬಿಂದುವಿಂ ಲಸ ॥
ಜ್ಜಪಕೆನೆ ಮೂವತೆಂಟನಿಸಿ ಭಕ್ತಹಿತಾರ್ಥಮೆ ಲಿಂಗಮೂರ್ತಿಗಂ ।
ಗುಪಿತಮುಖಾಜ್ಞಮೆಂದು ಜನಿವೆತ್ತುದು ಭಾಸುರರುದ್ರನಂಶದಿಂ ॥೪॥

ಮಾ॥ ಸ್ರ॥ ವೃ॥

ಇನನೇತ್ರಾಂಭೋಜದಿಂದ್ವಾದಶಮುರಿಯೆಸುಧಾಂಶ್ವಕ್ಷಿಯಿಂ ಷೋಡಶಂ ಮೇ ।
ಣನಲೋದ್ಯನ್ನೇತ್ರದಿಂ ಪತ್ತುವಿಧಮೊಗೆದುಭೂಭಾಗದೊಳ್ಸಕ್ರಮಂ ಗೊಂ ॥

ಡು ನಯಂಕೈಮಿಕ್ಕುಧಾವಲ್ಯಮೆಸೆವಕಪಿಲಂ ಚಾರುಕೃಷ್ಣಾಂಕವರ್ಣಂ ।
ಮಿನುಗಲ್ಪೊಂದೊಪ್ಪುಗುಂ ದುರ್ಧರವಿಪಕ್ಷಂಚಿದಕ್ಷಂಶಿವಾಕ್ಷಂ ॥೫॥

ಮಣಿಚಿನ್ನಾದಂ ಮುಖಂಭಾವಿಸಲಸದೃಶ ಚಿದ್ಬಿಂದುಲಿಂಗಂ ಗಿರೀಶೇ ।
ಕ್ಷಣಮುಂ ತನ್ನಾಳಮೇ ಚಿತ್ಕಳೆಬಗೆಯೆಚರಂ ಸೂತ್ರಮಾಗಲ್ಕ್ರಮೋಕ್ತಂ ॥
ತಣಿವಂತೊಲ್ದೊರ್ಮೆ ತಾಳ್ದಾತನಿಳೆಯೊಳವನಾವಾದೊಡಾತಂಗೆತಾಂ ಪೇ ।
ಳ್ತೊಣೆಯಾರ್ಚಿಜ್ಞಾಂತಿಮುದ್ರಂ ಸಕಲಸುಖಸಮುದ್ರಂ ಧರಾನೂತ್ನರುದ್ರಂ
॥೬॥

ಉ॥ ಮಾ॥ ವೃ॥

ಶೋಭಿಪಚಾರು ದೇವಮಣಿಸಂಪದದಾಯಿ ಸುಲಕ್ಷಣಾಂಕಕಂ ।
ತಾಭರಣಂಗಳಿರ್ಕೆ ಬಳಿಕೊಂದಿದದುರ್ಗುಣ ದುಷ್ಟವೃತ್ತಿಯಂ ॥
ಭೂಭುಜರೊಲ್ದುವೀಕ್ಷಿಸದೆ ಘೋಟಕಮಂಗ್ರಹಿಪಂತೆ ದಿವ್ಯತೇ ।
ಜೋಭಯ ಲಕ್ಷಣಾಕಲಿತರುದ್ರವಿಲೋಚನಮಾಳ್ದಭಕ್ತನಂ ॥೭॥

ಕಂಡೊಡೆ ಭೂಮಂಡಲ ಪಾ ।
ಖಂಡಿಯಿರಲ್ಖಂಡಶಶಿಕಲಾಮಂಡಿತನೊ ॥
ಲ್ದಿಂ ಡಿಂಗರನಂ ಮುತ್ತುತೆ ।
ಮುಂಡಾಡುವನೆನೆ ಶಿವಾಕ್ಷಿಯೇನರ್ಗಳಮೋ ॥೮॥

ಮ॥ ವಿ॥ ವೃ॥

ಜಪದೊಳ್ಸ್ನಾನದೊಳಂ ಸಮರ್ಚನೆಯೊಳಂ ಯಜ್ಞಾಂಗದೊಳ್ದಾನದೊ ।
ಳ್ತಪಥಂ ಕೈಮಿಗೆಮಾಳ್ಪ ಹೋಮವಿಧಿಯೊಳ್ಕಾಂಜೀಪ್ರಸಂಗಂಗಳೊಳ್ ॥
ನೆಪದಿಂ ಮಾಳ್ಪ ಸಮಸ್ತಕರ್ಮತತಿಯೊಳ್ರುದ್ರಾಕ್ಷಮಂ ಕಂಠದ ।
ಲ್ಲಿ ಪುನೀತಂಮಿಗೆ ತಾಳ್ದುಗೆಯ್ಯದೊಡೆ ಭೂದೇವಂಗೆ ದುಃಖಂಫಲಂ ॥೯॥

ಅವನಾರಾದೊಡಮುಂಭ ।
ಕ್ತಿ ವಹಿಸಿ ಪಾವನಶಿವಾಕ್ಷಿಯಂತೇರ್ದಿಪಂ ॥
ಬುವನೀಂಟಲ್ಸಂಕಟಮಂ ।
ತವಿಯಿಸಿ ತದ್ರುದ್ರಲೋಕದೊಳ್ಸೊಗಮಿರ್ಪಂ ॥೧೦॥

ಮ॥ ಶ್ರೀ॥ ವೃ॥

ಶಿರದೊಳ್ಕಂಠದೊಳಂ ಕರದ್ವಯದೊಳಂ ಕರ್ಣಂಗಳೊಳ್ಮತ್ತೆ ಕೇ ।
ಉರದೊಳ್ಭೇದಮನಾಂತು ಛಿದ್ರಿಸಿದಕೀಟಂ ಸ್ಪರ್ಶನಂಗೊಳ್ಳದಿ ॥

ರ್ಪುರು ರುದ್ರಾಕ್ಷಿಯನಂಗದೊಳ್ಗಣನೆಯಿಂ ತಾಳ್ದೀಶನಂ ಪೂಜಿಪಂ ।
ಹರಿಮುಖ್ಯಾಮರವೃಂದದಿಂ ಪರಿವೃಢಂಸಂರಜಿತಂ ರಾಜಿತಂ ॥೧೧॥

ಸನ್ನುತ ಗುರುಪ್ರಲಬ್ಧಮ ।
ಹೋನ್ನತ ರುದ್ರಾಕ್ಷಿ ಪುಣ್ಯಚರಿತೆಯನೊರೆವೆಂ ॥
ಚೆನ್ನೆನೆಲಾಲಿಪುದೆಲ್ಲ ।
ರ್ಭಿನ್ನಂಗೊಳ್ಳದೆಶ್ರವಣಕುತೂಹಲದಿಂದಂ ॥೧೨॥

॥ ಮ॥ ಸ್ರ॥ ವೃ ॥

ವಿಲಸತ್ಕಾಶೀ ಮಹಾಪುಣ್ಯ ಕಟಕದೊಳದೋರ್ವಂತಪೋವೈಭವಂ ನಿ ।
ರ್ಮಲ "ಸುಜ್ಞಾನಾಶ್ರಮಾಖ್ಯಾನ" ಯತಿಪನಿರಲ್ಕೋರ್ವಂತ್ಯಜಂ ಮಾಡುತುಂ ನಿ ॥
ಶ್ಚಲದಿಂ ಶುಶ್ರೂಷೆಯಂ ಮೇಣವನಸುವಳಿಯಲ್ಕಾಲನಾ ಸೇವೆಯಂ ತಾ ।
ಳ್ದಿಲವಿಂ ಲೋಕಾತ್ಮರಂಬಂಧಿಸಿ ತಳುವದೆಸದ್ಬೋಧನಂ ಮಾಡು-
ತಿರ್ದಂ ॥೧೩॥

ಮ॥ ವಿ॥ ವೃ॥

ಅವನಿಂತಿರ್ಪುದುಮೊರ್ಮೆಖಡ್ಗಮುಖ ತೀಕ್ಷ್ಣಾಸ್ತ್ರಂಗಳಿಂ ಸೋರುತಿ ।
ರ್ಪವಭೀತ್ಯಾಸ್ಪದ ರಕ್ತಯುಕ್ತವಪುವಿಂ ತಾನೊಲ್ದು ಸನ್ಯಾಸಿ ಪಾ ॥
ದವನೇಜಾತಕೆ ಮೊಳ್ಗಿ ಕೆಯ್ಮುಗಿದು ನಿಲ್ಲಲ್ಕೀಶನಂ ಕಂಡವಂ ।
ಜವದಿಂದೆಯ್ದಿದ ಕಾರಣಂ ಕಥಿಪುದೆಂದೌತ್ಸುಕ್ಯದಿಂ ಕೇಳ್ದಿದಂ ॥೧೪॥

ಎಲೆದೇವ ಚಿತ್ತಯಿಸು ನಿ ।
ರ್ಮಲ ತ್ವದ್ದಾಸತೆಯೊಳಿರ್ದ ಪುಲ್ಕಸನಾಂತ್ಯಾ ॥
ಮಲೆಯಾಣ್ಮನ ದಾಸತ್ವಂ ।
ಫಲವಾದತ್ತೆಂದು ಪೇಳ್ದನಾ ಯತಿವರನೊಳ್ ॥೧೫॥

ಮ॥ ವಿ॥ ವೃ॥

ಜಗತೀಮಂಡಲದೆಲ್ಲ ಜೀವತತಿಯುಂ ಕೊಂಡೊಯ್ದು ತತ್ಪುಣ್ಯ ಪಾ ।
ಪಗಳಂ ನಿರ್ಣಯಿಸುತ್ತೆ ಪುಣ್ಯಮಯರಂ ಪುಣ್ಯಾತ್ಮರೊಳ್ಸಾರ್ಚಿ ಪಾ ॥
ಪಿಗಳಂ ಬಾಧಿಸುತಿರ್ಪ ಕಾಲದೊಳದೋರ್ವಂ ಪುಲ್ಕಸಂಕಾಶಿಯೊ ।
ಳ್ಭಗವನ್ಮಾರ್ಗ ವಿದೂರನುರ್ವಿಯಖಿಲಂ ದುರ್ಮೃತ್ಯುವಂ ಪೊಂದಿರಲ್॥೧೬॥

ಚಂ॥ ಮ॥ ವೃ॥

ಯಮುಚರರೆಯ್ದಿ ತತ್ಪರಮು ಪಾತಕಿಯಂ ಬಿಡದೆತ್ತಿಕೊಂಡು ತ ।
ದ್ಯಮನಗರಕ್ಕೆ ಪೋಗುತಿರೆ ಕಂಡಡಹಾಯ್ದು ಗಿರೀಶ ಕಿಂಕರರ್ ॥
ಸಮಧಿಕ ಪುಣ್ಯಶಾಲಿ ಬಿಡಿರೊಯ್ಯದಿರೆಂದುರೆ ಗರ್ಜಿಸಲ್ಕೆ ಪಾ ।
ಪಮಯನಿವಂ ಸುಪುಣ್ಯಕೃತಿಯೊಂದನುಸಿರ್ವುದು ಬೇಗಮೆಂಪವರ್ ॥೧೭॥

ಪ್ರತಿಭಟಿಸಲ್ಗಿರೀಶ ಪರಿಚಾರಕರಾರ್ಪಿನಿಪಂನೆಗಳ್ದ ಪು ।
ಣ್ಯತತಿಯನೆಂತು ಬಲ್ಲಿರೆಗತಾಸುವಿನಿಂದುರೆ ಬೀಳ್ದ ತಾಣದೊಳ್ ॥
ಶಿತಿಗಲನಕ್ಷಿಭೂಗತಮುದೆನ್ನಿಸಿ ತೀವಿರೆ ಜಾನುಮಾನದಿಂ ।
ವಿತತತದೀಯವಸ್ತು ನೆಲಸಿರ್ದಪ್ರದೇಶಗತಪ್ರಭಾವದಿಂ ॥೧೮॥

ಒದವಿದನಂತ ಪಾಪತತಿಯಂ ಸದೆದಿಕ್ಕಿ ಗಿರೀಶಸೌಖ್ಯಸಂ ।
ಪದಸದಮಿತ್ತುದೀತನಿಗೆ ಬೇಡದಿರೆಂದು ತೆಗಳ್ದನೂಂಕಲಾ ॥
ವೆದುರಿಸಿ ನಮ್ಮನರ್ದಿಸಿ ವಿಮರ್ದಿಸಿ ಸತ್ತ್ರಮುರುದ್ರಲೋಕಕಂ ।
ಪದಪಿನೊಳೊಯ್ದು ಸಂಗತಿಯನಿಂದರುಪಲ್ಕಡೆತಂದೆನೆಂದೆನಲ್ ॥೧೯॥

ಮ॥ ವಿ॥ ವೃ॥

ಯತಿವರ್ಯಂ ನಿಗಮಾಗಮ ಪ್ರತತಿಯೊಳ್ರುದ್ರಾಕ್ಷಿ ವೈಚಕ್ಷಣಾ ।
ದ್ಭುತಮುಕ್ತ್ಯದ್ಭುತಮೆಂತದೆರ್ಕೆಸಫಲಂ ತದ್ವಾಣಿ ತತ್ಪ್ರಲ್ಕಪಂ ॥
ಗತಿಯಂ ಪೊರ್ದಿದ ತಾಣಮಂ ಜವದಿನೀಗಳ್ತೋರುದೃಷ್ಟಾಂತಮಂ ।
ಕ್ಷಿತಿಯೊಳ್ಕಾಣ್ದಪೆನೆಂದು ಗುಡ್ಡರೊಡಗೊಂಡಾನಂದದಿಂ ಕಾಶಿಯಂ ॥೨೦॥

ಪುಗುತಂದಂತ್ಯಜನಂದಸುಂಗಳೆದ ತಾಣಂಗಂಡು ಸಂತೋಷಭಾ ।
ಷ್ಪಗಳುಣ್ಮಲ್ಪೊಡಮಟ್ಟುನಿಂದಿರೆ ಚರಂ ತೋರುತ್ತೆರುದ್ರಾಕ್ಷಿಯಂ ॥
ಮಿಗಿಲಾದಂಜನಸಿದ್ಧ ಗುಪ್ತಧನಮಂತೋರ್ಪಂತೆ ಸನ್ಯಾಸಿ ವ ।
ರ್ಯಗದಂ ಕಾಣ್ಚಿಸಲದ್ಭುತಮಿದೆಂದಾನಂದದಾವೇಶದಿಂ ॥೨೧॥

ತಲೆದೂಗುತ್ತನುಜೀವಿಯಂ ಪೊಗಳಲಾತಂ ರುದ್ರನೇತ್ರಂಗಳಂ ।
ನಲವಿಂಮುಂದಿರಿಸಲ್ಕದಾಂ ತಳೆಯಲೆನ್ನಂಸ್ಪರ್ಶನಂ ಮಾಳ್ಪದು ॥
ಷ್ಪಲರ್ಗೆಂದುಂ ಭವಪಾಶವಿಲ್ಲವಿದು ಯುಷ್ಮತ್ಪಾದಕಂ ಸಲ್ಲಲೆಂ ।
ದೊಲವಿಂಪೇಳ್ದೊಡೆಕೊಂಡು ಮಂಡೆಯೊಳದಂ ಸದ್ಭಕ್ತಿಯಿಂ ತಾಳ್ದಿದಂ॥೨೨॥

ತದನುಚರಂ ಯತಿಪಾದಕೆ ।
ಪದಪಿಂ ಪೊಡಮಟ್ಟು ಪ್ರೇತಪತಿ ಪಟ್ಟಣಕೆ ॥
ಯ್ದಿದನಿತ್ತಲ್ಮುನಿಪಂನಿಜ ।
ಸದನಕ್ಕೆಯ್ತಂದು ಯೋಗವಿಭವದೊಳಿರ್ದಂ ॥೨೩॥

ಮಣಿಭೂಷಣೇಚ್ಛೆಯಂ ಬಿಡ ।
ದಣಗಿರದೊಲ್ದು ಶಿವನೇತ್ರಮಣಿಭೂಷಣದೊಳ್ ॥
ತಣಿವೊಲ್ರಮಿಸುವ ನಿಶ್ಚಲ ।
ಗುಣಮಂ ದಯೆಗೆಯ್ದುದು ಶಿವರುದ್ರಾಚಾರ್ಯ ॥೨೪॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ತ್ರಯೋ
ದಶಾಶ್ವಾಸಂ
—ಸಮಾಪ್ತಂ.—

---

॥ ಓಂಮಂತ್ರರೂಪಿಣೇನಮಃ ॥

## ಚತುರ್ದಶಾಶ್ವಾಸಂ.



ಪಂಚಾಕ್ಷರಮನುವಂ ಸೀ ।
ಶ್ಚಂಚಲದಿಂಸದ್ಗುರೂಕ್ತ ಮತದಿಂಜಪಿಸಲ್ ॥
ಪಂಚಾಸ್ಯನನೆಸಗುವ ತ ।
ತ್ಪಂಚಾಕ್ಷರದರ್ಥವನೊರೆವಂಮನುರೂಪಂ ॥೧॥

### ✤ ವಾರಗಳ ಹೆಸರುಳ್ಳ ಕಂದ ✤

ಸೋಮ ವಿರಾಜಿತ ಮಂಗಳ ।
ರಾಮ ಬುಧ ವಿನುತ ಗುರುನಿಭ ಶುಕ್ರ ಧರಾಭೃ ॥
ದ್ಧಾಮ ಭವೋರ್ವೀಧ್ರಾ ಶನಿ ।
ನೇಮದೊಳೋವುಗೆ ರವಿ ನಯನಂ ವೃಷಪತ್ರಂ ॥೨॥

ವಿಧಿಲೇಖನಮಂ ಮಗ್ಗಿಪ ।
ನಧೀನದೊಳ್ಳೋಕಮಿರ್ದೊಡಂ ತನ್ಮನುವಂ ॥
ವಿಧಿಯಿಂ ಜಾನಿಪಭಕ್ತಾ ।
ಳ್ಯಧೀನದೊಳ್ಬಾಳ್ವನೆಂದೊಡೇನರ್ಗಳಮೋ ॥೩॥

ಚಂ॥ ಮಾ॥ ವೃ॥

ಶಿವಮನುವಾಂತ ತತ್ತ್ರಯ ಪದಾರ್ಥಮನೆಯ್ದೆ ತದೀಶಜೀವರೈ ।
ಕ್ಯವನುರೆ ಪೇಳ್ಗುಮೂರ್ಜಿತ ಮಹಾಪ್ರಣಮಂ ಬಗೆಯಲ್ಪರಾತ್ಪರಂ ॥
ದ್ವಿವಿಧಮದಾಗಿ ಚಿತ್ಪರಮ ಮುಕ್ತಿಯನೊಂದಿ ಮನೋಜ್ಞಪೂರ್ಣ ಬೀ ।
ಜವೆ ಮನುಜೀವಮೆಂಬುವಭಿಧಾನಮನಾಳ್ದು ಪೊದಳ್ದುರಾಜಿಕುಂ ॥೪॥

ಶಿವಮನುಪಿಂಡಿಗಳ್ಗೆ ನಸುಕೇಳ್ವನಿತುಚ್ಚರಿಸುತ್ತುಮಿರ್ಪುದುಂ ।
ವಿವರಿಸೆವಾಚಕಂ ಕ್ರಮದಿನೋಷ್ಠಗಳುಲ್ಕದು ಪಾಂಶು ತನ್ಮನು ॥
ಪ್ರವರನಿಜಾರ್ಥಮೇ ಮನನಮುಂ ಕರಿಗೊಂಡಿರೆಮಾನಸಂ ಮಗು ।
ಳ್ದಿವಕೆ ಕನಿಷ್ಠ!ಮಧ್ಯಮ!ಮದುತ್ತಮ!ಮಿರ್ಕುಫಲಂ ವಿಧಾನದೊಳ್ ॥೫॥

ಪ್ರಣವನಿಯುಕ್ತಯುಕ್ತಮನು ಭೀಕರಸಂಸ್ಕೃತಿ ರೋಗಪೂಗತಾ ।
ರಿಣಿಮನುಮಾತೃರೂಪಿಣಿ ಸದಾಸುಖಕಾರಿಣಿ ಶಾಂತಿಕಾಂತಿ ಲ ॥
ಕ್ಷಣವಿಲಸತ್ತರಂಗಿಣಿ ಗುಣಾಗುಣ ಸಂಚರಣಿ ಪ್ರಕಾಶಿನೀ ।
ಪ್ರಣುತಪದಪ್ರದಾಯಿನಿ ಸಮಂತಿದು ಜಾಪಕರಿಂಗೆ ಸರ್ವದಾ ॥೬॥

ಮನುವಿನೊಳಿರ್ಪ ಸಂಸ್ಕೃತಿಯನೂರ್ಜಿತ ಪಲ್ಲವಮಂ ಮುಖಾಂಗಮಂ ।
ಘನಮೆನೆ ಶುದ್ಧಿಯಂ ಬಿಡವೆ ನ್ಯಾಸಗಳಂ ಗುರುಮೂರ್ತಿಯಿಂಸುಭ ॥
ಕ್ತ್ಯನುಸುತದಿಂದೆ ತಾನರಿದು ಜಾಸಿಸೆ ಸತ್ಫಲಮುಕ್ಕುಮನ್ಯಥಾ ।
ಜನುಗಿಯೊರಲ್ದೊಡೇಂವಿಫಲಮುಕ್ಕು ಮಹೀದ್ರಕೆ ಕುಕ್ಕುರೂಳ್ದಪೊಲ್ ॥೭॥

ಇನಿತುಮನಂತದೋಷಗಳನಳ್ಗಿಸಿ ಸದ್ವಿಧಿಪೂರ್ವಕಂ ಲಸ ।
ನ್ಮನು ಪರಿಸೂಕ್ತಸಂಖ್ಯವಿಡಿದಾಸನದಲ್ಲಿಯೆ ಮೂರ್ತಗೊಂಡು ಹೃ ॥
ದ್ವನರುಹದಲ್ಲಿ ಜಾನಿಸಿ ಮಹೇಶ್ವರಜೀವರೊಳೈಕ್ಯಮಪ್ಪಸಾ ।
ಧನದಿರವಂ ಪೆರರ್ತಿಳಿವರೆಂತದನೊಳ್ಪರನೀತಿವೇಷ್ಟಿತರ್ ॥೮॥

ಅರಚುತ ಸಾಂಬನಂ ಕರೆಯೆ ಕರ್ಣಗಳಲ್ಲಿವೆ ನಿದ್ರೆಗೆಯ್ವನೇ ।
ನರಿಯ ನಿಜಾತ್ಮಸಂಗತ ಮಹೇಶನ ನೆಳ್ಚರಿಸಲ್ಕೆಯೂಳ್ಪದು ॥

ರ್ಗರನತಿ ಪಾಮರಂಬಿಡದೆ ಪೂರ್ವದೊಳ್ದೊಳ್ದವರಿಲ್ಲವೆಂಬೊಡು ।
ತ್ತರಿಪೆನವರ್ಗೆ ಸಲ್ಲುವಶ್ರುತಿಪ್ರಕರ ಪ್ರಬಲಪ್ರಮಾಣದಿಂ ॥೯॥

ಅಧಿಕೃತರುಂಬಳಿಕಾರಯು ।
ಲಧೀನರೆಂಬುಭಯ ಮಾರ್ಗದಿಂದಿರ್ಪರ್ತಾ ॥
ವಧಿಕೃತರಾಚರಣೆಯನಾಂ ।
ತಧೀನರಾಚರಿಸೆಬರ್ಕುಮವಹೇಳನೆ ಕೇಳ್ ॥೧೦॥

ಪಂಚಪತಿಗಳಂ ನೆರೆದ ।
ಳ್ಪಾಂಚಾಲಿಯೆನಲ್ಕೆಯಸ್ಮದಂಗನೆಯರ್ತಾವ್ ॥
ವಂಚಿಸದೆ ಕರಗ್ರಹಿಸೆ ಪ್ರ ।
ಪಂಚಂ ಸಮ್ಮತಿಪುದೆಸಿದನೂಳ್ವರ್ತಿಳಿಗುಂ ॥೧೧॥

ಅಸಮೇಕ್ಷಣ ಸನ್ಮನುವಂ ।
ರಸನಾಗ್ರದೊಳಿಟ್ಟರಚುವನಂ ಸರ್ವಜ್ಞಂ ॥
ಕಿಸಿವಾಯೆಂದೆಳ್ಚರಮಂ ।
ರಸೆಗಿತ್ತನೆನಲದನೂಳ್ದೊಡೇಂ ಫಲಮೊಳವೇ ॥೧೨॥

ಮ॥ ವಿ॥ ವೃ॥

ಸತಿಯಳ್ಕಾಂತನ ನಾಮವಂ ಪೊರೆಗೆ ಕಂಡಂತೂಳದೆಂದೆಂದಿಗುಂ ।
ವ್ರತದಿಂ ಮಂಗಲಲಗ್ನಮುಖ್ಯ ಶುಭಸತ್ಕಾರ್ಯಂಗಳೊಳ್ಗಾಸ್ಯದಿಂ ॥
ದತಿನಾಣಂ ಸರಿಮಿಂಡೆಯರ್ಗಿನಿಸು ಕರ್ಣಂದಾಗದಂತೊರ್ಮೆಯೇ ।
ಮಿತಿಯಿಂದುಚ್ಚರಿಪಳ್ದಲೆಂದೊಡೆಯದೇಂ ಕೈವಲ್ಯತನ್ಮಾರ್ಗದಿಂ ॥೧೩॥

"ಶರಣಸತಿಲಿಂಗಪತಿ"ಯೆಂ ।
ಬೊರೆದೊರೆವೆತ್ತಿರೆ ನಿಜೇಶ್ವರಂ ಪರಶಿವನಾ ॥
ಗಿರೆ ತನ್ನಾಮವನಳ್ಕದೆ ।
ಜರುಚಲ್ಕಂಡಲ್ಲಿ ಸಿತಗಿಯೆನ್ನದರೊಳರೇ ॥೧೪॥

ಗುರುಕಾರುಣ್ಯೋದಿತ ಭಾ ।
ಸುರಮನು ಸಂಧಾನದಿಂ ಮಹೇಶ್ವರನೊಲಿಯಲ್ ॥
ಮೆರೆದ ಮಹಾತ್ಮರ ಪುಣ್ಯಸು ।
ಚರಿತ್ರೆಯನೊರೆದಪೆನಾಲಿಸಲ್ಲಾಲಸೆಯಿಂ ॥೧೫॥

ಪು॥ ವಿ॥ ವೃ॥

ಯದುವಂಶಪ್ರಭವಂ ಯಶೋವಿಲಸಿತಂ "ದಾಶಾರ್ಹನೆಂ"ತೆಂಬ ಭೂ ।
ಸುದತೀಶಂ "ಮಧುರಾಭಿಧಾನ"ಪುರದೊಳ್ಸರ್ವ ಪ್ರಜಾವರ್ಗದಿಂ ॥
ಪದಪಿಂ ಪಾಲಿಸುತಿರ್ದವಂ ಸದುಳದಿಂ ಕಾಶೀಧರಾಧೀಶನ ।
ಭ್ಯುದಿತಾತ್ಮೋದ್ಭವೆಯಂ ಕರಗ್ರಹಿಸಿ ಕಾಮಕ್ರೀಡೆಗೆಂದಾಕೆಯಂ ॥೧೬॥

ಕರೆಯಲ್ಬಾರದೆ ಕೆಮ್ಮನಿರ್ಪುದನವಂ ಕಂಡಿಂತಿದೇನೆಂದು ಮು ।
ತ್ತರಮಂಕೇಳಲವಳ್ಪ್ರತಂಬಿಡಿದುನಾನಿರ್ಪೆಂ ಧರಾಧೀಶ್ವರ ॥
ಪುರುಷನ್ನೋಡಿದೆ ಬಲ್ಪಿನಿಂ ಬಸಿರಿಯಂ ನಿಷ್ಕಾಮಿಯಂ ಸದ್ವ್ರತಾ ।
ಪರೆಯಂಸ್ಪರ್ಶಿಸೆ ಕುಂದುಬರ್ಕುಮೆನುತುಂ ನಾನಾವಿಧಂಬೋಧಿಸಲ್ ॥೧೭॥

॥ ಚಂ॥ ಮಾ॥ ವೃ ॥

ವಿರಹದವೇಗವೊತ್ತರಿಸೆ ಕೇಳದೆಸ್ಪರ್ಶಿಸೆ ತಪ್ತಲೋಹದಂ ।
ತಿರೆ ತನುಕಂದಿಕುಂದಿ ಭಯಗೊಂಡುಮಳಲ್ದು ಬೆಳರ್ತುಕೇಳ್ದಿದಂ ॥
ಚರಿತೆಯನೆಲ್ಲಮಂ ಜ್ವಲನಪೂರ್ಣ ಕಳೇವರಮಾಂತುದೇನಿದ ।
ಚ್ಚರಿಯೆನೆ ಪೇಳ್ದಿದಳ್ಪರಪುರಾಕೃತಪುಣ್ಯವಿಶೇಷದೊಳ್ಪಿನಿಂ ॥೧೮॥

ಮ॥ ವಿ॥ ವೃ॥

ಬಿಡದೆಮ್ಮಾಲಯಕೊರ್ಮೆ ಲೀಲೆಮಿಗೆ ದೂರ್ವಾಸಂ ದಲೈಯ್ತಂದುಪೆಂ ।
ಪೊಡೆದಾ ಶಿವಮಂತ್ರಮಂ ಸದುಪದೇಶಂಗೆಯ್ದು ತನ್ಮಂತ್ರಮೆ ॥
ನ್ನೊಡಲಂಸಾರ್ದು ಸಮಸ್ತಪಾಪಬಲಮಂ ಮೆಟ್ಟಕ್ಕಿ ಮಂತ್ರಾಂಗಮಂ ।
ನಡೆಗೆಯ್ದುತ್ತದರಿಂದೆ ಮಂತ್ರರಹಿತರ್ಸೋಂಕಲ್ಕದೆಂಬರ್ಕುಮೇ ॥೧೯॥

ಚಂ॥ ಮಾ॥ ವೃ॥

ಘನಶಿವಮಂತ್ರಮಂ ಸುದತಿಯೊಲ್ದುಪದೇಶಿಸೆನಲ್ಕಿನಂಗೆ ಕೇ ।
ಳಿನಿಯಳೆ ಬೋಧಿಸಲ್ಕೆ ಶ್ರುತಿಸಮ್ಮತಮಲ್ತದರಿಂದೆ ಗಾರ್ಗ್ಯಸ ॥
ನ್ಮುನಿಯೆಡೆಗಂ ತಳರ್ವುದೆನುತೀರ್ವರುಮೆಯ್ದಿಪದಾಬ್ಜ ಪೂಜೆಯಂ ।
ಮನದೊಲವಿಂದೆ ಸಲ್ಲಿಸಿ ನಮಸ್ಕರಿಸುತ್ತೆ ವಿನೀತಭಾವದಿಂ ॥೨೦॥

ಶಿವಪಂಚಾಕ್ಷರಿ ಸನ್ಮಂ ।
ತ್ರವನುಪದೇಶಿಸಿ ಮದೀಯ ಪಾಪೋತ್ಕರಮಂ ॥

ತವಿಸಿ ಪೊರೆವುದೆಂದರ್ಥಿಸ ।
ಲವನಿಪಸಂಕಂಡು ಗಾರ್ಗ್ಯಮುನಿವರನಾಗಳ್ ॥೨೧॥

ಮ॥ ವಿ॥ ವೃ॥

ವರಕಾಳಿಂದಿಸುತೀರದೊಳ್ಮೆರೆವ ಪುಣ್ಯೋರ್ವೀಜದಾ ಮೂಲದ ।
ಲ್ಲಿರಿಸುತ್ತುಂ ಪರಿಶುದ್ಧನಂ ರಚಿಸಿ ಹೃದ್ಗೇಹಾಂತದೊಳ್ಮಾರ ಸಂ ॥
ಹರನಂ ಜಾನಿಸಿ ಮಂತ್ರಮಂ ಸದುಪದೇಶಂಗೆಯ್ಯೆಪ್ರಾಕ್ಕರ್ಮವೆಂ ।
ಬುರು ಪಕ್ಕಂಗಳುದಿರ್ಚಿಬೆಂದುಕುದಿದುಂ ಕಾಕವ್ರಜಂ ತುಂಡದಿಂ ॥೨೨॥

ಚಂ॥ ಮಾ॥ ವೃ ॥

ಪೊರಮಡುತುಂ ನೆಲಕ್ಕುರುಳ್ದು ಬೀಳ್ದಳಿಯಲ್ಕಳಿದಿರ್ದ ಚೋದ್ಯಮಂ ।
ಪರಿಕಿಸಿ ಮೌನಿಪಂಗೆರಗಿಕೇಳೆ ನಿವೇದಿಸಿದಂ ಭವಂಗಳೊಳ್ ॥
ಕರಮೊಸಗಿರ್ದ ಪಾಪಕುಲ ಕೊತ್ತಳಿವಿಂಡುಗಳಾಗಿ ತಾಪದಿಂ ।
ಪೊರಗಿರದೆಯ್ದೆ ಪೋದುವು ವಿನಿರ್ಮಳನಾದೆ ತ್ವದಂಗದೊಳ್ಮಹಾ ॥೨೩॥

ಮನುನೆಲಗೊಂಡುದೆಂದೆನೆ ಕುಟುಂಬಿಗಳಚ್ಚರಿಯಾಂತು ಮೌನಿಗಂ ।
ವಿನಮಿಸುತೀರ್ವರುಂ ನಿಜನಿವಾಸಮನೆಯ್ದಿರದೆಂದಿನಂತೆವೊ ॥
ಲ್ಮನಸಿಜ ಕೇಳಿಗೆಂದೆಳಸಿಮುದ್ದಿಸಿಯಪ್ಪೆ ಸುರಮ್ಯಭದ್ರಲೇ ।
ಪನದೊಲಲಂಪು ತಂಪುಗಳನಾಗಿಸಿದತ್ತುಮನೂಪದೇಶದಿಂ ॥೨೪॥

ಮುಕ್ತಿರಮೆಮೋಹಿಪಗುರು ।
ಪ್ರೋಕ್ತಾಮಲ ದಿವ್ಯಮನುವನಿರುಳುಂ ಪಗಲುಂ ॥
ಭಕ್ತಿಮಿಗೆಜಪಿಸಿ ಜೀವ ।
ನ್ಮುಕ್ತಸ್ಥಿತಿಯಾಂತು ದಂಪತಿಗಳೊಪ್ಪಿರ್ದರ್ ॥೨೫॥

ಮ॥ ವಿ॥ ವೃ॥

ಮೃಡನಷ್ಟಾವರಣ ಪ್ರಭಾವದಿರವಂ ಚಿತ್ತಾಂತದೊಳ್ಭಾನಿಸು ।
ತ್ತೊಡನಂತಾಚರಿಸುತ್ತೆ ಸಂಸರಣ ಮೋಹೋರ್ವೀಜಮಂ ಕೀಳ್ತುಪೆಂ ॥
ಪೊಡೆಯಲ್ನಿಶ್ಚಲ ನಿರ್ವಿಕಾರವಿಲಸತ್ಕೈವಲ್ಯಮಂ ಪೊರ್ದಿರೆಂ ।
ದುಡುಪಾಲಂಕೃತಭಕ್ತರಿಂಗೊರೆದು ಲಿಂಗಾನಂದದಿಂದೊಪ್ಪಿದಂ ॥೨೬॥

ಭೂತೋಚ್ಚಾಟನ ಮಂತ್ರ ।
ಕ್ಕೋತೆಳಸುವ ಮನವನಳಿದು ದುರ್ಮೋಹದ ಪೆ ॥

ಭೂರ್ತವನೋಡಿಪ ಮನುವೊ ।
ಳ್ಪ್ರೀತಿಯನಿತ್ತೋವುದವಿರತಂಶಿವರುದ್ರಾ ॥೨೭॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ಚತು
ರ್ದಶಾಶ್ವಾಸಂ
—ಸಮಾಪ್ತಂ—

---

॥ ಓಂ ಭಕ್ತಚೇತೋವಿಹಾರಾಯನಮಃ ॥

## ಪಂಚ ದಶಾಶ್ವಾಸಂ.



ಮಂಗಲಲಿಂಗದೊಳಂಗಂ ॥
ಸಂಗಳಿಸಲ್ತೋರ್ದ ತುಂಗಲೀಲಾಜಾ
ಲಂಗಳನಭಿವರ್ಣಿಸುವೆನದ ॥
ನಂಗಜ ಹರಭಕ್ತರೊಲ್ದು ಲಾಲಿಪುದೆಲ್ಲರ್ ॥೧॥

ಶ್ರೀರುಚಿ ಯುಗಜಾನ್ವಿತನಿರ
ಲರಣ್ಯಮಲ್ತಲ್ತು ಸೋಮನೆನಿಸಿರ್ದೊಡಮುಂ ॥
ತಾರೇಶನಲ್ತುಭಾವಿಸೆ ।
ವಿರುದ್ಧಗುಣನೋವುಗೆನಿರುತಂವೃಷಪತ್ರಂ ॥೨॥

ಕುಳಿಯೊಳ್ಬೀಳ್ದಳಲಂಗೊಂ ।
ಡಳಿಯಲ್ಕನುವಾದ ಮಹಿಷಿಗಸುವಂ ವಕ್ರಂ ॥
ದಳೆದರ್ಭಕನಾನನಮುಂ ।
ಕಳೆವೆತ್ತಿರೆ ಸರಳಮಾಗಿಸಿದನೀಕ್ಕೃತಿಕರ್ತಂ ॥೩॥

ಘನವೆತ್ತೀಪುರದೊಳ್ಪಾ ।
ವನ ರಾಯನಗೌಡರೆಂಬರನ್ವಯದೊಳ್ಸ ॥
ದ್ವಿನಯಸ್ವಭಾವೆ ವಿಧವಾಂ ।
ಗನೆ ಮೆರೆದಳ್ಧರ್ಮಶೀಲೆ "ಸಾವಕನೆಂಬ"ಳ್. ॥೪॥

ಗುರುಪದರಜ ಭಸಿತಂ ಸ ।
ದ್ಗುರುನಾಮಂ ಮಂತ್ರರೂಪಮಾಗುರುಕರುಣಂ ॥
ಪರಮೋಕ್ಷದಮೆಂದರಿದಾ ।
ದರದಿಂ ತರುಣಿ ಗುರುವರ್ಯನಂ ನಂಬಿರ್ದಳ್ ॥೫॥

ಮ॥ ವಿ॥ ವೃ॥

ಕಳಿವೆತ್ತೊಪ್ಪುವ ದ್ರವ್ಯಧಾನ್ಯತತಿಯಿಂಸೌಭಾಗ್ಯದಿಂಕಾಲಮಂ ।
ಕಳೆಯುತ್ತಿರ್ಪುದುಮೊರ್ಮೆತಾಂ ಮಹಿಷಿಯೊಂದಾಕಸ್ಮಿಕಂ ಸೋರ್ಕಿನಿಂ ॥
ಕುಳಿಯೊಳ್ಬೀಳ್ದಳಿಯುತ್ತಲಿರ್ಪುದನಿವಳ್ಕಂಡಾಕ್ಷಣಂ ತಾಪದಿಂ ।
ಕಳೆದತ್ತೆನ್ನಯ ಭಾಗ್ಯಭಾಂಡಮೆನುತುಂ ಬೊಬ್ಬಿಟ್ಟುಬಾಯಾರುತುಂ ॥೬॥

ದಣ್ಣನೆ ದಣಿವಂತೆನ್ನಯ ।
ಚಿಣ್ಣಕ್ಕರ್ಮತುಣ್ಬ ಕಾಲದೇಗೆಯ್ದಲೆ ಮು ॥
ಕ್ಕಣನ ಬಿಂಬನೆನುತವ ।
ಳ್ಕಣ್ಣೀರಂ ಗಳಗಳನೆ ಸುರಿದುಸೂರಿಡುತುಂ ॥೭॥

ಶಾ॥ ವಿ॥ ವೃ॥

ನಿನ್ನಂಪೂಜಿಸದನ್ಯಮೂರ್ತಿಯಜನಂ ನಾಂಗೆಯ್ದೆನೋನಿನ್ನೊಳಂ ।
ಭಿನ್ನಂಮಾಡಿದೆನೋ ಪ್ರಸಾದದೆಡೆಯೊಳ್ಮದ್ಭಾವಮಂ ನೋಡಲೆಂ ॥
ದಿನ್ನೇನಂ ನೆಗಳ್ದಿರ್ಪೆಯೋ ಗುರುವಿನೊಳ್ದೋಷಂಗಳಂಕಾಣ್ಬಳೆಂ ।
ದೆನ್ನೊಳ್ಕೋಪವನಾಂತೆಯೋ ಬಿನದಕಂ ನೀನಿಂತಿದೇಂ ತೋರ್ದೆಯೋ ॥೮॥

ತ್ವತ್ಸುತೆ ಗೆಯ್ದಪರಾಧವ ।
ನುತ್ಸವದಿಂ ಕ್ಷಮಿಸಿರಮಿಸಿ ಸವಿವಾತಿಂದಂ ॥
ಪ್ರೋತ್ಸಾಹಿಸಿ ತಿಳಿವೇಳದೆ ।
ಕುತ್ಸಿತಮಂತೋರ್ದ ನಿನಗದಾರ್ಭಲೆಯೆಂಬರ್ ॥೯॥

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. 315......

ತಪ್ಪಿನಿಸಿಲ್ಲದೊಡಂ ಪುಸಿ ।
ತಪ್ಪಂ ಕಾಣಿಸಿಬಳಲ್ದುವಡೆಯಾನೀಡೇ ॥
ತಪ್ಪದೆ ತೃಣಗಳ್ಪಾವಕ ।
ನಿಪ್ಪೆಡೆಗೇಳ್ತಂದು ಸೆಣಸಿದಂತಾಗದೆ ಪೇಳ್ ॥೧೦॥

ಗುರುಮಾತೃಪಿತಂಬ್ರಹ್ಮಂ ।
ಗುರುವಿಷ್ಣುಶಿವಂ ಗುರುವಿಗೆಪಾಸಟಿಯಿಲ್ಲೆಂ ॥
ದರಿದಾಂ ಗುರುನಿನ್ನಂ ನಂ ।
ಬಿರೆಲೇಸನೆಸಗಿದೆ ನಿನ್ನನಾರ್ನಂಬುವರೋ ॥೧೧॥

ಗುರು ಶರಣಾಗತ ರಕ್ಷಾ ।
ಕರನೆಂದಾಮ್ನಾಯಮುದಟನಿಂ ಕೊಂಡಾಡಲ್ ॥
ಶರಣಾಗತಳಾದೆನ್ನಂ ।
ಗುರುನೀನೋವದಿರೆ ಕುಂದು ನಿನಗೋ ನನಗೋ ॥೧೨॥

ಕಸವರಮಂ ಖಂಡಿಸಿ ಕರ ।
ಗಿಸಿ ಸಣ್ಣಿಸಿ ಬಿಸಿಯೊಡರ್ಚಲಾತ್ಮದತೇಜಂ ॥
ಮಸುಳದೆ ಮತ್ತನಿತೆಸೆವಿನ ।
ಮಸುಗಳೆಯಲ್ನಿನ್ನ ಭಕ್ತಿಯಂ ಬಿಟ್ಟಪನೇ ॥೧೩॥

ಉ॥ ಪಾ॥ ವೃ॥

ಈವಿಧದಿಂ ಗುರೂತ್ತಮನೊಳಳ್ತಿಯನಂಟನಮರ್ಚಿ ಸತ್ತ್ರೆಯಿಂ ।
ಭಾವದೆನೊಂದುಬೆಂದು ಕಡುಬೇಸರಿದೇಡಿಸಿ ಭೋಜನೋತ್ತರಂ ॥
ಭಾವವಿಶುದ್ಧಿಯಿಂ ನೆನೆದು ನಿದ್ರಿಪ ಮಧ್ಯನಿಶಾವಸಾನದೊ ।
ಳ್ಪಾವಿಗೆ ಸಾವನೆಯ್ದುಸುವ ತದ್ಗುರು ಸ್ವಪ್ನದೊಳೆಯ್ದಿ ಪೇಳ್ದಿದಂ ॥೧೪॥

ಎಲೆಮಗಳೆ ಸಂತಪಿಸದಿ ।
ರ್ಚಲುವೆಮ್ಮಗೆ ಸಾವಡಸದೆ ಸೊಗದಿರ್ಕುಂ ॥
ನಲಿದೀಕ್ಷಿಸು ಗೋಷ್ಠಿಯೊಳೆಂ ।
ದೊಲಿದುರೆ ಗುರುಮೂರ್ತಿಯೆಳ್ಚರಿಸಿಮೈಗರೆಯಲ್ ॥೧೫॥

ಚಂ॥ ಮಾ॥ ವೃ॥

ಪಡಿದೆರದಂತೆ ಪಾರಿತೆರ್ದೆ ಜುಮ್ಮನೆ ಮೈನವಿರೇಳೆ ತಾನೊಡ ।
ಲ್ನಡೆನಡುಗಲ್ಕೆ ಯೇಳ್ದು ಪರಿತಂದು ಪರೀಕ್ಷಿಸುತಲ್ಲಿ ಗೋಷ್ಠಿಯೊಂ ॥
ದೆಡೆಯಡಿಯಲ್ಲಿ ತನ್ಮಹಿಷಿನಿಲ್ತಿರೆ ಮೆಲ್ಕಿರಿಯುತ್ತೆ ಕಂಡು ತ ।
ನ್ಮೃಡಗುರು ಲೀಲೆಗಂ ಬಗೆಯೊಳುರ್ವಿ ಕೊನರ್ದುದ್ಮೈಯನಿಕ್ಕಿದಳ್ ॥೧೬॥

॥ ಪಾಲಿಸೀವೃತ್ತಂ ॥

ಅಹಿಧರಶರಣಂ ಶ್ರೀಕಿನ್ನರಿಬ್ರಹ್ಮನೆಂಬಂ ।
ಮಹಿಯೊಳಜಕೆ ಮುನ್ನಂ ಪ್ರಾಣಮಿತ್ತಿರ್ದುದಂ ನಾಂ ॥
ಬಹುಜನಮುಖದಿಂ ಕೇಳ್ದಿರ್ದೆನಿಂದೀ ಗುರೂದ್ವಂ ।
ಮಹಿಷಿಗಸುವನಿತ್ತೋವಿರ್ದುದಂ ಕಂಡೆನೆಂದಳ್ ॥೧೭॥

ನಂಬಿಹಪರ ಸಂಪತ್ಸೌ ।
ಖ್ಯಂಬಡೆದಿರ್ಪರೊಳರದಲ್ಲದೆ ಭವತ್ಪದಮಂ ॥
ನಂಬಿಯಳಲ್ದರೊಳರೆಯೇ ।
ನೆಂಬೆಂ ನಂಬಿಗೆಯೆ ಕಾರಣಂ ಶಿವನೊಲಿಸಲ್ ॥೧೮॥

ಶಾ॥ ವಿ॥ ವೃ॥

ಆನೇಂಪಿಂದಿನ ಪುಟ್ಟನೊಳ್ಸುಕೃತಮಂ ಗೆಯ್ದಿರ್ದೆನೋ ಬಣ್ಣಿಸ ।
ಲ್ಕಾನಾರ್ಪೆಂನಿಜಬಂಧು ಬಂದಡಸಿದೀ ದುರ್ವಿಘ್ನಮಂ ದುಃಖಮಂ ॥
ಸಾನಂದಂ ಮಿಗಿಲೊಕ್ಕಲಿಕ್ಕಿದನೆನುತ್ತಂ ದೇಶಿಕಾಗ್ರೇಶನಂ ।
ನಾನಾವೈಭವದಿಂ ಸಮರ್ಚಿಸುತಮಿರ್ದಳ್ಸೌಖ್ಯದಿಂ ಬಾಳ್ಕೆಯೊಳ್ ॥೧೯॥

ಉ॥ ಮಾ॥ ವೃ॥

ಭಾವಿಸೆ ತತ್ಪುರಾಂತರದೊಳಲ್ಲಿ ಕುಮಾರ ವಯಸ್ಕನಾಂಗ್ಲವಿ ।
ದ್ಯಾವಿದು ತದ್ಗುರುತ್ತಮನ ಶಿಷ್ಯ ಪರಂಪರೆಗೊಂದಿದಂ ಸುಸಂ ॥
ಭಾವಿತ ಸುಪ್ರಸಿದ್ಧ ಮರಿಗೊಣ್ಣವರನ್ವಯ ದೀಪವರ್ಧನಂ ।
ಭಾವಜ ಸುಂದರಂ "ಬಸನಗೌಡನೆ"ನಿಪ್ಪವನೊಪ್ಪಿ ತೋರಿದಂ ॥೨೦॥

ಇವಗೊರ್ಮೆ ಪುರಾಕೃತ ಕ ।
ರ್ಮ ವಿಶೇಷದೊಳಾಸ್ಯ ಪಕ್ರಮಾಗಿರೆ ಘನವೈ ॥

ದ್ಯ ವಿಶಾರದರಿಗೆ ತೋರ್ಪುದು ।
ಲವಮಾತ್ರಂ ಗುಣಮೊಗೆಯದಿರಲ್ಕಾಪ್ತೇಷ್ಟರ್ ॥೨೧॥

ಮ॥ ವಿ॥ ವೃ॥

ವಿಕಲಾಸ್ಯಂಗೆ ಕುಮಾರಿಯಂ ಕೊಡುವರಾರ್ಮೇಣೀತನಂ ನೋಳ್ಪರಾ ।
ರ್ಸುಕರಂಕೈಮಿಗಿಲೋವರಾರ್ಸಬಲವಿದ್ದಾರ್ಗೆಲ್ಲವಪ್ರೀತಿಪರ್ ॥
ಸುಕುಮಾರಾಂಗನಿಗಾವ ಕರ್ಮದೊದವೋ ಬಂದತ್ತಿದೆಂದಾತ್ಮದೊ ।
ಳ್ವಿಕೃತಂ ಗೊಂಡುರೆನೊಂದಬೆಂದ ಹೃದಯಾಗ್ನಿಜ್ವಾಲೆಯಿಂ ಕರ್ಗುತುಂ॥೨೨॥

ಉಡಿಯಂಗ್ರಾಮದ ದೇವಿಗಾಂಸಲಿಸುವೆಂ ಪಣ್ಗಾಯ್ಗಳಿಂ ಸೊನ್ನದೊ ।
ಳ್ತೊಡವಂ ತಂದಿಡುವೆಂ ಮರುತ್ಕುವರಗಂ ಕೋಪಾಗ್ನಿ ಹೊನ್ನಮ್ಮಗಂ ॥
ಬಿಡುವೆಂಜನ್ನಿಗೆಯೊಂದನೆಂದುಸಿರ್ದು ನಾನಾದೈವಕಂ ಬಾಗಿ ಬೇ ।
ಳ್ದೊಡಮೇನಾಗದಿರಲ್ಕೆ ಬಂಧುಜನಗಳ್ದಿಙ್ಮೂಢರಾಗುತ್ತವರ್ ॥೨೩॥

ಪಡೆದಷ್ಟಲ್ಲದೆ ಬೇರೆಬರ್ಕುಮೆಫಲಂಬೇಡಲ್ಕೆ ಪ್ರಾಕ್ಕರ್ಮದೊ ।
ಳ್ತೊಡಕಂ ಬಿರ್ಚುವರುಂಟೆ ಭೂವಲಯದೊಳ್ವಿಷ್ಣ್ವಾದಿದೇವರ್ಕಳೇ ॥
ದಡವಂಗಾಣದೆ ಕರ್ಮದೊಳ್ತೊಡಗಿರಲ್ಸಾಮಾನ್ಯಮಾನುಷ್ಯರೆಂ ।
ದೊಡೆಪೇಳ್ತಿರ್ಚಿಸಲಕ್ಕುಮೇ ಶಿವಶಿವಾ ಭೀತಿಪ್ರದಂ ದುಷ್ಕರಂ ॥೨೪॥

ಚಂ॥ ವ॥ ವೃ॥

ಕಲಶಭವಂ ಸರಿತ್ಪತಿಯನೀಂಟುವ ಕಾಲದೊಳಾತ್ಮಸಂಭವಂ ।
ಜಲಕನೆಯಡ್ಡಬಂದನೆ! ಸುಧಾಂಶುಗೆ ರಾಹುದುಡುಂಕೆ ತಂದೆಯೇ ॥
ನಲಸದೆಯಡ್ಡಬಂದನೆ! ಸ್ವಯಂಕೃತಕರ್ಮಕೆತಾನೆಭಾಜನಂ ।
ನೆಲದೊಳಗೆಂದು ಮರ್ಧಿಪರು ಸ್ವಕೃತಕರ್ಮವಪಾಳಮಾಡುತುಂ ॥೨೫॥

ಗುರುಚಿಂತಾಮಣಿ ಪೊರೆಯೊ ।
ಳ್ಮರೆದಿರೆ ಕಾಳ್ಗಲ್ಲಪೇಕ್ಷಿಸಿದವೋಲಕಟಾ ॥
ಮರೆಸಿತ್ತು ಪೂರ್ವಕರ್ಮಂ ।
ತರಿಯಲ್ಕದಸಾಧ್ಯಮೆಂದು ಬಗೆದಂದಾಗಳ್ ॥೨೬॥

ಕುಲದೇಶಿಕನೀತನ ನೆಲೆ ।
ಗಲಸದೆ ನಡೆತಂದಣುಗನ ವಿಕಲಾನನಮಂ ॥

ಬಲವತ್ಕೃಪೆಯಿಂದಳಿಯೆಂ ।
ದು ಲಲನೆ ಪೊಡಮಟ್ಟು ಭಾವದೊಳ್ಕಲ್ಪಿಸಿದಳ್ ॥೨೭॥

ಇಪ್ಪತ್ತೊಂದುದಿನಂ ನೀ ।
ನೊಪ್ಪುವ ಮಾಳ್ಕೆ ದೃಢಭಕ್ತಿಯಿಂದಣುಗನೊಡಂ ॥
ತಪ್ಪದೆ ಪೀಠಕೆ ಬರ್ಪೆಂ ।
ತಪ್ಪಿಸದಿರಲಾಸ್ಯ ವಿಕೃತಿಯಂ ತನುಭವನಾ ॥೨೮॥

ತನುಭವೆಯಾನಲ್ತುಂ ಪ್ರಿಯ ।
ಜನಕಂನೀನಲ್ತುಮೀರ್ವರ ಬೆಸುಗೆ ತಾನೀ ॥
ದಿನಮದು ಬಿರ್ಚಿದುದೆನುತುಂ ।
ಮನದೊಳ್ನುಡಿದಂದಿನಿಂದೆ ನೋಂಪಿಯನಾಂತಳ್ ॥೨೯॥

ಭಸಿತಂ ತೀರ್ಥಮುಮಂ ಮಿ ।
ಶ್ರಿಸಿ ಲೇಪಿಸೆ ವಕ್ತ್ರವಕ್ರಮುದವಧಿಯಂ ಲಂ ॥
ಘಿಸದೆ ರುಜುಗೊಂಡುದು ವಿಚಾ ।
ರಿಸೆ ಗುರುಕರುಣೌಷಧಕ್ಕೆ ಪಿರಿದೇನೊಳವೇ ॥೩೦॥

ಘನವೈದ್ಯವಿಚಕ್ಷಣರಾ ।
ನನಮಂ ಕರ್ಪಿಡಿಸಿದ ತನುಜಾತನ ವಕ್ತ್ರಾ ॥
ನನಮಂ ನೇರ್ಪಡಿಸಿದ ಭೂ ।
ವಿನುತ ಶ್ರೀದೇಶಿಕೇಂದ್ರಲೀಲೆಯಪಾರಂ ॥೩೧॥

ಮ॥ ವಿ॥ ವೃ॥

ನೃತಿಗಂ ವೈದ್ಯಮನಿತ್ತುಮೋವ ಗುರುಮೂರ್ಧನ್ಯಂಗಿದೇಂತಾನೆ ಬೆ ।
ಟ್ಟತೆ ಸಾಮಾನ್ಯಜಡಪ್ರಹಾರಮೆನುತುಂ ಸದ್ಭಕ್ತಿಯಿಂಭಾವದೊಳ್ ॥
ನುತಿಸುತ್ತುಂ ಪದರೇಣುವಂ ನಿಜಶಿರೋನ್ಯೈಪಥ್ಯಮೆಂಬಂತೆತಾ ।
ಳ್ದತಿ ರೋಮೋದ್ಗಮವಾಗಿಬಾಗಿಭಯದಿಂ ತದ್ದೇಶಿಕಾಚಾರ್ಯನ ॥೩೨॥

ಉಪಕಾರಸ್ಮರಣಾರ್ಥಂ ।
ಸುಪವಿತ್ರವಿತರ್ದಿಯುಳಿದು ಬಹಿರಂತರದೊಳ್ ॥
ವಿಪುಲಾಮುದದಿಂ ನುಣ್ಪಾಂ ।
ತುಪಲಗಳಿಂ ರಚಿಸಿದರ್ತದೀಯಸ್ಥಲಮಂ ॥೩೩॥

ಒಡಲೆಂಬುವಗುಡಿ ಕಂಬ್ಳಗ ।
ಳಡಿಗಳ್ಳಿರಮೆ ಕಲಶಮದಾಗಲ್ನಿನ್ನಂ ॥
ಬಿಡದೆಯಜಿಸಿದಪೆನಿಂಬಂ ।
ಗುಡುಭಕ್ತೌಘಪ್ರಿಯ ಶಿವರುದ್ರಾಚಾರ್ಯ ॥೩೪॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ಪಂಚ
ದಶಾಶ್ವಾಸಂ
—ಸಮಾಪ್ತಂ.—

---

॥ ಓಂ ಭಕ್ತೇಷ್ಟಪ್ರದಾಯಿನೇನಮಃ ॥

## ಷೋಡಶಾಶ್ವಾಸಂ.



ಶಿವಮಂತ್ರಶಕ್ತಿಯಿಂದು ।
ಧ್ವನಿಸಿದ ನಾನಾವಿಧಾರ್ಥ ಕಾಮನೆಗಳನು ॥
ತ್ಸವದಿಂದಿತ್ತುವಿನೂತನ ।
ದಿವಿಜಾಗಮವೆನೆ ವಿರಾಜಿಸಿದನೀ ಕರ್ತಂ ॥೧॥

ಶ್ರೀಮೃಗಹಸ್ತಶ್ರುತಿ ವಚ ।
ನಾಮೃತ ಸುಖಶಾಲಿಶೂಲಿ ಸುಜನಾವಲಿ ದಿ ॥
ವ್ಯಾಮೃತಕರಭವಜನ್ಮಜ ।
ರಾಮೃತಿಹರನೀಗೆಸೌಖ್ಯಮಂ ವೃಷಪತ್ರಂ ॥೨॥

ಉ॥ ಮಾ॥ ವೃ॥
ಕೋಮಲಬಾಲೆ ಶೀಲೆಗುಣರತ್ನಸುಮಾಲೆ ವಿಭೂತಿಫಾಲೆ ತೇ ।
ಜೋಮಯ ಧರ್ಮಕರ್ಮಪರಿಪಾಲೆ ವಿಲೋಲೆ ಧವಾನುಕೂಲೆ ನೈ ॥

ಜಾಮಲ ವೃತ್ತಿಯಿಂ ಪರಮಲೌಕಿಕಕೌಶಲೆ "ಪಾರ್ವತಮ್ಮ"ನೆಂ ।
ಬಾ ಮಹಿಳಾಜನೋತ್ತಮೆ ವಿರಾಜಿಸಿದಳ್ನೆರೆ ಕೊಂಗನಾಡದೊಳ್ ॥೩॥

॥ ಚಂ॥ ಮಾ॥ ವೃ ॥

ಇವಳಿಗದೊರ್ಮೆ ಭೂತಮೊಳಸಾರ್ದುಮಳಲ್ಸಿ ಬಳಲ್ಸಿ ಸಾವನ ।
ಪ್ಪುವುದಿದೆ ಲೇಸೆನಿಪ್ಪನಿತು ಕಾಡಿಸಿ ಪೀಡಿಸಿ ಕೋಮಲಾಂಗಮಂ ॥
ನವೆಯಿಸಿ ದುರ್ವಿಕಾರಮನೊಡರ್ಚಿರುಳುಂಪಗಲುಂ ನಿರಂತರಂ ।
ಬವಣೆಯನೀವುದಂಬಗೆದು ಮಾಂತ್ರಿಕರಂ ಬೆಸಗೊಳ್ವುದಾಗವರ್ ॥೪॥

ಅರಿಷಿಣ ಕುಂಕುಮಂಬಳಿದು ಭೀಕರಬೀರುವ ರಂಗವಲ್ಲಿಯಂ ।
ವಿರಚಿಸಿ ಪೂಗನಿಂಬಿ ರಸವಾಳೆ ಸುವಾಸಿತ ಸಾರಧೂಪಮಂ ॥
ತರಿಸಿ ತದೀಯರಂಗದೊಳಸಾರ್ಚಿಮೇಣ್ಪೆಣದೋಡನಿಟ್ಟು ನಿಂ ।
ದರಚುತೆ ಮಂತ್ರಮಂ ಕಿನಿಸಿನಿಂ ಬಿಸಿಬೂದಿಯನೂದಿಕೇಳ್ದೊಡಂ ॥೫॥

ಮಿಸುಗದಿರಲ್ಮಗುಳ್ದು ಸಲಿಕಟ್ಟುಗಳಂ ಬಿಗಿದಷ್ಟದಿಕ್ಕಿಗಂ ।
ಪೊಸಪೊಸ ಯಂತ್ರಮಂ ರಚಿಸಿ ಬಂಧಿಸಿ ಕೆಂಪಡರ್ದಂಬಕಂಗಳಿಂ ॥
ಬಸಿರುರಿದೇಳ್ದು ಬೊಬ್ಬಿರಿದು ಚೀರುತೆ ದಂಡದಿನೆತ್ತಿ ಪೊಯ್ಯೆತಾ ।
ನುಸಿರದಿದೆಂದು ಬೇಸರಿದು ಮಾಂತ್ರಿಕರಚ್ಚರಿಯಾಂತು ಪೋದಿದರ್ ॥೬॥

ಇಂತವರೆಯ್ದಲ್ಪಾರ್ವತಿ ।
ಯಂತರದೊಳ್ಚಿಂತೆಯಾಂತು ಕಂಬನಿ ಸುರಿಸು ॥
ತ್ತುಂತರಹರಿಸದೆ ಬಳಿಕಿ ।
ನ್ನೆಂತೊಡರ್ಚುವದೆಂದುಕೆಮ್ಮನಿರ್ಪವಸರದೊಳ್ ॥೭॥

ಶಾ॥ ವಿ॥ ವೃ॥

ಧರ್ಮಾತ್ಮರ್ಕಳನೊಂದಿಯೊಂದುನಿಜಧರ್ಮಂ ರಾಜಿಸುತ್ತಿರ್ಪಮಾ ।
ಧರ್ಮಂರೂಪವನಾಂತು ಪ್ರೇರಿಸುತೆ ಕರ್ಮಂಗೆಯ್ಯುಗೆಂದೆಯ್ದಿತ ॥
ದ್ಧರ್ಮಪ್ರೀತರೊರಲ್ದುಪೇಳ್ವನುಡಿವೊಲ್ಕೋಡಲ್ಕೆ ರಾಜನ್ಮಹಾ ।
ಧರ್ಮಾಲಂಕರಣ ಪ್ರಭೂಷೆಯುಮನೋರೋದೋಂತದೊಳ್ತಕ್ಷಣಂ ॥೮॥

ಥಳ್ಳನೆ ಪ್ರತಿಯಾಕಾರಂ ।
ಸುಳ್ಳನೆ ಸುಳಿದು ಗುರುವಿರ್ಕೆ ತಳ್ಳಂಕಮಿದೇ ॥

ನೊಳ್ಪಿತೆಯನ್ನುತಮುದಿರ್ದುದಂ ।
ಪಳ್ಳದ ಜೊಂಡೊಡೆದನೀರ್ಗೆಬಗೆಯೆಳಸಿದವೊಲ್ ॥೯॥
ಎಂದೆಳ್ಚರಿಸಲ್ಬಿಗಡಿಂ ।
ದಂ ದರಿಯೊಳ್ಬೀಳೆ ಕಣ್ಣಲಿಮೊಗಂ ಸುಜನರ್ ॥
ಸುಂದರ ಸತ್ಪಥಮಂ ತೋ ।
ರ್ಪಂದದೆ ತಂದೆಗುರುತೋರ್ದನೆಂದುತ್ಸವದಿಂ ॥೧೦॥

ಉ॥ ಮಾ॥ ವೃ ॥

ತ್ರ್ಯಂಬಕಬಿಂಬ ದೇಶಿಕನಕರ್ತೃವಿತರ್ದಿಯನೆಯ್ದಿ ಭಕ್ತಿಭಾ ।
ಗ್ಯಾಂಬುಧಿತುಳ್ಕಿ ಕುಂಬಿಡುತೆ ಭೀಕರ ಬೀರುವಭೂತವೊಂದು ಬೆಂ ॥
ನ್ನಂಬಿಡದಂತೆ ಕಾಡಿಸುಗುಮಂತದನೀಂ ದಯದಿಂ ನಿರೀಕ್ಷಿಸು ।
ತ್ತುಂ ಬಿಡಿಸೆಂದು ನೊಂದಬಗೆಯಿಂದೆರೆಯಲ್ಗ್ರಹಮಾ ಕ್ಷಣಾರ್ಧದೊಳ್॥೧೧॥

ಮ॥ ವಿ॥ ವೃ॥

ಗುರುಪುತ್ರರ್ಕಳ ಸಾರ್ಕೆಯೊಳ್ನೆರೆದು ಬೇರೂರಿರ್ದುದೇ ಹೊಲ್ಲಮೆಂ ।
ದರಚುತ್ತುಂ ಶರಣೆಂದುಬಾಗಿ ಕುರುಪಂತಾನಿತ್ತು ಪೋದತ್ತು ಸ ॥
ತ್ವರದಿಂ ಭಾವಿಸೆ ಪದ್ಮಮಿತ್ರನುದಿಸಲ್ಗಾಢಾಂಧಕಾರೌಘ ಪೈ ।
ಸರಿವೊಲ್ಸದ್ಗುರು ಸತ್ಕೃಪೋದಯಮುದಾಗಲ್ಕಷ್ಟಮೇನಿರ್ಕುಮೇ ॥೧೨॥
ಭವಮಾಯಾಗ್ರಹಮಂ ತೆರಳ್ಚುವಗಿದೇಂ ಬೆಟ್ಟಿತ್ತೆ ಸಾಮಾನ್ಯ ಭೂ ।
ತವನುತ್ತಾರಿಪುದೆಂದು ಪಾಡಿ ಭಯದಿಂ ಮೈಯಿಕ್ಕಿ ತದ್ವಾರ್ಷಿಕೋ ॥
ತ್ಸವದೊಳ್ಕ್ರಮದಿಂವಿತರ್ದಿಗಭಿಷೇಕಂಗೆಯ್ಸಿ ಸಂತೃಪ್ತಿಯಿಂ ।
ಭವನಂದುಂಬಿರೆ ಪುತ್ರರಂಪಡೆದು ತಾನಾರೋಗ್ಯಮಂ ಪೊರ್ದಿದಳ್ ॥೧೩॥

ಉ॥ ಮಾ॥ ವೃ॥

ಸತ್ತಮ ತತ್ಪುರಾಂತರದೊಳಲ್ಲಿಯೆ ಲಕ್ಷ್ಮಮನೆಂಬವಳ್ಗೆ ತಾ ।
ನೆತ್ತಣದೋ ಗೃಹಂದುಡುಕಿ ಮಾನಕೆ ಭಂಗಮನೀವುದೆಂದವಳ್ ॥
ಚಿತ್ತಕೆ ತಂದು ಬೇರೆಣಿಸದೇನುಮನಾಗಳೆ ಭಾವದೊಳ್ಮುದಂ ।
ಬೆತ್ತುರೆ ಕರ್ತೃವೇದಿಕೆಯನೆಯ್ದಿದಳೇಂ ಗುರುಭಕ್ತಿಶೀಲಳೋ ॥೧೪॥

ಚಂ॥ ಮಾ॥ ವೃ ॥

ಎಲೆಗುರುದೇವ ಚಿತ್ತಯಿಸು ನಂಬಿದ ಭಕ್ತರನೋವನೆಂಬ ತ ।
ದ್ವಿಲಸಿತ ಕೀರ್ತಿಯಂ ನೆನೆದು ನಿನ್ನಡಿಗಾಂ ಮರೆವೊಕ್ಕೆಕಾವುದೆಂ ॥

ದಲರಿದ ಭಕ್ತಿಯಿಂದೆರಗಿ ಭೂತಿಯನಂಗಕೆ ಲೇಪಿಸಲ್ಕದಾ ।
ಗಳೆ ಪರಿದತ್ತು ಭೂತಪತಿಸನ್ನಿಧಿಯೊಳ್ದಡಭೂತದಾರ್ಪದೇಂ ॥೧೫॥

ಜಡಶಿಲೆಯಾಕೃತಿಯಿಂ ದು ।
ರ್ಜಡಮಂ ಜಡಿದಟ್ಟಿ ಲಿಂಗರೂಪದಿನಡಸಿ ॥
ರ್ದೆಡರ್ಗಳನ್ನೋಡಿಸಿ ಭಕ್ತ ।
ರ್ಗೊಡನೆ ಫಲಪದಾರ್ಥಮೀವುದಚ್ಚರಿಯಲ್ತೇ ॥೧೬॥

॥ ಪ್ರಭಾತವೃತ್ತಂ ॥

ಗುರುಪರಿಜಂ ದಳೆದುರ್ವಿಯೊಳ್ಗಿರೀಶಂ ।
ಚರಿಸಿ ನತಾತ್ಮರವಿಘ್ನವೃಂದಮಂ ಸಂ ॥
ತರಿಸಿರದೋವುವನೆಂದು ನಿಶ್ಚಯಂಗೊಂ ।
ಡಿರದೆರಗುತ್ತೆ ನಿಜಾಲಯಕ್ಕೆ ಪೋದಳ್ ॥೧೭॥

ಮ॥ ಸ॥ ವೃ॥

ಮೃಡಪೂಜಾನಂದಭಾಗ್ಯಂ ವಿಲಸಿತಕವಿತಾ ಕೌಶಲಂ ಚೆಲ್ವನಲ್ಗ ।
ನ್ನಡಶಾಲಾಧ್ಯಾಪಕಂ ಧರ್ಮಗುಣಭರಿತನಾಚಾರಶೀಲಂ ಮಹೇಶಂ ॥
ಪಡೆದಾತಂ ದೇಶಿಕೋದ್ಯತ್ಕೃಪೆಯನಭವಸಂಸಾರಸಂಪತ್ಸುಖಂ ಗೂ ।
ಡೆಡರೇನೊಂದಿಲ್ಲ ದೊ"ಲ್ದ ದ್ಲಿ"ಯೆನಿಪ ಪೊಳಲ ಲ್ಲಿರ್ಪ್ಪ ಯ್ಯಪಾಖ್ಯೇಯನಿರ್ದಂ ॥೧೮॥

ಇರದೀತಂಗೊರ್ಮೆ ಶಾಲಾಧಿಪತಿ ರವಿಪುರಕ್ಕೆಂದು ವರ್ಗಾಯಿಸಲ್ಸ ।
ತ್ವರದಿಂ ತದ್ಗ್ರಾಮಕೆಯ್ತಂದರಸಿ ಶಿವಸಪರ್ಯಕ್ಕಮಾಚಾರಕಂ ಮಂ ॥
ದಿರಮೊಂದುಂ ಸಿಕ್ಕದಂತಿರ್ಕೆಬಗೆದುಬಗೆಯೊಳ್ದಿವ್ಯಮಾಗಿರ್ಪದೊಂದೇ ।
ಪರಮಪ್ರಾಶಸ್ತ್ಯಮೆಂದೀ ಚರಪತಿಯ ಬೃಹಚ್ಛಾತ್ರದೊಳ್ವಾಸಗೆಯ್ದಂ ॥೧೯॥

ಉ॥ ಮಾ॥ ವೃ॥

ಇಂತವನೊಲ್ದು ಸಂಸರಣಮಂ ನೆರೆ ಸಾಗಿಪ ಸುಪ್ರಸಂಗದೊ ।
ಳ್ಕಂತು ಸಮಾನ ಸುಂದರ ಕುಮಾರಗೆ ದುರ್ಜಡಮೊಂದಡರ್ದುದು ।
ದಾರ್ಂತ ಮಹೋಗ್ರ ದುಸ್ಥಿಯನಿತ್ತುದನೀಕ್ಷಿಸಿ ಭಾವರಂಗದೊ ।
ಳ್ಚಿಂತೆಯು ಬೇಗೆಯಿಂ ಕುದಿದುಕಂದುತೆಕುಂದುತೆ ತಂದೆತಾಯಿಗಳ್ ॥೨೦॥

ಹಡೆದಪ್ಪನೆಕಡು ಕೂರ್ಮೆಯ
ಕಡಲಪ್ಪನೆ ತೊಡೆವಣಿ ತೊಡವಪ್ಪನೆ ಭಾಗ್ಯ ॥
ಕ್ಕೆಡೆಯಪ್ಪನೆ ಮದ್ವಂಶದ ।
ಸೊಡರಪ್ಪನೆ ನಿನಗಿದೇಂ ತೊಡರ್ದುದೊ ಮಗನೇ ॥೨೧॥

ನೀನಿರ್ದೊಡೆ ಹಡೆದೊಡಲುಂ ।
ನೀನಿರ್ದೊಡೆಸಕಲ ಭಾಗ್ಯದೊದವುಂ ಮುದವುಂ ॥
ನೀನಿಲ್ಲದೊಡಬುಜಾಪತ್ತು ।
ತಾನಿಲ್ಲದಿರುಳಿನವೊಲಮಂಗಲಮಶುಭಂ ॥೨೨॥

ತೋಳ್ತೊಟ್ಟಿಲದೊಳ್ಮುದದಿಂ ।
ತಳ್ತಮರ್ದಪ್ಪೋವಿದ ಪಡೆದಳನಗಲ್ದೀಗಳ್ ॥
ಮಿಳ್ತುವ ನೀನಿರದಪ್ಪುವ ।
ಪೊಳ್ತಿನಗೊದಗಿತ್ತಿದಾವ ಕರ್ಮವೊ ಮಗನೇ ॥೨೩॥

ಚಂ॥ ಪಾ॥ ವೃ॥

ಗಿರಿವರಬಾಲೆ ಶೀಲೆ ನಿನಗೇಂ ಕಡು ಕೂರ್ಮೆಯ ಮಕ್ಕಳಿಲ್ಲವೇ ।
ತರುಳರಕಂಡು ಹಿಗ್ಗಿ ನಲಿದಾಡುವದಿಲ್ಲವೆ ನೊಂದೊಡಾತ್ಮದೊಳ್ ॥
ಮರುಗುವದಿಲ್ಲವೇ ಗಣಿಸೆ ನಿಷ್ಕರುಣಾತ್ಮಭವರ್ಕಳುಂಟು ನಿ ।
ಷ್ಕರುಣೆಗಳಪ್ಪ ಮಾತೆಯರದುಂಟೆ ಸಮಗ್ರ ಧರಾತಲಾಗ್ರದೊಳ್ ॥೨೪॥

ಮ॥ ವಿ॥ ವೃ॥

ಪಿತಗಿಂ ಮಾತೆಯು ಭಾವಭೂಮಿಯತಿಮೆಲ್ಲಿತ್ತೆಂಬ ನಾಣ್ಣುಡಿತಿರ್ನೊ ।
ಕ್ಷಿತಿಗಾದೀಶ್ವರಿಯಪ್ಪ ನಿನ್ನಬಗೆಯೇ ಕಾಠಿನ್ಯಮಂ ಪೊರ್ದಿರಲ್ ॥
ಹತಿಸಲ್ಕಾಮಯ ರೂಪದಿಂ ಜಗದೊಳಿನ್ನಾರ್ಕಾವರೊಲ್ದಪ್ಪುವ ।
ಗತಿಯಾರೆಂದು ಬಳಲ್ದು ಬೇಗುದಿಯನಾಂತಾಕ್ರಂದನಂ ಮಾಡಿದಳ್ ॥೨೫॥

ಹೆಂಗರುಳಿನ ಮಠದಮ್ಮಂ ।
"ಗಂಗಮ್ಮ"ನಿವರ್ಗಳುಮ್ಮಳಂ ಸಹಿಸದೆ ತಾಂ ॥
ಕಂಗನೆ ಕರಂಗಿ ಮನದೊ ।
ಳ್ಕಂಗಳ ನೀರ್ದುಂಬಿಸುಯ್ದು ಗದ್ಗದ ಸರದಿಂ ॥೨೬॥

ಮೃಡಗುರುವಿರ್ದೆಡೆಯಳಲಿಂ ।
ಗೆಡೆಯಹುದೆ ತದೀಯದೇಶಿಕ ಶಿಖಾಮಣಿನೆ ॥
ಲ್ಲಡಿಯಿಂ ನಿರ್ಮಿತ ಭಸಿತಂ ।
ದೊಡೆಯರೆನುತ್ತೊರೆಯೆ ಕೇಳ್ದು ಶಿಕ್ಷಕನಾಗಳ್ ॥೨೭॥

॥ ಚಂ॥ ಮಾ॥ ವೃ ॥

ಕುಪಿತದೊಳಾವ ದೇವತೆಯೊಳಿರ್ಕುಗುಮೇನದರಿಂದಮುಪ್ಪುದೇಂ ।
ಶಪಿಸಿದೊಡಂ ವಿಭಾಡಿಸಲದಕ್ಕುಮೆ ತಪ್ಪುಗುಮೇ ಸ್ವಕರ್ಮದೊಂ ॥
ದುಪಹತಿಭೂತಿಗೀತಿ ತೊಡೆಯಲ್ಪ್ರಜೆಯಿಂಗಿಯಣಂಗಿ ಪೋಕುಮೇ ।
ತಪಿಸದಿರೆನ್ನ ಶೀರ್ಷವನಕಾರಣಮೆಂದವನಾಳವಾಡಿದಂ ॥೨೮॥

ಮಹಿತ ಮಹೇಶನೆಂತೊ ವಿಲಸದ್ಗುರು ಹಸ್ತಜನೆಂತೊ ಭಾವಿಸ ।
ಲ್ವಿಹಿತಗುರುಪ್ರಸಾದಿಯುಮದೆಂತೊ ಸುಶಿಕ್ಷಕನೆಂತೊ ಚಿತ್ಸುಖಾ ॥
ವಹ ಗುರುದೇವತಾ ನಿಕರದೊಳ್ಸುಪವಿತ್ರಮುದಾತ್ತ ಭಕ್ತಿಯಂ ।
ವಹಿಸದನಾಸ್ತಿಕಂ ಪರಮಲಿಂಗಸಮರ್ಚಕನೆಂತೊ ಲೋಕದೊಳ್ ॥೨೯॥

॥ ಮ॥ ಸ್ರ॥ ವೃ ॥

ಉಪದೇಶಾರ್ಥಾರ್ಥಮಂ ಭಾವಿಸದೆ ಸುಗುಣಶೀಲಂಗಳಂ ಭಕ್ತಿಯಂ ತಾ ।
ಳ್ದು ಪವಿತ್ರಾಚಾರ ಸಂಪನ್ನರೆನಿಸದೆ ದಯಾಧರ್ಮದಾಕ್ಷಿಣ್ಯದಿಂತ ॥
ಳ್ತುಪಚಾರಂಮಿಕ್ಕುದೀನರ್ಗೆಸಗದೆಹಿತಮಂಸಂತತಂ ಸತ್ಯದಿಂ ಶಾಂ ।
ತಿ ಪರೀತರ್ತೋರ್ದವೋಲ್ತಾವಿರದೆ ಚಿದುಪದೇಶಂ ವಿಡಂಬಕ್ಕೆ ಕೊಳ್ವರ್ ॥೩೦॥

ಕಂಡವರಂ ಕಂಡೆಳಸುತೆ ।
ಕೊಂಡೊಡೆ ಜ್ಞಾನೋಪದೇಶಮಂ ಪುಲಿದೊವಲಂ ॥
ಕೊಂಡು ಪೊದೆದ ಖರದೊಲ್ಭಾ ।
ಮಂಡಲದಪಹಾಸ್ಯಕರಿಯೆ ಪಕ್ಕಾಗಿರರೇ ॥೩೧॥

ಪುನರಪಿ ಮಠದಮ್ಮಂ ಕಂ ।
ಬನಿ ಸುರಿಸುತ್ತೆ ಗುರುದೇವತೆಗಳೊಳ್ಪಗೆಯಲ್ ॥
ಜನಿಯೊಳ್ನಂಬಿಗೆ ತಾನಿ ।
ರ್ದನಿತೊಗೆಗುಂ ಫಲಮದತ್ತಣಂ ನಂಬೆಂದಳ್ ॥೩೨॥

ಮ॥ ವಿ॥ ವೃ॥

ಒಣಗಲ್ಪೈರಿಗೆ ವರ್ಷಮೇಳ್ತರದಿನೆಯ್ತೆಂದಂತೆ ಯೋಗೀಶಗಂ ।
ತ್ರಿಣಯಂ ದರ್ಶನಮಿತ್ತುವೊಲ್ಪರಿಕಿಸಲ್ನೀರಳ್ಕೆಯುಂ ಬೆಂದಗ ॥
ಗ್ಗಣೆಯುಂಪ್ರಾಪ್ತಿಸಿದಂತೆ ಶಿಷ್ಯಕನ ಚೇತಃಪದ್ಮದೊಳ್ಮೂಡಿತ ।
ಕ್ಷಣದೊಳ್ದೈವಿಕಶಕ್ತಿಯೊಂದು ಬೆಳಗಲ್ಕಾಶ್ಚರ್ಯದಿಂತೋಷದಿಂ ॥೩೩॥

ಮಂ॥ ಕ್ರಾಂ॥ ವೃ॥

ಗಂಗಾಮಾತೃ ಪ್ರರುಚಿಯುಪದೇಶೋಕ್ತಿನಾಸ್ತಿಕ್ಯಮಂನಾ ।
ಶಂಗೆಯ್ದಾತ್ಮಾವರಣ ಮಲಿನಾಶೇಷಮಂ ಕರ್ಚಿತಾನೆ ॥
ನ್ನಂಗಕ್ಕಾನಂದಮನೊದವಿಸಿತ್ತೆಂದು ಕೊಂಡಾಡುತುಂತ ।
ದ್ಗಂಗಾಮಾದೇವಿ ಯಡಿವಿಡಿದೇಳ್ತೆಂದು ಪೀಠಕ್ಕೆ ಬಾಗಿ ॥೩೪॥

ಭೂತಿ ಸಮನ್ವಿತತೀರ್ಥವ ।
ನೋತಂಗಕೆ ತೊಡೆವುದಚ್ಚರಿಯೆನಲ್ತನುಸಂ ॥
ಭೂತಂ ಮಡಿದೊಗೆದಂ ಮಾ ।
ರುತಾಪ್ತನಿಲ್ಲದವಲೋಹಮೇಂ ಕರಗುವದೇ ॥೩೫॥

ಗುರುಪಾದತೀರ್ಥಮಂ ಬಾ ।
ದೊರೆಯಂಮಡಗಿಟ್ಟು ತೂಕಿಸಲ್ತಕ್ಕಡಿಯೊಳ್ ॥
ಸುರಧುನಿಲಾಘುವನುಕ್ಕುಂ ।
ಪಿರಿದಕ್ಕುಂ ಗುರುಪದೋದಮೆಂದೆರಗಿರ್ದಂ ॥೩೬॥

ವನಜಾತಾಪ್ತನೆನಿಸಿದೊಡ ।
ಮಿನನಾತ್ಮಮಯೂಖಮಂಚರಾಚರ ಚಯದೊಳ್ ॥
ಮಿನುಗಿಸುವೊಲ್ನಂಬಿರ್ಪರ ।
ಮನದೊಳ್ಶಿವಲಿಂಗರೂಪದಿಂ ಗೋಚರಿಪಂ ॥೩೭॥

॥ ಚಾಮರವೃತ್ತಂ ॥

ಇಂತನೇಕರೀತಿಯಿಂ ಪೊಗಳ್ದು ಭೂತಿಭೂತಿಯುಂ ।
ಕಾಂತಕಾಂತಿ ಶಾಂತಿಕಾರಣಾಂಗ ದಿವ್ಯತೀರ್ಥಮಂ ॥
ಕಾಂತೆಯಿಂ ತನೂಭವರ್ಕಳಿಂ ಸಮಂತುತಳ್ತುನಿ ।
ಶ್ಚಿಂತದಿಂಘಟಾಗ್ರದಲ್ಲಿ ಬಾಳ್ದಿಕಾಲವಾಂತಿದಂ ॥೩೮॥

ಬಡಪಶುಕರ್ದಮದೊಳ್ಬೀ ।
ಳ್ದೊಡೆಬಿಡದೆತ್ತಿ ಪೊರೆವರ್ಘವಭವಾಂತರದೊಳ್ ॥
ಕಡುಮೋಹದಕರ್ದಮದೊ ।
ಳ್ಕೆಡೆದೆನ್ನಂದಯದೊಳೆತ್ತಿಪೊರೆ ಶಿವರುದ್ರ ॥೩೯॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್‌ಷೋ
ಡಶಾಶ್ವಾಸಂ
—ಸಮಾಪ್ತಂ.—

---

॥ ಓಂ ಭಕ್ತಪ್ರಾಣಾಯನಮಃ ॥

## ಸಪ್ತದಶಾಶ್ವಾಸಂ.



ಜಡಜಾಕ್ಷಿಯರೆಳೆಯರ್ಕಳಿ ।
ಗೊಡನಾಶಿಸಿಬಂದುನಿಂದು ಬೇಡಲ್ದಯದಿಂ ॥
ಬಿಡದೀವನವರ್ಗಡಿಯೆಡೆ ।
ಮಡಗಿರಿಸಿದನೇನೊ ಚೆಲ್ವಮಕ್ಕಳ ಬಿತ್ತಂ ॥೧॥

ಯಜನಂ ಕುರ್ವೇ ವಿಲಸ ।
ದ್ಭಜನಂಕುರ್ವೇ ಮಹೋಪಚಾರಂ ಕುರ್ವೇ ॥
ಸುಜನಂಕುರ್ವೇ ಶಿವಶಿವ
ವಿಜಯಂ ಕುರುಮೇ ಮಹೋಕ್ಷಪತ್ರಾರೂಢ ॥೨॥

ನೆರೆವೀ ರವಿಪುರದೊಳ್ತ ।
ದ್ಗುರು ಶಿಷ್ಯಪರಂಪರೆಯೊಳೆ "ಮರಿಗೊಣ್ಣನವರ್" ॥

ತರುಣೀಮಣಿ ಲಿಂಗಮ್ಮಂ ।
ವರಾನುಕೂಲೆ ಗೃಹಲಕ್ಷ್ಮಿಯೆನೆರಂಜಿಸಿದಳ್ ॥೩॥

॥ ಹರಿಣೀವೃತ್ತಂ ॥

ಇವಳತಿ ಸುತವ್ಯಾಮೋಹಂಗೊಂಡನೇಕ ವಿಧಾನಮಂ ।
ಸವಿಧಿಯಿನೊಡರ್ಚಲ್ಪುತ್ರಾಪೇಕ್ಷೆ ತೀರದಿರಲ್ಕೆತಾಂ ॥
ಸವಿದುಮನದೊಳ್ಚಿಂತಾಗ್ನಿ ಜ್ವಾಲೆಯಿಂದಳವಾರ್ದುಪಾ ।
ಯವನುಳಿದುಬೇರೊಂದಂ ತತ್ಕರ್ತನಂ ಮರೆಯೆಯ್ದಿದಳ್ ॥೪॥

ಶಾ॥ ವಿ॥ ವೃ॥

ಇಪ್ಪತ್ತೊಂದುದಿನಂದೃಢಾಚರಣೆಯಿಂಪೀಠಕ್ಕೆಬಂದೊಲ್ದು ತಾ ।
ನೊಪ್ಪಂಬೆತ್ತ ತದೀಯತೀರ್ಥವನವಳ್ಸಂಸೇವನಂ ಮಾಡೆ ಚೆ ॥
ಲ್ವಪ್ಪಿರ್ದಾತ್ಮಜರತ್ನಮಂ ಪಡೆದು ವಂಶಾಚಾರ್ಯನಂ ಪಾಡುತಂ ।
ದೊಪ್ಪಿರ್ದಳ್ನೆರೆ ನಂಬಿ ಕೆಟ್ಟರೊಳರೇ ಶ್ರೀದೇಶಿಕೋತ್ತಂಸನಂ ॥೫॥

ಪೆರತೊಂದು ದಿವ್ಯಲೀಲೆಯ ।
ನೊರೆವೆಂ "ಗುಬ್ಬೇನಕೊಪ್ಪ"ದವರನ್ವಯದೊಳ್ ॥
ಮೆರೆದಳ್ಲಕ್ಷ್ಮಮನೆಂಬ ।
ಳ್ತರುಣೀಮಣಿಚೆಲ್ವ"ಸೂಟ"ನಾಮದ ಪೊಳಲೊಳ್ ॥೬॥

ಉ॥ ಮಾ॥ ವೃ॥

ದ್ವಾದಶವರ್ಷಗಳ್ಸರಿದು ಪೋಗಿರೆ ಪುತ್ರರನೊಂದಿ ಬಾಳ್ವಭಾ ।
ಗ್ಯೋದಯಮಾಗದಿರ್ಕೆ ತನುವಲ್ಲರಿ ನಿಷ್ಫಲಮಾಂತು ಹಾಸ್ಯಕೀ ॥
ಡಾದುದು ದ್ವಂದ್ವವಂಶಕೆ ವಿಶೋಕಮನಿತ್ತುದು ಭಾಗ್ಯಹೀನಳಾ ।
ನಾದೆನೆನುತ್ತೆಪಂಬಲಿಸಿ ನಿಂದಿಸಿದಳ್ಪೃತಕರ್ಮದೇಳ್ಗೆಯಂ ॥೭॥

ಕಡ್ಡಿಯನಿಕ್ಕಿ ಹೊತ್ತಿಗೆಯನಾರ್ತತೆಯಿಂಬಿಡದೆಯ್ದಿ ಕೇಳ್ದಿದ ।
ಳ್ಸಡ್ಡೆಯನಾಂತು ಲಂಘನಮನೆಯ್ದೆ ಶಮೀಕುಜನೋಂಪಿಯನೋಂತೊಡಂ ನಿಜಂ ॥
ದೊಡ್ಡಿತರಲ್ಲಿಗೆಯ್ದಿ ಋತುಕಾಲದ ದೋಷಮುಸಿರ್ವುದೆಂದ್ರು ಕೈ ।
ಯ್ದೊಡ್ಡಿವಿನಮ್ರದಿಂದೆರೆದಳಾತ್ಮಜರಳ್ತಿಯೆನಿತ್ತೊ ಲೋಕದೊಳ್ ॥೮॥

ಮಂಡನಮಿರ್ದೊಡಮೇಂ ಕುಲ ।
ಮಂಡನ ಸತ್ಪುತ್ರರತ್ನಮೊಂದಿಲ್ಲದಿರಲ್ ॥
ರಂಡೆಯುಯೌವ್ವನದೊಲ್ದು।
ಷ್ಪಿಂಡೆಯ ಮಿಂಡೆಯ ಪ್ರಪಂಚಮೇಂ ಸುಖಕರಮೇ ॥೯॥

ಬಂಜೆಯಿವಳೆಂದು ಸಖಿಯ ।
ರ್ಮುಂಜಾವಿನೊಳಾಸ್ಯಮಂ ನಿರೀಕ್ಷಿಸದಿರ್ಪರ್ ॥
ಹಿಂಜರಿವರ್ಶುಭ ಶೋಭನ ।
ರಂಜನಕಾರ್ಯಾವಸರದೊಳೊರೆಯಲ್ಕರೆಯಲ್ ॥೧೦॥

ನೆಟ್ಟನೆ ಶಿಲೆಯಾಕೃತಿಯಂ ।
ತೊಟ್ಟಳಿದಿರ್ದೊಡಜಸೃಷ್ಟಿಯೊಳ್ಸೊಗಮಿತ್ತುಂ ॥
ಪುಟ್ಟಿತನುಜರಂ ಪಡೆಯದ ।
ಹೆಟ್ಟುಗೆ ದುರ್ಜನ್ಮಮಿರ್ದೊಡೇನಿಲ್ಲದೊಡೇಂ ॥೧೧॥

ಪಿಂದಿನ ಪುಟ್ಟಿನೊಳಾನಾ ।
ರ್ಕಂದಗೆ ವಿಷಮೂಡಿಸಿರ್ದೆನೋ ಪಾಪಾತ್ಮಳ್ ॥
ಬಂದತ್ತು ತನ್ನಿಮಿತ್ತದಿ ।
ನಿಂದೀದುರ್ದಾಂತ ದುರ್ವಿಪಾಕಂಶೋಕಂ ॥೧೨॥

ಉ॥ ಮಾ॥ ವೃ॥

ಇಂತು ಪಲುಂಬಿ ಪಂಬಲಿಸಿ ನಿಟ್ಟುಸಿರಿಟ್ಟಳವಾರ್ದುಕಂದಿ ದು ।
ಶ್ಚಿಂತೆಯ ಬೇಗೆಯಿಂ ಕುದಿದು ಕಂಗಸೆಕರ್ಗಿ ಸುತಾನುರಾಗದಿಂ ॥
ದಂತರದೊಳ್ಪ್ರಪಂಚಸುವಿಲಾಸಮನೇಳಿಸಿ ಭ್ರಾಂತಿಗೊಂಡವೊ ।
ಲ್ಕಾಂತೆಯಿರಲ್ಕೆಮುಪ್ಪಡಸಿದೋರ್ವಳುಸಿರ್ದಳದೇನನೆಂದಪೆಂ ॥೧೩॥

॥ಮಾಲಿನೀ ವೃತ್ತಂ॥

ಎಲೆಮಗಳೆ ವಿಧಾತೋಲ್ಲೇಖಮಂ ತೊಳ್ದು ಸ್ವಚ್ಛಂ ।
ದ ಲಲಿತ ನಿಜಲೇಖಂ ಲೇಖಿಪಂ ತನ್ನಿಮಿತ್ತಂ ॥
ನಲಿದು ರವಿಪುರಾಚಾರ್ಯೋತ್ತಮಾಂಘ್ರ್ಯಬ್ಜಯುಗ್ಮ ।
ಕ್ಕಲಸದೆ ಮರೆಬೀಳ್ನಿನ್ನಿಷ್ಟಮಂ ನೀಡ್ವನೆಂದಳ್ ॥೧೪॥

ತರುಣೀಮಣಿ ಲಿಂಗಮ್ಮಂ ।
ವರಾನುಕೂಲೆ ಗೃಹಲಕ್ಷ್ಮಿಯೆನೆರಂಜಿಸಿದಳ್ ॥೩॥

॥ ಹರಿಣೀವೃತ್ತಂ ॥

ಇವಳತಿ ಸುತವ್ಯಾಮೋಹಂಗೊಂಡನೇಕ ವಿಧಾನಮಂ ।
ಸವಿಧಿಯಿನೊಡರ್ಚಲ್ಪುತ್ರಾಪೇಕ್ಷೆ ತೀರದಿರಲ್ಕೆತಾಂ ॥
ಸವಿದುಮನದೊಳ್ಚಿಂತಾಗ್ನಿ ಜ್ವಾಲೆಯಿಂದಳವಾರ್ದುಪಾ ।
ಯವನುಳಿದುಬೇರೊಂದಂ ತತ್ಕರ್ತನಂ ಮರೆಯೆಯ್ದಿದಳ್ ॥೪॥

ಶಾ॥ ವಿ॥ ವೃ॥

ಇಪ್ಪತ್ತೊಂದುದಿನಂದೃಢಾಚರಣೆಯಿಂಪೀಠಕ್ಕೆಬಂದೊಲ್ದು ತಾ ।
ನೊಪ್ಪಂಬೆತ್ತ ತದೀಯತೀರ್ಥವನವಳ್ಸಂಸೇವನಂ ಮಾಡೆ ಚೆ ॥
ಲ್ವಪ್ಪಿರ್ದಾತ್ಮಜರತ್ನಮಂ ಪಡೆದು ವಂಶಾಚಾರ್ಯನಂ ಪಾಡುತಂ ।
ದೊಪ್ಪಿರ್ದಳ್ನಿರೆ ನಂಬಿ ಕೆಟ್ಟರೊಳರೇ ಶ್ರೀದೇಶಿಕೋತ್ತಂಸನಂ ॥೫॥

ಪೆರತೊಂದು ದಿವ್ಯಲೀಲೆಯ ।
ನೊರೆವೆಂ "ಗುಬ್ಬೇನಕೊಪ್ಪ"ದವರನ್ವಯದೊಳ್ ॥
ಮೆರೆದಳ್ಲಕ್ಷ್ಮಮನೆಂಬ ।
ಕ್ತರುಣೀಮಣಿಚೆಲ್ವ"ಸೂಟಿ"ನಾಮದ ಪೊಳಲೊಳ್ ॥೬॥

ಉ॥ ಮಾ॥ ವೃ॥

ದ್ವಾದಶವರ್ಷಗಳ್ಸರಿದು ಪೋಗಿರೆ ಪುತ್ರರನೊಂದಿ ಬಾಳ್ವಭಾ ।
ಗ್ಯೋದಯಮಾಗದಿರ್ಕೆ ತನುವಲ್ಲರಿ ನಿಷ್ಫಲಮಾಂತು ಹಾಸ್ಯಕೀ ॥
ಡಾದುದು ದ್ವಂದ್ವವಂಶಕೆ ವಿಶೋಕಮನಿತ್ತುದು ಭಾಗ್ಯಹೀನಳಾ ।
ನಾದೆನೆನುತ್ತೆಪಂಬಲಿಸಿ ನಿಂದಿಸಿದಳ್ಕೃತಕರ್ಮದೇಳ್ಗೆಯಂ ॥೭॥

ಕಡ್ಡಿಯನಿಕ್ಕಿ ಹೊತ್ತಿಗೆಯನಾರ್ತತೆಯಿಂಬಿಡದೆಯ್ದಿ ಕೇಳ್ದಿದ ।
ಳ್ಸಡ್ಡೆಯನಾಂತು ಲಂಘನಮನೆಯ್ದಿ ಶಮೀಕುಜನೋಂಪಿಯನೋಂತೊಡಂ ನಿಜಂ ॥
ದೊಡ್ಡಿತರಲ್ಲಿಗೆಯ್ದಿ ಋತುಕಾಲದ ದೋಷಮುಸಿರ್ವುದೆಂದುಃ ಕೈ ।
ಯ್ದೊಡ್ಡಿವಿನಮ್ರದಿಂದೆರೆದಳಾತ್ಮಜರಳ್ತಿಯೆನಿತ್ತೊ ಲೋಕದೊಳ್ ॥೮॥

ಮಂಡನಮಿರ್ದೊಡಮೇಂ ಕುಲ ।
ಮಂಡನ ಸತ್ಪುತ್ರರತ್ನಮೊಂದಿಲ್ಲದಿರಲ್ ॥
ರಂಡೆಯಯೌವ್ವನದೊಲ್ದು।
ಪ್ಪಿಂಡೆಯ ಮಿಂಡೆಯ ಪ್ರಪಂಚಮೇಂ ಸುಖಕರಮೇ ॥೯॥

ಬಂಜೆಯಿವಳೆಂದು ಸಖಿಯ ।
ರ್ಮುಂಜಾವಿನೊಳಾಸ್ಯಮಂ ನಿರೀಕ್ಷಿಸದಿರ್ಪರ್ ॥
ಹಿಂಜರಿವರ್ಶುಭ ಶೋಭನ ।
ರಂಜನಕಾರ್ಯಾವಸರದೊಳೊರೆಯಲ್ಕರೆಯಲ್ ॥೧೦॥

ನೆಟ್ಟನೆ ಶಿಲೆಯಾಕೃತಿಯಂ ।
ತೊಟ್ಟಳಿದಿರ್ದೊಡಜಸೃಷ್ಟಿಯೊಳ್ಳೊಗಮಿತ್ತುಂ ॥
ಪುಟ್ಟತನುಜರಂ ಪಡೆಯದ ।
ಹೆಟ್ಟುಗೆ ದುರ್ಜನ್ಮಮಿರ್ದೊಡೇನಿಲ್ಲದೊಡೇಂ ॥೧೧॥

ಪಿಂದಿನ ಪುಟ್ಟನೊಳಾನಾ ।
ರ್ಕಂದಗೆ ವಿಷಮೂಡಿಸಿರ್ದೆನೋ ಪಾಪಾತ್ಮಳ್ ॥
ಬಂದತ್ತು ತನ್ನಿಮಿತ್ತದಿ ।
ನಿಂದೀದುರ್ದಾಂತ ದುರ್ವಿಪಾಕಂಶೋಕಂ ॥೧೨॥

ಉ॥ ಮಾ॥ ವೃ॥

ಇಂತು ಪಲುಂಬಿ ಪಂಬಲಿಸಿ ಸಿಟ್ಟುಸಿರಿಟ್ಟಳವಾರ್ದುಕಂದಿ ದು ।
ಶ್ಚಿಂತೆಯ ಬೇಗೆಯಿಂ ಕುದಿದು ಕಂಗನೆಕರ್ಗಿ ಸುತಾನುರಾಗದಿಂ ॥
ದಂತರದೊಳ್ಪ್ರಪಂಚಸುವಿಲಾಸಮನೇಳಿಸಿ ಭ್ರಾಂತಿಗೊಂಡವೊ ।
ಲ್ಕಾಂತೆಯಿರಲ್ಕೆಮುಪ್ಪಡಸಿದೋರ್ವಳುಸಿರ್ದಳದೇನನೆಂದಪೆಂ ॥೧೩॥

॥ಮಾಲಿನೀ ವೃತ್ತಂ॥

ಎಲೆಮಗಳೆ ವಿಧಾತೋಲ್ಲೇಖಮಂ ತೂಳ್ದು ಸ್ವಚ್ಛಂ ।
ದ ಲಲಿತ ನಿಜಲೇಖಂ ಲೇಖಿಪಂ ತನ್ನಿಮಿತ್ತಂ ॥
ನಲಿದು ರವಿಪುರಾಚಾರ್ಯ್ಯೋತ್ತಮಾಂಘ್ರ್ಯಬ್ಜಯುಗ್ಮ ।
ಕ್ಕಲಸದೆ ಮರೆಬೀಳ್ನಿನ್ನಿಷ್ಟಮಂ ನೀಡ್ವನೆಂದಳ್ ॥೧೪॥

ಮ॥ ಸ್ರ॥ ವೃ॥

ನುಡಿಯಂ ಕೇಳ್ದಾಕ್ಷಣಂ ತಂಗದಿರನುದಯದಿಂ ವಾರ್ಧಿಯುಕ್ಕೇರುವೋಲು ।
ಗ್ಗಡದಿಂತನ್ನಂಗಿಯುರ್ಬುತ್ತೆ ಮುದಿಪೆಯಮನಂಬೊಕ್ಕು ಪ್ರೇರೇಪಿಸುತ್ತುಂ ॥
ಮೃಡರೂಪಂ ದೇಶಿಕಂ ಸೂಚಿಸಿದನೆನುತೆ ತಾಂ ಭಾವದೊಳ್ಸಂತಸಂ ದಾ ।
ಳ್ದೊಡನಾಗಳ್ಬೇಡಿಕೊಂಡಳ್ನೆನಪಿದ ಫಲಮಂ ಕೊಟ್ಟೊಡಾಂ ಭಕ್ತಿಯಿಂದಂ ॥೧೫॥

॥ ತರಳವೃತ್ತಂ ॥

ಎಳೆಯನಿಂದೊಡಗೂಡಿ ಗಾಡಿಯಿನೆಯ್ದಿ ಜಂಗಮತೃಪ್ತಿಯಂ ।
ಗೊಳಿಸಿ ಶಕ್ತ್ಯನುಸಾರ ದಕ್ಷಿಣೆಯಿತ್ತು ಮನ್ನಿಸಿ ಭಾವಮಂ ॥
ಸೆಳೆವ ಬಣ್ಣದತೊಟ್ಟಲಂ ಭವದೀಯ ಪೀಠದ ಪಕ್ಕದೊ ।
ಳ್ಸೊಳೆಯೆ ಕಟ್ಟೆ ಕಡಂಗಿ ತೂಗುತೆ ಜೋಗುಳಂ ಮಿಗೆಪಾಡುವೆಂ ॥೧೬॥

ಶಾ॥ ವಿ॥ ವೃ॥

ಇಂತೇಕಾದಶ ದರ್ಶಮೆಯ್ದಿಬಿಡದಾತ್ಮಗ್ರಾಮದಿಂ ಶಾಂತಿ ಸಾಂ ।
ದ್ರಂ ತದ್ದೇಶಿಕತೀರ್ಥಮಿಶ್ರಿತ ವಿರಾಜದ್ಭೂತಿಯಂ ಸೇವಿಸಲ್ ॥
ಸ್ವಾಂತಾಪೇಕ್ಷಿಸಿದಂತೆ ಲಕ್ಷಣಯುತಂ ವಂಶಾಬ್ಧಿಚಂದ್ರೋಪಮಂ ।
ಚಿಂತಾತಾರಕಪುತ್ರನಂ ಪಡೆದಳೇನೆಂಬೆಂ ಮಹಾಶ್ಚರ್ಯಮಂ ॥೧೭॥

ಮ॥ ವಿ॥ ವೃ॥

ಜಲಮಂ ಪಾವಕನಂ ಪಯೋಧಿದಳೆದೊಲ್ದು ಶ್ವಾಪ ನಿಶ್ವಾಪಮಂ ।
ಸಲೆ ತಾಳ್ದಿರ್ಪ ಗುರುಪ್ರಭೂತ್ತಮಗೆ ತಾನೀಡಾವುದಂತರ್ಯದೊಳ್ ॥
ನೆಲಸಿರ್ದೆಲ್ಲ ಸದಿಷ್ಟಸಿದ್ಧಿಸುಖಮಂ ಕೊಟ್ಟೋವನಂ ಮಿತ್ರೆಯ ।
ರ್ಬಲವದ್ಭಕ್ತಿಯ ಪಾಶದಿಂ ಸೆಳುದುಕೊಂಡೌ ಧನ್ಯಳೆಂದಾಡಿದರ್ ।೧೮॥

ಮ॥ ವಿ॥ ವೃ॥

ರಜನೀಶೋದಯದಿಂ ವಿಕಾಸಮುಮನಾಳ್ವಂತುತ್ಪಲಂ ಪುತ್ರನಿಂ ।
ರಜನೀಶಾನನೆ ತಳ್ತು ಹರ್ಷದೊದವಿಂದೇಕಾದಶೋನ್ಮಾಸದೊಳ್ ॥
ನಿಜಬಂಧುಪ್ರಿಯರಿಂ ಸಖೀಜನಗಳಿಂ ಸೌರಂಭದಿಂಬಂದು ನಿ ।
ರ್ವ್ಯಜಿನಶ್ರೀಗುರುಕರ್ತೃಪೀಠದೆಡೆಯೊಳ್ರೋಮಾಂಚಿಸಲ್ಕಂಗದೊಳ್ ॥೧೯॥

|| ವಸಂತತಿಲಕಾವೃತ್ತಂ ||

ಧರ್ಮಾರ್ಥಕಾಮ ಮುಖಮೋಕ್ಷ ಸುಲಬ್ಧಮಾಗ ।
ಲ್ಧರ್ಮಸ್ವರೂಪ ತವ ವಿಗ್ರಹದರ್ಶನಂ ಮು ॥
ಖ್ಯಾರ್ಮಂ ಮಹೀತಳದೊಳನ್ಯರದುಂಟೆ ನೋಡ ।
ಲ್ಕರ್ಮಪ್ರಹಾರಿಗುರುದೇವ ನಮೋ ನಮಸ್ತೇ ॥೨೦॥

||ಚಂದ್ರಲೇಖಾ ವೃತ್ತಂ||

ನಿತ್ಯಾನಂದಂ ಮನೋತೀತಾತರ್ಕ್ಯ ಲೀಲಾಪ್ರಮೇಯಂ ।
ಪ್ರತ್ಯಕ್ಷಜ್ಯೋತಿರಾಕಾರಂ ಭೂತಕಾರುಣ್ಯ ಶೀಲಂ ॥
ಸತ್ಯಾಲಾಪಂ ಚಿದೈಶ್ವರ್ಯಂ ಭಕ್ತಕಷ್ಟಾಂಧಕಾರಾ ।
ದಿತ್ಯಂ ಸರ್ವಾರ್ಥದಂ ನೀನೆಂದೊಲ್ದು ಸಂಕೀರ್ತಿಸುತ್ತುಂ ॥೨೧॥

ಮ|| ವಿ॥ ವೃ||

ಮುಡುಪಂ ಸಲ್ಲಿಸಿ ಲೋಕರುದ್ರತತಿಯಂ ಸಂತುಷ್ಟಿಯಂಗೆಯ್ಸಿಪೆಂ ।
ಪೊಡೆಯಲ್ಪಟ್ಟರಿಸುತ್ತೆ ತೊಟ್ಟಲದೊಳಾತ್ಮೋದ್ಭೂತನಂ ಜೋಗುಳಂ ॥
ನಡೆಪಾಡುತ್ತೆ ವಿತರ್ದಿಯಂತಿಕದೊಳಂ ನೇತಾಡುವೊಳ್ತೊಟ್ಟಲಂ ।
ಬಿಡಗಿಂ ಕಟ್ಟಿ ನಿಜಾಲಯಕ್ಕೆ ಗುರುವಂಕೊಂಡಾಡುತುಂ ಸಾಗಿದಳ್ ॥೨೨॥

ಭೂಲಲನಾಮಣಿಯಾಸ್ಯ ।
ಜ್ವಲದ್ವಿನೂತನಸುರಮ್ಯದರ್ಪಣಮೆನೆ ಕ ॥
ಣ್ಗೋಲಮನಮರ್ಚುತಿರ್ಕುಂ ।
ವಿಲಾಸದಿಂ "ಗಾಡಗೊಳ್ಳಿ"ನಾಮದ ಕಾಲೂರ್ ॥೨೩॥

ಶಾ|| ವಿ|| ವೃ||

ಅಲ್ಲಿರ್ಪಂ ಮರಿಗೌಡನಾತ್ಮಸುದತೀ ಬಾಳಮ್ಮಗಂ ವಂಶಮಂ ।
ಪ್ರೋಲ್ಲಾಸಂಮಿಗೆವರ್ಧನಂಗೊಳಿಪ ಸತ್ಪುತ್ರೋದಯಂ ನಿಲ್ತಿರಲ್ ॥
ನಲ್ಲಂಬಂಜೆಯ ಕೂಟಕಾಟಮೆನುತುಂ ರೋಡಾಡುವಂಗೇಹದೊ ।
ಳ್ನಿಲ್ಲಲ್ಬಾರದನಿತ್ತು ಪೀಡಿಸಿದಪಂತಾನೆಂದಪಳ್ತಾಪದಿಂ ॥೨೪॥

ಚಂ|| ಮಾ|| ವೃ||

ತಿಳಿವೊಡೆಸಗ್ಗಕಗ್ಗಳಮೆನಿಪ್ಪ ತವರ್ಮನೆ *"ಸೂರಪೌರ"ಕಂ ।
ಗಳಿಲನೆಸಾರ್ದುಮುತ್ತಿದನುತಾಪದ ಪಾವಕನಿಂಕರಂಗಿತಾ ॥

* ಸೂರಕೋಡ ।

ನಳವಳಿದಿರ್ಪ ದುಸ್ಥಿತಿಯನಂದುರೆ ಮಾತೆಯೊರಲ್ದು ಕೇಳ್ದಿದ ।
ಳ್ಬೆಳಗಿನಚಂದ್ರನಂತೆ ಮೊಗಗುಂದಿದ ಕಾರಣಮೇನದೆಂದವಳ್ ॥೨೫॥

ತನಯನನೆತ್ತಿಯಾಡಿಸಿದ ಕೈಮರಗ್ಗೈ ಪರಿತರ್ಪ ಕಂದನಂ ।
ಮನಮೊಸೆದೊಲ್ದು ವೀಕ್ಷಿಸದ ಕಣ್ಣದು ಪೀಲಿಯಕಣ್ಣುಭಾವಿಸಲ್ ॥
ತನುಭವರಿಲ್ಲದಿರ್ಪ ಮನೆ ಸುಮ್ಮನೆ ಗರ್ಭವನಾನದಿರ್ಪತ ।
ದ್ವನಿತೆಯಪಿಂಡ ನೀರರೆತ ಹೊಂಡಮೆನುತ್ತಿನಸಾಳವಾಡುವಂ ॥೨೬॥

ಕೂತೊಡೆ ಹಿತಮಿಲ್ಲಂನಾ ।
ನೋತುಜ್ಜುಗಮೆಸಗೆ ಮುನಿಸಿನಿಂ ಪೆಸರಿಡುವಂ ॥
ಪ್ರೀತಿಯ ಮಾತೋಂದಾಡಂ ।
ಸಾತಿಶಯಂ ಬೇನೆಬೇಸರಿಕೆಗಳನರಿಯಂ ॥೨೭॥

ಶ್ವಾಪದಕಿಂದತಿಪೀಡಿಸು ।
ತೇಪ್ರೊಳ್ತುಂ ದುಡಿಸಿಕೊಳ್ಳುವಂ ಬೇಸರಿದಾಂ ॥
ತಾಪಂಗಳೆಯಲ್ಕೂತೊಡೆ ।
ಕೋಪದಿನವನೆಳೆದುಸೆಳೆದು ಜಡಿವಂಬಡಿವಂ ॥೨೮॥

ಪಲವಾತುಗಳಿಂದೇಂಫಲ ।
ಮೆಲೆಜನನಿ ನಿಪುತ್ರಿಕೆಗುಪಮಾನಂ ನೋಡಲ್ ॥
ನೆಲದೊಳಳೆ ಪೆರತಿಲ್ಲಂ ।
ಕುಲಘಾತಕಿಯೆಂದು ಸುಯ್ದು ಬಸಿರೊತ್ತೊರೆದಳ್ ॥೨೯॥

ನಿಜಮಿರ್ಕುಂ ಲೋಕದೊಳಾ ।
ತ್ಮಜರಳ್ತಿ ಸಮಸ್ತ ಸುರನರೋರಗ ಪಕ್ಷಿ ॥
ವ್ರಜಕಿರ್ಪುದು ಪ್ರಕೃತಿಗುಣಂ ।
ರಜನಿಪಮುಖಿಯೆಂದು ಮತ್ತಮಿರದಿಂತೆಂದಳ್ ॥೩೦॥

ಇದಕುಮ್ಮಳಮೇಕೆಲೆ ವಿಧು ।
ವದನೆ ತ್ವದಿಷ್ಟಾರ್ಥಮೇನೊದಗದಿರ್ದಪುದೇ ॥
ಸದಯಂ ಶಿವಗುದ್ರಾಜಾ ।
ರ್ಯ ದಿವಿಜಮಣಿಯೊಂದು ಸಾರ್ದುಮೆರೆಯಲ್ಕೆರೆಯೊಳ್
॥೩೧॥

ಮ॥ ವಿ॥ ವೃ॥

ಅಸಮಂವಂಶಗುರೂತ್ತಮಂಗೆ ಮುಡುಪಂ ಕೇಳ್ಕಟ್ಟ ನೀನಿಟ್ಟು ಪೂ।
ಜಿಸುತುಂಪಂಚಕ ದರ್ಶ ಪೀಠದಮಹಾ ಸಂದರ್ಶನಂಗೊಂಡು ಸಂ॥
ತಸದಿಂಕಾಣ್ಕೆಯನಿತ್ತು ಬರ್ಪೆನೆನುತುಂ ನೀಂ ಬೇಳ್ಪುದುಂ ಭಾವದ।
ಲ್ಲಿಸುತಂ ಪುಟ್ಟುವನೆಂದು ಮಾತೆಯೊರೆಯಲ್ಕಂತಾಗಲವಳ್ಮಾಡಿದಳ್ ॥೩೨॥

ಶಾ॥ ವಿ॥ ವೃ॥

ಮುಂದೊಂದಬ್ದದೆ ಪಚ್ಚೆಪಿಂಗಿ ಸುಖರೂಪಂ ಪುತ್ರನಂಬೆತ್ತುಸಾ।
ನಂದಂಕರ್ತನ ಪೀಠಕೇಳ್ತೆರುತೆ ಸಾಷ್ಟಾಂಗಪ್ರಣಾಮಂಗಳಿಂ॥
ಮುಂದಿಟ್ಟಾತ್ಮಜ ರತ್ನಮಂ ತವಕೃಪಾ ಪೂರ್ಣತ್ವದಿಂದಿಷ್ಟಮೇ।
ಸಂದಿತ್ತೆಂದುರೆಮೀಸಲಿಟ್ಟ ಮುಡಿಪಂ ತತ್ಕರ್ತಗಿತ್ತೆಯ್ದಿದಳ್ ॥೩೩॥

ಬೆಡಗಿಂ ನೆರೆಯಲ್ಲೊಪ್ಪುವ।
ಮಡಿವಾಳರ ವಂಶವಲ್ಲಿ "ತಿಪ್ಪಮನೆಂ"ಬ॥
ಕಡುಜಾಣೆಯರ್ದಳಿನನಿಂ।
ದೊಡಗೊಂಡನುವಿಂದೆ ಮದಗೊಣಕಿಯೆಂಬೂರೊಳ್ ॥೩೪॥

ಮಂ॥ ಕ್ರಾಂ॥ ವೃ॥

ತನುಭವಗಗ್ರಗಳ್ಪದನದೊಳ್ಪುಟವೇಳ್ದೊಡಮೂಡಿ ಕೌರುಕೀ।
ವಿನ ಪೊನಲಿಟ್ಟು ಮೇಲ್ವರಿದು ನಲ್ಲುಣಿಪಿಂಗವಕಾಶಮಿಲ್ಲದೊಲ್॥
ದಿನದಿನದೊಳ್ಪ್ರವರ್ಧಿಸುಗುಮೆಂದಳವಾರ್ದು ಪಲುಂಬಿಸುಯ್ದು ದು।
ಮ್ಮನಮೆಡೆಗೊಂಡು ಚಿಂತಿಸದರಾ ಜನನೀ ಜನಕರ್ಕಳಾತ್ಮದೊಳ್ ॥೩೫॥

ಘನವೈದ್ಯರರಿದು ಸಾಹಸ।
ಮನೊಡರ್ಚಿದೊಡಂ ಗುಣಮಣಮೊಗೆಯದಿರಲ್ತ॥
ಜ್ಜನನಿಕಡುನೊಂದು ಬಗೆಯೊ।
ಳ್ತನುಜಂ ಜೀವಿಸನೆನುತ್ತೆ ಭೋರ್ಗರೆದಳ್ತಳ್ ॥೩೬॥

ಚಿಂತಾಪರವಶತೆಯಿನಾ।
ಕಾಂತಾಮಣಿಬಳಲಿತೊಳಲಿ ಗುರುಮೂರ್ತಿಯನೇ॥
ಕಾಂತದೆ ನೆನೆದೊರಗಿರ್ದನಿ।
ಶಾಂತದೊಳೇವೇಳ್ವಿನವಳ ಭಕ್ತ್ಯತಿಶಯಮಂ ॥೩೭॥

ಉ|| ಮಾ|| ವೃ||

ಶ್ರೀಶಿವರುದ್ರಯೋಗಿ ಧರಣೀಧರದಗ್ರದೊಳಿರ್ದುಕಾಣ್ದೆ ಸಂ |
ಕ್ಲೇಶಮಿದೇಕೆ ತಂಗಿಬಿಡು ಕೊಳ್ಳು ಶಿವಾಕ್ಷಿಯನೊಂದನೆಂದುಮಾ ||
ವೇಶದೊಳಿತ್ತವೊಲ್ಮಿಸುಗೆ ಸ್ವಪ್ನದೆ ವೈಪ್ನವಿರೇಳ್ದು ಜುಮ್ಮೆನ |
ಲ್ಕಾಕಶಿವಕ್ತ್ರೆಯೆಳ್ಚರಿದು ದೇಶಿಕ ಲೀಲೆಯನೆಯ್ದೆ ಪೇಳ್ದಿದಳ್ ||೩೮||

|| ಪ್ರಮಿತಾಕ್ಷರವೃತ್ತಂ ||

ಇನನೊಲ್ದುಲಾಲಿಸಿ ಮಹಾದ್ಭುತಮಂ |
ಮನದೊಳ್ಮುದಂದಳೆದವಂ ಸತಿನೀ ||
ನನುಮಾನಮಂಬಿಡು ಮಹಾಗುರುವ |
ರ್ಯನ ಸತ್ಕೃಪಾಕ್ಷರುಚಿಪೂರ್ಣಮಿರಲ್ ||೩೯||

|| ದ್ರುತಪದವೃತ್ತಂ ||

ಭವಗದಂ ಪರಿಗುಮೆಂದೆನೆ ಸಾಮಾ |
ನ್ಯವಿದನಳ್ಗಿಸುವದೇನರಿದಲ್ತು ||
ಸ್ತವನಮಂ ಮರೆಯದಿರ್ಮನದೊಳ್ಸ |
ತ್ಕವರನಾಮಯಮುಣಂಗುವದೆನ್ನಲ್ ||೪೦||

ಉ|| ಮಾ|| ವೃ||

ಶ್ರೀಶಿವರುದ್ರಯೋಗಿ ಸದನುಗ್ರಹದಿಂದೊಗೆದಿರ್ಪನೀತನಂ |
ನಾಶಿಪ ಪಾಲಿಪಗ್ಗಳಿಕೆ ತದ್ಗುರುವರ್ಯಗೆ ಸಂದುದೆಂದವಳ್ ||
ಕ್ಲೇಶಮನೊತ್ತಿ ನಂಬಿ ಮನದೊಳ್ಗುರು ಚಿಂತನೆಯೊಳ್ಮಳಿಂಗಿರ |
ಲ್ನಾಶಮ ನಾಂತುದಲ್ಪದಿನದೊಳ್ಗುರು ಸತ್ಕೃಪೆಗಾವುದಗ್ಗಳಂ ||೪೧||

ಇರ್ಪುವಭೀಕರ ಮರ್ದುಗ |
ಳಾರ್ಪಂನಾಣ್ಗೆಡಿಸಿದ ತನುಭವನಾಮಯಮಂ ||
ನೇರ್ಪಡಿಸಿದ ಗುರುವಂ ನೆನೆ |
ದರ್ಪಿಸಿ ಮುಡಿಪಂ ತನೂಜನಿಂ ಸುಖಮಿರ್ಪಳ್ ||೪೨||

ಕಂಗಳ್ನೋಡುಗೆ ಹಸ್ತಾ |
ಬ್ಜಂಗಳ್ಪೂಜಿಸುಗೆ ಜಿಹ್ವೆಕೀರ್ತಿಸುಗೆಂದುಂ ||

ಪಿಂಗದೆನೆಮ್ಮಿರ್ಕೆ ಮನಂ ।
ಮಂಗಲಭವದೀಯಮೂರ್ತಿಯಂ ಶಿವರುದ್ರ ॥೪೩॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ಸಪ್ತ
ದಶಾಶ್ವಾಸಂ
—ಸಮಾಪ್ತಂ—

---

॥ ಓಂಭವರೋಗವೈದ್ಯಾಯನಮಃ ॥

## ಅಷ್ಟಾದಶಾಶ್ವಾಸಂ.



ಗ್ರಹಕಂಟಕಮಂ ಘಟಿಸಿ ।
ದರ್ಗಹಿವೇಣಿ ಭಯಪ್ರಸೂತಿ ಗಂಡಾಂತರಮಂ ॥
ದಹಿಸಿ ಪೊರೆದಂವಿನೂತನ ।
ಮಹಿ ರುದ್ರಂಚಿತ್ಸಮುದ್ರನಾಶಿವರುದ್ರಂ ॥೧॥

ಶಾ॥ ವಿ॥ ವೃ॥

ನುತ್ಯಂ ಚೆನ್ನವಿಶಿಷ್ಟದಿವ್ಯಚರಿತಂ ಚಿದ್ರಾಗದಾವಿರ್ಭವಂ ।
ನಿತ್ಯಾನ್ನಪ್ರದ ವತ್ಸಲಂ ವಿಚಲಿತಂವೈಚಾರಿಕಂ ಕೃಚ್ಛ್ರರಾ ॥
ಹಿತ್ಯಂಕರ್ಮವಿರುದ್ಧಪದ್ಮಚರಣಂ ಧುರ್ಯಂಪ್ರಶಾಂತಂ ಸದಾ ।
ದಾತಾರಂನುತಮೌನಿವೃಂದ ಹಿತನಾವಂ ನೀನೆ ರಾಗಾಸ್ಪದ ॥೨॥

ಕಲ್ಲನಗೌಡರೆನಿಪ್ಪವ ।
ರುಲ್ಲಸಿತಾನ್ವಯದೊಳೀರವಿಪುರಾಂತರದೊಳ್ ॥
ಪ್ರೋಲ್ಲಾಸದಿಂ ಬೆರಸು ನಿಜ ।
ವಲ್ಲಭೆಯಿಂಶಿವನಗೌಡನೆಂಬವನಿರ್ದಂ ॥೩॥

# ಚಕ್ರಬಂಧಂ-ಶಿವಸ್ತುತಿಃ



ಮ॥ ಖ॥ ವೃ॥

ಮಗನೋರ್ವಂ ತನಗಿಲ್ಲದಿರ್ಕೆನಿರುಪಾಯಂಗೊಂಡವಂ ತನ್ನ ಪ ।
ತ್ತುಗೆಯಾ"ಡೋಣಿ"ಯೆನಿಪ್ಪ ಖೇಟಕದ ತಲ್ಲಿಂಗಾಖ್ಯನೆಂಬಾತನಂ ॥
ಮಿಗೆಜಾಮಾತನನೊಪ್ಪಿಕೊಂಡಿರಲಿವಂಗೇಕಾತ್ಮಜಂ ಪುಟ್ಟಲಾ ।
ತಗೆಬಾಲಗ್ರಹಮಂಟೆ ಕರ್ಮವಶದಿಂ ನಿಶ್ಚೇಷ್ಟನಾಗಿರ್ದಪಂ ॥೪॥

ಪಡೆದಳ್ತೊೀಳ್ವಣಸುತನಂ ।
ತೊಡೆಯೆಡೆಯೊಳ್ಕೊಂಡು ತುಳ್ಕಿಕಂಬನಿಕಣ್ಣೊಳ್ ॥
ಹಡೆದೊಡಲಂಬರಿಕೆಯ್ದಿರ ।
ದಡಗಿದೆಯಕಟಕಟ ಘೋರಮೃತ್ಯುವಿನೊಡಲೊಳ್ ॥೫॥

ಎಲ್ಲಿಗೆ ಪೋದಪೆಯಾರೊಡ ।
ನೆಲ್ಲಿರ್ದಪೆ ನಲ್ಲುಣಿಸಿಗೆಳಸಿ ಬರೆನೀಂ ನಾನೇಂ ॥

ಕಲ್ಲೆರ್ದೆ ತೋರ್ದಳೆನುತ್ತುಂ ।
ಸೊಲ್ಲಿಸದಿರ್ಪೆಯೊ ವಿಕೋಪದಿಂ ಪೇಳ್ಮಗನೇ ॥೬॥

ಧೂಳಾಟಕೋರಗೆಯವ ।
ರ್ಪಾಳಿಯಿನೇಳ್ತಂದಿರೆ ಕರೆಯಲ್ಕವಸರದಿಂ ॥
ಪೇಳೆಲೆಗ್ರಹದುಪಟಳಮಂ ।
ತಾಳದೆ ಮೃತಿಯಾಂತನೆಂಬೆನೇ ಹಡದೊಡಲೇ ॥೭॥

ಸ್ರ॥ ಗ್ಧ॥ ವೃ॥

ಇಂತೆಂದಾಕ್ರಂದನಂ ಮಾಡುತಳವಳಿದು ಬೊಬ್ಬಿಟ್ಟುಬಾಯಾರ್ದು ಚೀರು ।
ತ್ತುಂತುಂಡಂ ಮೋದಿಕೊಳ್ಳುತ್ತೆ ಮತಿಯುಡಿಗಿ ಹೌಹಾರ್ದುಬೆಂಧಾತ್ಮಜಂತಾ॥
ನಂತಂಗೊಳ್ಳುತ್ತಿರಲ್ಕಾಂ ಬಮುಕುವದಿದಯೋಗ್ಯಂಧರಾಮಂಡಲಕ್ಕ ।
ತ್ಯಂತಂಭಾರಂ ದಲೆಂಪಾವನಿತೆ ರಭಸದಿಂಪ್ರಾಣಮಂಸೀಗುವಾಗಳ್ ॥೮॥

॥ ಮ॥ ಸ್ರ॥ ವೃ ॥

ಕವಿದಾಪ್ತೇಷ್ಟರ್ಕರಂ ಸಂತಮಿರಿಸುತಿರಲೋರ್ವಳ್ವರಾಜೀರ್ಣಕಾಯ ।
ಳ್ವವದಿಂದೇಳ್ತಂದು ಪೇಳ್ದಳ್ತರುಣಿ ಬಿಡುಬಿಡೌ ತಾನಿದೇಂತಕ್ಕುದೇಕೇಳ್ ॥
ಶಿವರುದ್ರಾಚಾರ್ಯ ಪಾದಾಂಬುಜಕಿರದೆ ಶರಣ್ಬೊಕ್ಕೊಡಾತಂ ತ್ವದಿಷ್ಟಾ ।
ರ್ಥವನಿತ್ತಾತ್ಮ ಪ್ರಭೂತಂಗೆ ದಯದೊಳಸುವಂಕೊಟ್ಟಪಂ ತಂಗಿನಂಬೌ ॥೯॥

ಒರೆದೊರೆಯನದೋರ್ವಳ್ಕೇ ।
ಳ್ದುರಿದೇಳ್ದು ಗುರುಗಿರು ಶಕ್ತಿಯೇನೆಸಗುವದೌ ॥
ಬರಿಯೆಗ್ಗತನಮಿದೆಂದಿರ ।
ದೊರೆವಳ್ಮಾತ್ಸರ್ಯವನ್ನಿ ಪುಟದುಜ್ವಲಿಸಲ್ ॥೧೦॥

॥ ಸ್ರ॥ ಗ್ಧ॥ ವೃ ॥

ರೋಡಾಡಲ್ತನ್ನವೋಲಿರ್ಪಸುರೆಯರೊಡನೇಸೆಂದಪೆಂ ಶೀರ್ಷಮಂ ತೂ ।
ಗಾಡುತ್ತುಂಘೂರ್ಣಿಸುತ್ತುಂಗದಕೆದೊರೆವುಗುಂಮುರ್ಮದುರ್ವೃತ್ತ್ಯವಂತಾ॥
ನೀಡಾಡುತ್ತಿರ್ಪಮರ್ದುಂಟೆ ಜಗದೊಳೆನುತುಂ ಕಂಡವೋಲಾಡಿದರ್ಕಾ ।
ಪಾಡಲ್ಬಿದ್ದೇಶಿಕಂ ಕರ್ತನೆನಿಪುದನದೇಂ ಬಲ್ಲರಾ ದುಷ್ಟೆಯರ್ಕಳ್ ॥೧೧॥

ಬಂಡಂ ಸಂತತಮೀಂಟುವ ।
ಮಂಡೂಕಂ ಬಲ್ಲುದೆ ಚಿನಿವಾಲ್ಸವಿಸೊಗಮಂ ॥

ಚಂಡಗುರುಲೀಲೆಯನಿಳಾ ।
ಮಂಡಲದೊಳ್ದಿಂಡೆಯರ್ಕಳೇನರಿದಪರೇ ॥೧೨॥

ಮ॥ ಸ್ರ॥ ವೃ॥

ಶಿವಗುದ್ಯತ್ಕೋಪದಿಂ ಮಣ್ಣೆರಚಿದೊಡದುತಾಂ ತನ್ನಕಣ್ಣೊಳ್ಮಗುಳ್ದಂ ।
ಜವದಿಂ ಬೀಳ್ವಂತೆ ಭ್ರಾಜತ್ಪರಮ ಗುರುಮಹಾಸಿಂದೆಯೆಂತೆಂಬ ಧೂಳಂ ॥
ತವೆಕಣ್ಣೊಳ್ಮತ್ತಿ ಕಂಗಾಣದಿರೆ ತಿಳಿದೊಡಂ ಸಾಣ್ಣದೇತೇನತೇನಂ ।
ಭುವಿಯೊಳ್ಮಾಳ್ಪರ್ಗೆ ದುರ್ನಾರಕಗತಿಯಿರಲಿಂತಪ್ಪ ದುಷ್ಟಾತ್ಮನೀಚರ್ ॥೧೩॥

ಮ॥ ವಿ॥ ವೃ॥

ಅರಿಯಲ್ಕೊರ್ಬಿದ ಗ್ರಾಮದೇವಿ ಮಹಿಷಂಸ್ವಚ್ಛಂದದಿಂ ಸರ್ವದಾ ।
ತಿರುಗುತ್ತಿರ್ಪೊಲು ಬೀಗಿಸಂಚರಿಸುತುಂ ಕುಗ್ರಾಮದೊಳ್ನಿರ್ನೆರಂ ॥
ಪುರುಡಿಂ ಘಲ್ಲಣೆಯಗ್ಗಿಯಂ ಪುಟಿಸಿ ದುರ್ವ್ಯಾಪಾರದಿಂಗೂಡಿ ಸ್ವೋ ।
ದರಮಂಸಾಗಿಪ ಕುಂಡಗೋಳಕಚಯಂತಳ್ತಿರ್ಕುಮೇನೆಂದಪೆಂ ॥೧೪॥

ಗುರುದೇವತಾಳಿಯಂ ಸ ।
ತ್ಪುರುಷರ್ಕಳನೇಡಿಸುತ್ತೆ ರಚಿಸಿರ್ಬಣಮಂ ॥
ದುರಹಂಕೃತಿಯಿಂ ಪೊಳಲೊ ।
ಳ್ಮೆರೆವರ್ದುಷ್ಟರ್ಗೆ ಪಾಪಮೇಂ ಪುಣ್ಯಮದೇಂ ॥೧೫॥

ಶಾ॥ ವಿ॥ ವೃ॥

ನ್ಯಾಯಾನ್ಯಾಯಗಳಂ ವಿಚಾರಸಮತಾ ಮರ್ಯಾದೆಯಂ ಮೀರದಂ ।
ತೀಯಲ್ಕಾರದೆ ದೊಡ್ಡಿತರ್ಕಳಮುಖಂ ನೋಡುತ್ತೆಕಾರ್ಪಣ್ಯರ ॥
ಬಾಯಂ ಡೊಕ್ಕರಿಸೆಯ್ದೆ ನಿರ್ಣಯಿಸುವಕ್ಕೈಯಾಶೆಯಂಗೊಂಡು ದು ॥
ರ್ಹೇಯಾತ್ಮರ್ಕಳದೇನೊಡರ್ಚದಿಹರೋ ಕುಗ್ರಾಮ ದುಷ್ಕೀಟಕರ್ ॥೧೬॥

ಸ್ವಹಿತಮದಿಲ್ಲನ್ಯರ್ಕಳ ।
ಸುಹಿತಂ ಮೊದಲಿಲ್ಲಮುಭಯಮುಂ ಸದೆದಿಕ್ಕು ॥
ತ್ತಹಿತವನೆಸಗುವ ನರನಂ
ಮಹಿಯೊಳ್ಗೆಯ್ದನವನೆಂತಜಂರಕ್ಕಸನಂ ॥೧೭॥

॥ ಚಂ॥ ಪಾ॥ ವೃ ॥

ಬಗೆಯೆಪರಂಪರಾಗತ ತದೀಯಬೃಹನ್ಮಠ ಶಿಷ್ಯಕೋಟಿಯಿಂ ।
ದಗಲದಿವರ್ಗಳಿರ್ದೊಡಮವರ್ಗಳ ದೇಶಿಕಭಾವಭಕ್ತಿಯಂ ॥

ತಗುಳ್ಚಿವಿಭೇದಭಾವನೆಯ ನೊಂದಿಸಿನೊಂದಿಸಿದತ್ತು ದುಷ್ಟಜೀ ।
ವಿಗಳುಪದೇಶ ದುರ್ವಿಷಮದೇಂ ಪಿರಿದೋ ಪರಿಣಾಮಕಾರಿಯೋ ॥೧೮॥

ಖರಕರನ ಕಿರಣಗಳ್ಖರ ।
ಕರನಂತೊರೆದಿರ್ಕುಮೆ ಗುರುಶಿಷ್ಯರೆನಿಪ್ಪೊಂ ॥
ದುರುಸಂಬಂಧವನುರ್ಚ ।
ಲ್ಕರಿದನ್ಯರ್ಗೆಂದು ಬಗೆದುಭಾವಿಸುತಾಗಳ್ ॥೧೯॥

ಉ॥ ಮಾ॥ ವೃ॥

ಪೂರ್ವದೊಳೆಯ್ದೆಪೇಳ್ದ ಸುವಿನೀತೆಯನೀತಿಯೆ ರಾಜಮಾರ್ಗಮೆಂ ।
ದುರ್ವೃತೆಭಕ್ತಿವಾರ್ಧಿ ಪರಿಸೂಸಿಪಳಂಚೆ ಹೃದಂತರಾಳದೊಳ್ ॥
ಶರ್ವಪರಾವತಾರಿ ಶಿವರುದ್ರ ಮಹಾಶಿವಯೋಗಿನೀನೆ ಮೇ ।
ಣೋರ್ವರುಮಿಲ್ಲಮಪ್ರತಿಮ ಶಕ್ತಿಯುತಂ ಬರ್ದುಕಲ್ತನೂಭವಂ ॥೨೦॥

ಭವದೀಯ ಭೂತಿತೀರ್ಥಂ ।
ಭುವಿಯೊಳ್ಮರ್ದೆಂದು ತೀರ್ಥಯುತಭೂತಿಯನು ॥
ತ್ಸವದಿಂತೊಡೆವುದು ಪಸುಳಂ ।
ಜವದಿಂ ನಿದ್ರೆತಿಳಿದೇಳ್ದವೋಳೇಳ್ದಿರ್ದಂ ॥೨೧॥

ಶ॥ ವಿ॥ ವೃ॥

ಪಶ್ಚಾತ್ತಾಪಸದಗ್ನಿಯಿಂ ಪರಿಶುದ್ಧಾತ್ಮರ್ಕಳಾಗುತ್ತೆತಾ ।
ನಾಶ್ಚರ್ಯಂ ಗುರುಲೀಲೆಯೆಂದು ಮನದೊಳ್ನಾನಾವಿಧಂ ಪಾಡುತುಂ ॥
ದುಶ್ಚಿತ್ತರ್ಕಳ ಬೋಧ ದರ್ವಿಷಮನಾಂತಿರ್ಪೆಮ್ಮ ಹೃದ್ದೋಷಮಂ ।
ನಿಶ್ಚಿಂತಂಮಿಗಿಲೊಕ್ಕಲಿಕ್ಕಿದಯದಿಂ ಕಾಪಾಡಿದಯ್ದೇಶಿಕ ॥೨೨॥

॥ ತರಳವೃತ್ತಂ ॥

ಅಣುಗನಿಂದೊಡಗೂಡಿ ಗಾಡಿಯಿನೆಯ್ದಿ ಕರ್ತನಪೀಠಕಂ ।
ಮಣಿದುಪುಟ್ಟಪಪಾಲಿಪಳ್ಗಿಪ ಧಾತ್ರುಮಾಧವರುದ್ರರ ॥
ಗುಣಗಳಂ ತಳೆದುರ್ವಿಯೊಳ್ಸಕಲಾತ್ಮರಂಬಿಡದೋವಗಾ ।
ರ್ತೊಣೆಗುರೂತ್ತಮಗೆಂದುಪಾಡಿತಳರ್ದಳಾತ್ಮನಿವಾಸಕಂ ॥೨೩॥

ನೆರೆಯೊಳೊಪ್ಪುವ ಕೊಂಗವಾಡಮೆನಿಪ್ಪಗ್ರಾಮದೊಳಲ್ಲಿ ಸ ।
ಚ್ಚರಿತೆ"ತಾಯಮ್ಮ"ನೆಂಬವಳ್ಗೆ ಪ್ರಸೂತಿಬಂಧನಮಾಗಿರಲ್ ॥

ನೆರೆದವರ್ಬಹುಯತ್ನಮಂ ರಚಿಸಲ್ಕೆ ನಿಷ್ಫಲವಾಗೆ ದು ।
ರ್ನಿರಣವಂ ತಳೆವಳ್ಬದುರ್ಣಂಕಳೆನುತ್ತೆನೊಂದು ಪಲುಂಬಿವರ್ ॥೨೪॥

ಪೆಣ್ಬಟ್ಟುವದತಿಕಷ್ಟಂ
ಮೇಣ್ಬಟ್ಟದೊಡಂ ಪತಿಯನುಸರಣೆಯೊಳಿರ್ದುಂ ॥
ನಣ್ಪಿಂಬಾಳ್ವುದುಕಷ್ಟಂ ।
ಪೆಣ್ಪಡೆವರ್ಕಳ ಬದುಕದು ತಾನತಿಕಷ್ಟಂ ॥೨೫॥

ಸ॥ ಗ್ಧ॥ ವೃ॥

ಇಂತೆಂದಾಕ್ರಂದನಂ ಮಾಳ್ಪವಸರದೊಳದೋರ್ವರ್ಗಳ್ಗೆ ಮೈಯುರ್ಬಿ ಭ್ರಾಂತಿ ।
ಸ್ವಾಂತಂತಾನೇಕಿದೇಂ ತಕ್ಕುದೆತರುಣಿಬಿಡಾ ಚಿಂತಿತಾರ್ಥಪ್ರದಂದು ॥
ಶ್ಚಿಂತಾರಣ್ಯಾನಲಂ ಸದ್ಗುರು ನೆರೆಯೊಳಿರಲ್ಕೊಂಕಿ ಕಾಳ್ಗಲ್ಗೆತಾನೊ ।
ಲ್ದಂತಿರ್ಕುಂ ತೀರ್ಥಮಂ ಸತ್ವರದೊಳಿರದೆನೀಂತಂದು ಪೀಸೆಂದುಪೇಳಲ್
॥೨೬॥

ಚಂ॥ ಪಾ॥ ವೃ॥

ನೃಡಗುರುಮೂರ್ತಿತಾನೆ ಕರುಣಾದ್ರ್ರದೊಳೆಯ್ದಿವಳಂತರಂಗದಿಂ ।
ನುಡಿಸಿದನೆಂದು ಸಂತಸಮನಂತರದೊಳ್ತಳೆದಂಬುವಂ ನಿಜಂ ॥
ಪಡೆದವಳೀಂಟಿಸಲ್ಕೆಸುಮನೋಜ್ಞತನೂಜತನೂಜೆಯುಂ ಮುದಂ ।
ಬಡೆಸುಖರೂಪದಿಂ ಪಡೆದಳಚ್ಚರಿಯೆಂದೆನಲಾಕ್ಷಣಾರ್ಧದೋಳ್ ॥೨೭॥

ತನುಜಗೆ ಪರಮೇಶಂ ತ ।
ತ್ತನುಜೆಗೆ ಪಾರ್ವತಿಸಮಾಖ್ಯೆಯಿಂ ಮುದಮೊದವಲ್ ॥
ವನಿತಾಮಣಿಯರ್ಕರೆದ ।
ರ್ಘನದೇಶಿಕಲೀಲೆಯನಭಿವರ್ಣಿಸಲಳವೇ ॥೨೮॥

॥ ಚಾಮರವೃತ್ತಂ ॥

ಕೊಂಗವಾಡದಲ್ಲಿ ಕೋಟಲಿಂಗಸಾಭಿಧಾನಿ ತ ।
ನ್ನಂಗಿ ಚೆನ್ನಮಾಂಬೆಯೆಂಬ ಪತ್ನಿ ಗೂಡಿರಾಜಿಸಲ್ ॥
ತುಂಗಭೂತಮೊಂದು ಸಾರ್ದವಳ್ಗೆ ಸೂತಿಗಟ್ಟಸಾ ।
ವಿಂಗಡರ್ಪದಾದೆನೆಂದಳಲ್ದು ರೋದಿಸುತ್ತಿರಲ್ ॥೨೯॥

ಚಂ॥ ಮಾ॥ ವೃ ॥

ದಿವಸಗಳೆಂಟು ಜಾರಿದೊಡಮುಂ ಪ್ರಸವಕ್ಕೆಡೆಯಿಲ್ಲಮದ್ಭುತಂ ।
ಬವಣೆಯನಳ್ಗಿಸೋಡಿಪ ಸುಮಾಂತ್ರಿಕರಿಲ್ಲವೆ ವ್ಯರ್ಥಮಾತ್ಮಸಂ ॥
ಭವೆಯಸುವಂಕವರ್ದುದು ಪಿಶಾಚಮದೇಂಗತಿಯೆಂದು ನೋಯುತಿ ।
ರ್ಪವಸರದಲ್ಲಿಯೋರ್ವಸತಿಬಂದು ಪೆಸರ್ವಿಡಿದೆಯ್ದೆ ಕರ್ತನಾ ॥೩೦॥

ಭೂತಿವಿಮಿಶ್ರಿತ ತೀರ್ಥವ ।
ನೋತೊಲವಿಂಪೀಯೆ ಭೀತಿಯಿಂದರಚುತ್ತುಂ ॥
ಭೂತಂ ಪೆರಸಾರ್ದುದು ತನು ।
ಜಾತನನವಳೆಡರಡಸದೆ ಸೊಗದಿಂ ಪೆತ್ತಳ್ ॥೩೧॥

ಸುಜ್ಞಾನಮಯಗುರುವೆ ನೀ ।
ನಜ್ಞಾನಾವೃತ ಭವತ್ಸುತರಿಗಂ ಕೃಪೆಯಿಂ ॥
ಪ್ರಜ್ಞೆಯನಿತ್ತೋವಿದೆ ಸ
ರ್ವಜ್ಞಶಿಖಾಮಣಿಯುಪಕೃತಿ ತೀರ್ಚಿಸಲಳವೇ ॥೩೨॥

ಮನುಕಲೆ ದೈವತಕಲೆ ಪಾ ।
ವನತೀರ್ಥಕ್ಷೇತ್ರ ಕಲೆ ವಿಬುಧರ್ತಾನಿಲ್ಲೆಂ ॥
ದೆನೆ ಕಲಿಯೊಳ್ಪುಸಿ ಪೊರ್ದುಗು ।
ಮನಘಂ ನೀನಿರೆ ಕಲಿಹರಣಂ ಗುರುವರ್ಯ ॥೩೩॥

ನಿಟಲೇಕ್ಷಣ ಶಂಭು ಜಟಾ ।
ಪಟಲದಿನಿಳಿದು ಸುರವಾಹಿನೀ ನಿನ್ನಡಿಯುಂ ॥
ಗುಟದೊಳ್ನೆಲಸಿಹಳಲ್ಲಿಹ ।
ಪಟುರಜಮಂತಳೆವಪೇಕ್ಷೆಯಿಂ ಗುರುವರ್ಯ ॥೩೪॥

ಈವಿಧದಿಂ ಕೊಂಡಾಡಿ ಧ ।
ರಾವಲಯೋದ್ಧಾರಕುದಯಿಸಿದ ಸಾಕ್ಷಾದಂ ॥
ಬಾವರನೆಂದು ವಿತರ್ದಿಗೆ ।
ಭಾವಕಿ ಮಣಿದಾತ್ಮಮಂದಿರಕ್ಕೇಳ್ತಂದಳ್ ॥೩೫॥

ಸಟೆಯ್ಯೈಹಿರಿಗೃಹ ಸಂಪ ।
ತ್ಸಟೆಜಾಯಾ ಪುತ್ರಮಿತ್ರರಾಪ್ತೇಷ್ಟರ್ಕಳ್ ॥

ಸಟೆಯೊಡಲೈಂದ್ರಿಕಜಾಲಂ ।
ದಿಟಮೊಂದೆ ಭವತ್ಪದಾಂಬುಜಂ ಶಿವರುದ್ರ ॥೩೬॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳಷ್ಟಾ
ದಶಾಶ್ವಾಸಂ
—ಸಮಾಪ್ತಂ.—

---

॥ ಓಂ ಭಕ್ತಕಲ್ಪದ್ರುಮಾಯ ನಮಃ ॥

## ಏಕೋನವಿಂಶತ್ಯಾಶ್ವಾಸಂ.



ದುರ್ಭೂತೋಪದ್ರವದಿಂ ।
ದರ್ಭಕನಡಿಯಿಂಗಿ ಪಿಂಗಿ ಪೋಗಿರೆ ಕರುಣಾ ॥
ವಿರ್ಭಾವದೊಳವಗಡಿಯಂ ।
ನಿರ್ಭವನಿತ್ತು ನಿಜಭಕ್ತನಂ ಪಾಲಿಸಿದಂ ॥೧॥

॥ ವಿಷಮಾಂತರ್ಲಾಪಿ ॥
॥ ಚಿತ್ರಪದವೃತ್ತಂ ॥

ಮುಕ್ತರಮಾರ್ಗದೊಳಿಪ್ಪವನಾ ।
ಮುರ್ಕ್ತರನಳ್ಕದೆ ನಿಂದಿಪನಾರ್ ॥
ಶಕ್ತಿಸುಯುಕ್ತನ ಸೇವಕನಾ ।
"ಭರ್ಕ್ತ" "ವಿಮೂಢ" "ರಮಾರಮಣಂ" ॥೨॥

ಈ ವಿಷಮ ಸಮಸ್ಯಾಂತರ್ಲಾಪಿಯ ಕೊನೆಯ ಚರಣಕ್ಕೆ ಮೇಲಿನ ಮೂರು ಚರಣಗಳ ಅರ್ಥ ಸಮನ್ವಯ ಮಾಡಿಕೊಳ್ಳಿರಿ.

ಮ॥ ವಿ॥ ವೃ॥

ರವಿಪೌರಾಂತರದಲ್ಲಿಯಲ್ಲಿರದೆ ನಾನಾಸಾಬನೆಂಬಾತ್ಮ ಸಂ ।
ಭವನಿಂತಳ್ತು "ಹುಸೇನಸಾಬ" ನೆನಿಪಂ ಕಾರ್ಪಣ್ಯ ಕೌಟುಂಬಿಕಂ ॥
ಸುವಿಲಾಸಂ ನಿಜ ಬಾಳ್ಕೆಯಂ ಜರಗಿಸಲ್ಕಿಪ್ಕಾರಣಂ ತತ್ತ್ರನೂ ।
ಭವಗಂದೊರ್ಮೆಗೆ ಕಾಲ್ಗಲಿಂಗಿರಲದೇನೆಂಬೆಂಮಹಾದುಃಖದಿಂ ॥೩॥

॥ ಚಂ॥ ಮಾ॥ ವೃ ॥

ಧನಮಿನಿಸಿಲ್ಲ ಮನ್ಯರ ಸದಾಶ್ರಯಮಿಲ್ಲ ದರಿದ್ರನೆಂದು ಮಾ ।
ರನುವರಿದಾಶ್ರಯಂಗುಡುವರಿಲ್ಲ ವಿನಮ್ರದಿನೆಯ್ದಿ ಯಾಚಿಸಲ್ ॥
ಮನಮೊಸೆದೀವರಿಲ್ಲ ಸದುದಾರಿಗಳಿಲ್ಲ ಸುಮಿತ್ರರಿಲ್ಲ ಮ ।
ತ್ತನುಭವನಿಂಗಣಂ ಗುಣಮದಿಲ್ಲ ನಿರಾಶ್ರಿತನುರ್ವಿಭಾರಕಂ ॥೪॥

ಮ॥ ವಿ॥ ವೃ॥

ಮುಡಿವಂ ಸತ್ಯಕೆ ಮಿಥ್ಯಕಾರ್ದು ಜಡಿವಂ ಮೈವೆರ್ಚಿನಿಂ ಸಂತತಂ ।
ದುಡಿವಂ ಸರ್ವರೊಳೊಂದಿಯೊಳ್ಪನುಡಿವಂ ದುರ್ನೀತಿಯಂ ಮೆಟ್ಟಿತಾ ॥
ನುಡಿವಂ ಧರ್ಮಸು ಪಕ್ಷಮೊಂದೆಪಿಡಿವಂ ದಾರಿದ್ರ್ಯದುರ್ಜೀವಿಯೆಂ ।
ದೊಡಮೆಂತಿರ್ದೊಡಮೇನೊ ಮೌನಿದಿರುವರ್ಮಾತಾಡಿಸರ್ಮಾನಿಸರ್ ॥೫॥

ಕಡುಬಡವನೆಳವುಗಳ್ಬಿಡ ।
ದಡಿಗಡಿಗೊಗೆದೇಳ್ದು ಮೇಣವುಗಳಿರ್ದೆಡೆಯೊಳ್ ॥
ತಡವಿಲ್ಲದೆ ಮುರುಟಳಿಗುಂ ।
ಬೆಡಗಾಂತವಿನೂತ್ನಬಾಲವಿಧವಾಸ್ತನದೊಲ್ ॥೬॥

ಧರೆಯೊಳ್ಧನವಂತಗೆ ಕೇ
ಳ್ಪರರೆಲ್ಲರ್ತನ್ನವರೆನಿಪರ್ಕಡುಬಡವಂ ॥
ಗರಿಯಲ್ತನ್ನವರೆಲ್ಲ ।
ರ್ಪೆರರಪ್ಪರ್ಬಡತನಕ್ಕೆ ನಿಬ್ಬೆರಗಾದೆಂ ॥೭॥

ಕುಲಶೀಲರೂಪು ವಿದ್ಯಾ ।
ಬಲವುಳ್ಳ ವರಂಗೆ ಕನ್ನೆಯಂ ನೀಡುವವೊಲ್ ॥
ನೆಲದೊಳ್ವಿಧಾತನೆನಗೀ ।
ಚೆಲುವೆತ್ತೊಪ್ಪುವ ದರಿದ್ರಕನ್ನೆಯನಿತ್ತಂ ॥೮॥

ಮುಪ್ಪುರಮಮಂ ದಪ್ಪಕನಂ ।
ನಿಪ್ಪೌಸತೆನೆ ಕಪ್ಪುಗೊರಳನಪ್ಪಂ ಸೀದಂ ॥
ತಪ್ಪದೊಡಲನಪ್ಪಿಯಳಿಸು ।
ತಿಪ್ಪ ಕಡುಬಡತನದಗ್ಗಿಯಂ ತಪ್ಪಿಸರಾರ್ ॥೯॥

ಜಗದೊಳ್ನಾನಾವಿಧ ನಂ ।
ಜಿಗೆಮುರ್ದುದೊರೆಗುಮರಣ್ಯಮಧ್ಯಾಂತರದೊಳ್ ॥
ಬಗೆಯಲನುದಿನಂ ನವೆಯಿ ।
ಪ್ಪಗಾಧ ದಾರಿದ್ರ್ಯವಿಷಕೆ ನಿಷ್ಕೃತಿಯಿಲ್ಲಂ ॥೧೦॥

ಮೃತಿಯಂಭೀಕರದಾರಿ ।
ದ್ರ್ಯತೆಯಂ ಸರಿಯೆಂದೊಡನ್ಯತಮಕ್ಕುಂ ನೋಡಲ್ ॥
ಮೃತಿದುಃಖಂಕ್ಷಣಮಾತ್ರಂ ।
ಮೃತಿವರೆಗಿರ್ಪೀ ಬಡತನದಿಂ ಮೃತಿಹಿತದಂ ॥೧೧॥

ನೋಂಪಿಯನೆಸಗಿದೊಡಂಧನ ।
ಸಂಪನ್ನಗದೋರ್ವನೆಳೆಯನುದಯಿಸದಿರ್ಪಂ ॥
ನೋಂಪಿಯನೆಸಗದೊಡಂ ಬಡ ।
ವಂ ಪಡೆವಂಚೆಲ್ವ ಚಿಣ್ಣರಂ ವಿಧಿಚಿತ್ರಂ ॥೧೨॥

ಮ॥ ವಿ॥ ವೃ॥

ಪಲವಾರ್ಮಕ್ಕಳನೊಂದಿ ಸಂಸರಣಮಂ ನಾನೋರ್ವನೇ ಸಾಗಿಸ ।
ಲ್ಬಲಮಿಲ್ಲಂಗತಿಯಿಲ್ಲಮೋದನಕಣಂ ಕಟ್ಟುಗ್ರಸಂತಾಪದಿಂ ॥
ದಲೆಯುತ್ತಿರ್ಪದರೊಳ್ಕುಮಾರನಡಿಗಳ್ಕಟ್ಟಾಂತುಪೋಗಲ್ಕೆಮು ।
ನ್ನೆಲೆಯೇನೆಂದವನಳ್ಕಿಬಳ್ಕಿಬೆಗಡಿಂ ರೋಡಾಡಿದಂ ಭೋಗಮಂ ॥೧೩॥

ಇಂತಳವಳಿದಂತರದೊ ।
ಳ್ಚಿಂತಿಸಿ ಯವನಂ ಗರವೊಡೆದಂತಿರೆ ಭರದಿಂ ॥
ಶಾಂತೋಪಾಯವನೊಂದವ ।
ನಂತರಿಸದೆ ನೆನೆದನಾತ್ಮಗುರುಕೃಪೆಯೊದಗಲ್ ॥೧೪॥

ಮ|| ವಿ|| ವೃ||

ಪಣವೊಂದಿಲ್ಲದಿರಲ್ಗುಣದ್ರವಿಣಮೇಂ ತಾನಿಲ್ಲವೇ ಭಕ್ತಸ |
ದ್ಗುಣ ವಿತ್ತಕ್ಕೊಲಿವಂ ಗುರುಪ್ರಭುವರಂ ತತ್ಪ್ರೀತಕಂ ಭಕ್ತಿಯಿಂ ||
ಮಣಿದಾಂ ಬೇಳ್ಪಪೆನಿಷ್ಟಮಂ ಕರುಣಿಪಂ ದೀನರ್ಕಳಾಪ್ತಂನಿಜಂ |
ತ್ರಿಣಯ ಶ್ರೀಗುರುಚಕ್ರವರ್ತಿ ಪೊರೆಯಲ್ತಕ್ಕಂ ಪೆರರ್ತಕ್ಕರೇ ||೧೫||

ಚಂ|| ಮಾ|| ವೃ||

ಎನುತವನೆಯ್ದಿ ಪೀಠಕೆ ದರಿದ್ರತೆಯಿರ್ದೊಡೆಯಿರ್ಕೆಮತ್ತನೂ |
ಜನಡಿಗಳಿಂಗಿ ಸಂಸರಣಮಾರ್ಗಮೆ ಬಂಧಕಮಾಂತು ದತ್ತಣಿಂ ||
ಕನಿಕರದಿಂ ಭವಚ್ಚರಣಕಾಂ ಮರೆವೊಕ್ಕೆ ವಿಭಾಡಿಸೆಂದು ಸ |
ದ್ವಿನಯವನಪ್ಪುಗೆಯ್ದು ಪೊಡಮಟ್ಟರದೇಳ್ದುಸಿರಿಟ್ಟು ಬೇಡಿದಂ ||೧೬||

ಸ|| ಗ್ಧ|| ವೃ||

ಸರ್ವಾಂತರ್ಯಾಮಿ ನೀಂ ನೀನರಿಯದ ವಿಷಯಂ ತಾನದೇನಿರ್ಕುಮೇ ದ್ಯಾ|
ವೋರ್ವೀ ಭಾಗಾಂತರಾಳಂಗಳೊಳಗರಿಯೆ ಹೊತ್ತಾರೆ ಮತ್ಪುತ್ರನಂ ಕೇಳ್ ||
ನಿರ್ವೇಗಂ ಮೀಯ್ಸಿ ತ್ವತ್ಪ್ರೀತಕೆ ಕಳಿಸಿದಪೆಂ ನಿತ್ಯಮುಂ ಕಾಲ್ಗಳಾರ್ಪಂ |
ನಿರ್ವಿಘ್ನಂ ಗೊಟ್ಟು ಕಾಪಾಡುವದೆನುತುರೆ ಸಂಕಲ್ಪಮಂ ಮಾಡುತಾಗಳ್
||೧೭||

ಕತಿಪಯ ದಿನಮಂತೆಸಗಿಸೆ |
ಸುತನಿಂಗಿಯಣಂಗಿ ಪೋದ ಕಾಲ್ಗಳ್ಕೊನರ್ದುಂ ||
ದ್ರುತದಿಂದೆಯ್ದುದುವೆನೆ ನಿ |
ಶ್ಚಿತಮ್ಮೆತಂದುವುಪಡೆದರಿಗಚ್ಚರಿಯಾಗಲ್ ||೧೮||

ಜ್ಯೋತಿರ್ಮಯಪರವಸ್ತುಗೆ |
ಖ್ಯಾತೋತ್ಕೃಷ್ಟೋಪಮಾನಮಿತ್ತಪರೊಳರೇ ||
ಜ್ಯೋತಿರ್ಮಯ ಭವದೀಯ ವಿ |
ಭೂತಿಗೆ ಸಾಮ್ಯತ್ವಮುಂಟೆ ವಿಶ್ವಂಭರೆಯೊಳ್ ||೧೯||

ಜಡಮಾದ ತಿದಿಯುಸಿರ್ಬಡಿ |
ದೊಡೆ ಲೋಹಂ ಗರಗುವದೆನೆ ಪರಶಿವಮನುವಿಂ ||
ದೊಡವೆರೆದ ದೇಶಿಕನುಸಿ |
ರ್ಬಡಿದೊಡೆ ಕರ್ಮೇಂಧನಾಳಿ ಚುರ್ಚುವುದರಿದೇ ||೨೦||

ಚಂ॥ ಮಾ॥ ವೃ॥

ಪ್ರಚಲಿತಸರ್ವಧರ್ಮ ಕುಲಪಂಥಿಗಳೆಯ್ದಿಪೊದಲ್ದ ಭಕ್ತಿಯಿಂ ।
ಶುಚಿಮಿಗೆಪಾಡಿ ಕಾಮಿತಫಲಂಗಳನೊಂದಿ ಕಡಂಗಿ ಪೋಗುವರ್ ॥
ವಚಿಯಿಸೆ ಲೋಕದಲ್ಲಿ "ವಸುಧೈವಕುಟುಂಬಕ"ನೆಂಬ ಸೂಕ್ತಿತಾ ।
ನುಚಿತಮದಿರ್ಕು ಜಾತಿಕುಲಗೋತ್ರ ವಿಭಿನ್ನತೆಯುಂಟೆ ಸತ್ಯರೊಳ್ ॥೨೧॥

ಎಂದುಕೃತಜ್ಞತೆಯಿಂಸಾ ।
ನಂದಂಮಿಗೆಪಾಡಿ ಮಣಿದು ಸೆರಗಿನೊಳೆಂದುಂ ॥
ಕಂದದಕುಂದದ ಕುಂದಣ ।
ದಂದದ ಚಿಜ್ಜ್ಯೋತಿಭೂತಿದಳೆದೇಳ್ತಂದಂ ॥೨೨॥

ಚಂ॥ ವ॥ ವೃ॥

ಹರಮನುವಿಂದೆ ದಿವ್ಯಭಗಮಂಭಗಮಂ ನಿಜಶಕ್ತಿಯಿಂದೆಭಾ ।
ಸುರಭಗದಿಂದೆ ಶೈವಭಗಮಂಭಗಮಂ ಶಿವಯೋಗಶೀಲದಿಂ ॥
ವರಶಮದಿಂದೆ ಚಂದ್ರರುಚಿಯಂರುಚಿಯಂ ಸುವಿರಾಗತೇಜದಿಂ ।
ನೆರೆಜಯಿಸಿರ್ದನಂಬುದ ಸಮಾವೃತ ಭಾನುವಿನಂತೆ ಗೌಪ್ಯದಿಂ ॥೨೩॥

ಇರೆಯೊರ್ಮೆಕೊಂಗವಾಡದೊ ।
ಳುರುದೀನತ್ರಾಣಿಮಾನಿರಾರಾಜಿಸಿದಂ ॥
ಗುರುಹಸ್ತಸಂಭವಂಭಾ ।
ಸುರಕವಿತಾಕೌಶಲಂ ಹಿರಿಯಗೌಡಾಖ್ಯಂ ॥೨೪॥

॥ ಚಾಮರವೃತ್ತಂ ॥

ಭಕ್ತಿಬೀಜದಂತೆಯೊಪ್ಪುತಿರ್ಪ ನಾರಿಕೇಳ್ಗಳಂ ।
ಭಕ್ತವರ್ಯ ದೇಶಿಕೇಂದ್ರನಂಘ್ರಿನೀರಜಾತದೊಳ್ ॥
ರಕ್ತಿಯಿಂ ಸಮರ್ಪಿಸುತ್ತೆಲಿಂಗಪೂಜೆಗೋಸ್ಕರಾ ।
ಸಕ್ತಿಯಿಂತಳರ್ವುದೆಂದು ಬಾಗಿಬಿನ್ನಹಂಗುಡಲ್ ॥೨೫॥

ಚಂ॥ ಮಾ॥ ವೃ॥

ತದಮಲಭಕ್ತರೆಂದೊಡಮದೀತಗೆ ನಚ್ಚಿನಪುತ್ರರಂತೆ ಸೊಂ ।
ಪೊದವಿದತಂದೆಯೆಂದೊಡಮುವರ್ಗಿವನೋರ್ವನೆಯಾಗಿಪೂರ್ವದಿಂ ॥

ದಿದುವರೆಗಂ ಪರಸ್ಪರಮಭಿನ್ನಪವಿತ್ರಮನಸ್ಸಿನಿಂದಲಿ ।
ರ್ಪುದನರಿಯಲ್ಮರುಳ್ಗೊಳಿಸಿದೀರ್ವರೊಳಿಲ್ಲ ಪಿತಂಸುತರ್ಕಳಾರ್ ॥ ೨೬॥

ಪರಿಕಿಸಿನೋಡನೆಂದು ಕುಲಮಂಛಲಮಂಬಲಮಂ ಸುಜಾತಿ...ಮಂ ।
ಕರಮೆ ವಿಜಾತಿಯಂ ಜನನಮಂ ಘನಮಂ ಧನಮಂ ವ...ಚಿಸುವೈ ॥
ಖರಿಯನಮಂದಸಂದಕಲೆಯಂ ಕಲೆಯಂ ನೆಲೆಯ... ಮನೋಜ ಸಂ ।
ದರತನುವಂ ವಿಶಾಲಸಿರಿಯಂ ಪರಿಯಂ ಪಿರಿ...ಮಂ ದಲೆಂಬುದಂ ॥೨೭॥

ವಾಸನೆಯಳಿಯದೆ ...ಂಭಿಕ ।
ನೋಸರಿಸದೆಪ್ಪ...ಲ್ಪಭಕ್ತಿ ಕಾಸಿನಲೋಭಂ ॥
ಸಾಸಿರಲ...ಭವನಳಿದೋ ।
...ಸುದಿನಂಗೆಯ್ದೊಡೇನೊ ವ್ಯರ್ಥಮನರ್ಥಂ ॥೨೮॥

ಪಂಚಮ ಪುರುಷಾರ್ಥಂ ನಿ ।
ಶ್ಚಂಚಲ ನಿಜಭಕ್ತಿಯೆಂದು ದೊರೆವಡೆದುದ್ಯ ॥
ತ್ಪ್ರಾಂಚದ್ಭಕ್ತನಭಕ್ತಿಗೆ ।
ಪಂಚತ್ವಹರಗುರುವೊಪ್ಪಿಬಿಜಯಂಗೆಯ್ದಂ ॥೨೯॥

॥ ಮಂದಾಕ್ರಾಂತವೃತ್ತಂ ॥

ಆಗಳ್ಭಕ್ತರ್ಕಳವಸರದಿಂದೆಮ್ಮ ಪ್ರಾಗ್ದಿವ್ಯಪುಣ್ಯಂ ।
ಸಾಗೇಳ್ತಂದತ್ತು ಗುರುಪರಿಜಂದಾಳ್ದು ಸಂಸಾರ ತಾಪಂ ॥
ನೀಗಲ್ತಾಂ ಘೂರ್ಮಿಸುತೆ ಕರುಣಾನಿರ್ಜರಂಸೂಸಿಬಂದ ।
ತ್ತೀಗಳ್ತಾನೆಂದು ಶಿವಭಜನಾಮೇಳದಿಂವಾದ್ಯದಿಂ ॥೩೦॥

ಚಂ॥ ಮಾ॥ ವೃ॥

ಸುರಭಿಯನೆಯ್ದೆ ತರ್ಪ ಹರಿಯಂತೆ ಸುಧರ್ಮವನೊಲ್ದು ತರ್ಪ ಭಾ ।
ಸುರವರದಾನದಂತೆ ಸುಖಮಂತರುತಿರ್ಪ ಸುಪುಣ್ಯದಂತೆ ಶಂ ॥
ಕರನೊಲವಂಸಮಂತು ತರುತಿರ್ಪ ಮಹಾಶಿವಯೋಗದಂತೆ ಸ ।
ದ್ಗುರುವರನಂಸಮಸ್ತರೆದುರ್ಗೊಂಡುರೆತಾಂ ಕರೆತಂದರಳ್ತಿಯಿಂ ॥೩೧॥

॥ ಪಂಚಚಾಮರವೃತ್ತಂ ॥

ಶಿವಾತ್ಮಲಿಂಗಪೂಜೆಗೆಯ್ದು ತನ್ಮಹಾ ಪ್ರಸಾದಮಂ ।
ಶಿವಾತ್ಮಭಾವದಿಂ ಪೊದಳ್ದುಕೊಂಡು ಮಂಡಿಸಿರ್ಪುದುಂ ॥

ಶಿವಾಧವಾವತಾರ ದೇಶಿಕೇಂದ್ರತೇನತೇನಮ ।
ನ್ನಿವೇಶಕೆಯ್ದಿ ಭಕ್ತನಂ ಸಮಂತು ರಕ್ಷಿಸೆಂದೆನಲ್ ॥೩೨॥

ಸುವಿಚಾರಿಸೆ ತನುವಿದು ವಿ ।
ಶ್ವ ವಲಯದೊಳ್ಮಗುಳ್ದು ದುರ್ಲಭಂ ಸಿಕ್ಕದೆನು ॥
ತ್ತವಿಕಲ ಲಿಂಗಾಜ್ಞೆವಿಡಿದು ।
ಭವಿಷ್ಯಮಂಸೂಚಿಸಿ ನಿಜಮತಕೇಳ್ತಂದಂ ॥೩೩॥

ಒರ್ಮೆಗೆತಾನಿಂತೊರೆಯು ।
ಲ್ಮರ್ಮವಿದೇನೆಂದು ಭಕ್ತಮಂಡಳಿ ಘನದೊಳ್ ॥
ಧರ್ಮಪ್ರದಸುರುವಚಮಂ ।
ನಿರ್ಮಲಿನರ್ಬಲ್ಲವೊಲ್ಸನಾಲೋಚಿಸಿದರ್ ॥೩೪॥

ಗುರುವೊರೆದ ಭವಿಷ್ಯವನಿರ ।
ದರಿಯಲ್ತವಕದೊಳವರ್ಗಳಿರ್ದರ್ಪತಿಯಂ ॥
ತೊರೆದಿನಿಯಳಂತೆ ನಿರ್ಗತಿ ।
ಕರಾಗಿ ಪೊಳಲೊಳ್ಸಮಸ್ತ ಭಕ್ತಮಹೇಶರ್ ॥೩೫॥

§ ಸಪ್ತ ವಿಭಕ್ತಿ ಭಕ್ತಿಯುತಕಂದ §

ಗುರುವು ಹರರೂಪನೆಂದು ।
ಗುರುವಂ ಮೊರೆವೊಕ್ಕು ಜ್ಞಾನಮಂ ಗುರುವಿಂದಂ ॥
ದೊರಕಿಸಿ ಗುರುವಿಗೆ ಬಾಗುತೆ ।
ಗುರವಿನಕೃಪೆಯಿಂದೆ ಗುರುವಿನೊಳೆ ಬೆರೆದಿರ್ಕುಂ ॥೩೬॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳೇಕೋ
ನವಿಂಶತ್ಯಾಶ್ವಾಸಂ
—ಸಮಾಪ್ತಂ—

॥ ಓಂದಕ್ಷಿಣಾಮೂರ್ತಯೇನಮಃ ॥

## ವಿಂಶತ್ಯಾಶ್ವಾಸಂ.



ಮನುರಾಟ್ಪಂಚಾಕ್ಷರಮನು ।
ನೆನಹಿಂಬರ್ಪುವೆಡೆವಟ್ಟೆಯೊಳ್ನಿಜಗುರು ದ ॥
ರ್ಶನಮಿತ್ತೊರೆದೊರೆಗಿವನೊರೆ ।
ದ ನುಡಿಯನಾನಿಲ್ಲಿ ಸಂಗ್ರಹಿಸಿ ಬಿತ್ತರಿಪೆಂ ॥೧॥

"ರವಿಪೌರಂ"ಕೈಲಾಸಂ ।
ಶಿವಗಣರಲ್ಲಿಪ್ಪರೊಂದಿ "ರುದ್ರಾಣಿಯೆ"ಶಾಂ॥
ಭವಿ "ಬಸವಾರ್ಯರ್ಂ"ಗಿರಿಶಂ ।
"ಶಿವರುದ್ರಂ"ಪ್ರಣಮವಾಗೆ ರಂಜಿಸಿತಿಳೆಯೊಳ್ ॥೨॥

॥ ಡವಣೆ ॥

ಪರಮ ಕೈವಲ್ಯಾಂಗನಾಸ್ಯಮಣಿ ಮುಕುರಂ ಸುವಿಶಾಲಭಕ್ತಿ ಚಿ ।
ದ್ವಿರತಿ ಸೌಭಾಗ್ಯಾಕರಂ ಜನನಾರ್ತಿ ದುರ್ಮೃತಿ ಸಮಿದ್ಧನಂಜಯಂ ॥
ದುರಿತ ಭೂಭೃದ್ವಜ್ರಮೂರ್ಜಿತಸರ್ವಕಾಮ್ಯದುದಯಂ ಸುಖಾಸ್ಪದಂ ।
ಗಿರಿಶಮಂತ್ರಾರ್ಥೋಪದೇಶವನೆಸಗುತಿರ್ಪ ರಹಸ್ಯಮಂದಿರಂ ॥೩॥

॥ ಮ॥ ಸ್ರ॥ ವೃ ॥

ಪತಿತರ್ಸಂದರ್ಶನಂ ಬೊಕ್ಕೊಡನೆ ದುರಿತ ದುರ್ಭಾವಮಂ ತಳ್ಳಿಸತ್ಪೋ ।
ನ್ನತ ಸಂಭಾವ್ಯರ್ಕಳಂ ಮಾಳ್ಪಮಹಿತ ಮಹಿಮಾ ಪೂರ್ಣಪುಣ್ಯಪ್ರದೇಶಂ ॥
ಕ್ಷಿತಿಗಂ ತಾನೆಂಬವೊಲ್ಪೇರ್ಮೆಯಿನೆಸೆವ ಲಸದ್ರೇಣುಕಾಚಾರ್ಯ ಶಾಖಾ ।
ಗತ ಪೂಜ್ಯಶ್ರೀ ಬೃಹಚ್ಛಾತ್ರದೊಳಭವ ಮಹಾಯೋಗ ಸಂಭೋಗನಿರ್ದಂ ॥೪॥

॥ ಚಂ॥ ಮಾ॥ ವೃ ॥

ಬಗೆಯೆ ದಿಗಂತರಾಳದೊಳನಂತ ವಿಧಾಭಿಧಮಾಂತನಂತ ನಿ ।
ಮ್ನಗೆಗಳನಾರತಂ ಪರಿದು ಸರ್ವಚರಾಚರ ಮಂಡಲಕ್ಕೆಸಂ ॥

ದಗಲದೆ ಪೆಂಪು ಸೊಂಪುಗಳನೂರ್ಜಿತ ಶಾಂತಿ ಸುಭಾಗ್ಯಸೌಖ್ಯಮಂ।
ಮಿಗಿಲೆನಲಿತ್ತು ವಾರಿನಿಧಿಯೊಳ್ಪೆರೆದೈಕ್ಯವನಾಂತು ರಾಜಿಪೊಲ್ ॥೫॥

ಮ॥ ಸ್ರ॥ ವೃ॥

ಗುರುಮಾರ್ಗಾಚಾರಮಂ ಬೋಧಿಸಿ ತದಮಲಗುರ್ವಾಶ್ರಮೋದ್ಧಾರಮಂಗೆ।
ಯ್ದುರೆ ದೀನರ್ಗಿಷ್ಟಮಂ ನೀಡಿ ಭಜಕ ಭವ ಸಂತಾಪಮಂ ಪೀದು ಚಿದ್ಭಾ॥
ಸುರಲಿಂಗಾಕಾರದಿಂ ಕಾಣ್ಬಲತನುಹರಸಾದೇಶಮಾದತ್ತೆನುತ್ತುಂ।
ಭರದಿಂತದ್ದೇಶಿಕಂ ಭಕ್ತತತಿನೆರೆಸಿದಂ ಕಾರ್ಯದುದ್ದೇಶದಿಂದಂ ॥೬॥

ಕಲ್ಲನಗೌಡ ಸಮಾಖ್ಯಂ।
ಬಲ್ಲಿದ ಗೂಳಪ ಸಮಾಹ್ವಯಂ ಸದ್ರುಸಿಕಂ॥
ತಲ್ಲಜ ಸಂಗನಗೌಡಂ।
ಸಲ್ಲುವ ಬಸವಾಭಿಧಾನಿ ಮುತ್ತಣ್ಣನವರ್ ॥೭॥

ಪಿರಿಯಂ ರಾಯಾಖ್ಯಂ ಬಾ।
ಬರ ಸುಬ್ಬಣ್ಣಂ ಧನಾಢ್ಯ ಮಾಗುಂಡಾಖ್ಯಂ॥
ಮೆರೆಯುವ ಲಿಂಗಪನೆಂಬಂ।
ಪುರಮುಖ್ಯರ್ಕೌತುಕ ಕೆರಳಲ್ಸತ್ವರದಿಂ ॥೮॥

ಉ॥ ಮಾ॥ ವೃ॥

ಸನ್ನಿಧಿಗೆಯ್ದಿಬಾಗಿ ಪೊಡಮಟ್ಟು ಪದಾಬ್ಜಕೆಭಕ್ತಿಭಾವದಿಂ।
ಬಾನ್ನವಿರಾವತಾರ ಗುರುದೇವ ಭವತ್ತನುಜಾತರೊಲ್ದು ಮಾ॥
ಳ್ಪುನ್ನತಕಜ್ಜದುಜ್ಜುವಣೆಯೇಂ ಬಿಡದೆಯ್ದೆ ನಿರೂಪಿಸೆಂದು ಸಂ।
ಪನ್ನ ಸಮಸ್ತ ಭಕ್ತತತಿ ಬಿನ್ನಯಿಸಲ್ಚರಣಾಬ್ಜ ಮೂಲದೊಳ್ ॥೯॥

ಚಂ॥ ಮಾ॥ ವೃ॥

ಹಸನರುಚಿಪ್ರಕಾಶಮೊಡಮೂಡೆ ಮುಖಾಬ್ಜದೊಳಾಜ್ಞೆಯಿತ್ತನೋ।
ಪಸುಳರೆ ಕೇಳಿರೀ ನರಶರೀರ ಬಿಸಿಲ್ದೊರೆಯಂತೆ ಮಿಂಚಿನೊಲ್॥
ಮುಸಿಕಿದ ಮಂಜಿನಂತೆ ನಸುಸ್ವಪ್ನದ ಭೋಗದಮಾಳ್ಕೆ ಗಾಳಿಗೊಂ।
ಡ ಸೊಡರಿನಂತೆ ಪೆಣ್ಪಿಗಪದಂತೆ ವಿಲಕ್ಷಣ ಮೇಣಶಾಶ್ವತಂ ॥೧೦॥

ಮ॥ ಸ್ರ॥ ವೃ॥

ಮರಣಂ ಮಾನವಜೀವನೋರ್ವಿರುಹದೊಳ್ಮಾಧುರ್ಯಮಂ ಬೀರ್ವಿದೊಂ।
ದು ರಸಂಗೊಂಡಿನಿವಣ್ಣು ಕರ್ಮಗತಿ ವಿಶ್ರಾಂತಿಸ್ಥಲಂ ದಿವ್ಯ ತ॥

ನ್ಮರಣಂಸತ್ವಪರೀಕ್ಷೆಗೆಯ್ದೆ ನಿಕಷಂ ತಲ್ಲಾಭಮಂ ಭಾವಿಸ।
ನ್ಮರಣಂಬೊಂದುನ ಪೂರ್ವದೊಳ್ಪಡೆದವಂ ಧನ್ಯಾತ್ಮನೀ ಲೋಕದೊಳ್ ॥೧೧॥

ಮ॥ ಸ್ರ॥ ವೃ॥

ಇಹಲೋಕಂ ಕರ್ತನೊಂದಚ್ಚರಿವೆರೆದ ಮಹಾಕುಮ್ಮಟೆಂಬಂತದಿರ್ಕುಂ।
ಮಹಿಯೊಳ್ತಾನಿಲ್ಲಿ ಸಲ್ಲುತಿಹನವನರಿಯಲ್ಕಲ್ಲಿಯುಂ ಸಲ್ಲುವಂಮೇ॥
ಣಿಹದೊಳ್ತಾಂಸಲ್ಲದಂ ಸಲ್ಲನವನಿಹ ಪರತ್ರಂಗಳೆಲ್ಲೆಲ್ಲಿಯುಂತ।
ಳ್ತಿಹನೀವೀಗಿಲ್ಲಿಯೇ ಸಲ್ಲಿ ಪರದೆ ಸಲುವಂತಿರ್ಪುದೆಂದೊಲ್ದು ಮತ್ತಂ ॥೧೨॥

ಮುಪ್ಪಿಂದೊಪ್ಪಳಿಯದ ಮು
ನ್ನೊಪ್ಪುವಲೋಕೋಪಕಾರ ಕೃತಿಗೊಡಲಂ ತಾ ॥
ನೊಪ್ಪಿಸೆಪುಟ್ಟಿನ ಸಫಲಂ।
ದಪ್ಪದೆಬರ್ಕುಂ ಮಹೇಶಕೃಪೆತನಗಕ್ಕುಂ ॥೧೩॥

ಮ॥ ಸ್ರ॥ ವೃ॥

ಬಹುಪುಣ್ಯೋದ್ಯದ್ಧನಂ ದೆತ್ತು ಮನುಜ ವಪುವಂ ಶೈಲಜಾಧೀಶನಿಂ ಪೊ।
ರ್ದಿಹೆವೀ ಭೂಲೋಕದೊಳ್ಭಾವಿಸೆ ಘನಬೆಲೆಯಂ ತೆತ್ತುಸಂಪ್ರೀತಿಯಿಂತಂ॥
ದಿಹ ಭದ್ರಾಂಗೋಕ್ಷನಂ ಕಜ್ಜದೊಳಿರಿಸುತೆ ತಲ್ಲಾಭಮಂಪೊರ್ದುವೊಲ್ಸಂ।
ದಿಹ ಸುಜ್ಞಾನಾಂಗದೀ ಲಾಭವನುಳಿದೊಡದೇಂ ಶ್ವಾಪದಕ್ಕಿಂ ಕನಿಷ್ಠಂ ॥೧೪॥

ಹರಿಯಜರಾಕಾಂಕ್ಷಿಪ ನರ।
ಶರೀರಮಿದು ಸಂಭವಿಸಿದ ಮಂಗಲದಿನದೊಳ್ ॥
ಹರಗುರು ಭಕ್ತಿಯನೆಸಗದೆ।
ಮಿರಗುವ ಮಿಂಚಳಿಯೆ ಮಗುಳ್ದು ಚಿಂತಿಸಿಫಲಮೇಂ ॥೧೫॥

ಮ॥ ಸ್ರ॥ ವೃ॥

ಅದರಿಂದೆಲ್ಲರ್ಭವದ್ಗ್ರಾಮ ವೃಷಭಲವಿಸನ್ಮೂರ್ತಿಭಿನ್ನತ್ವಮಂಗೊಂ।
ಡುದು ತದ್ಭಿನ್ನತ್ವಮೂಂತಿರ್ಪ ಪ್ರತಿಮೆ ವಿಧಿ ಪೂಜಾರ್ಹಮಲ್ತಲ್ತು ಕೇಳ್ಮಾ॥
ಡಿದೊಡಂ ಗ್ರಾಮಕ್ಕೆ ದುರ್ದೋಷಮಡಸುವದು ತದ್ದೋಷದಿಂದುಃಖದಾರಿ
ದ್ರ್ಯದಿನೆಂದೆಂದುಂ ಜನಂ ಬೆಂದು ತಳಮಳಸಿ ಸೌಜನ್ಯದಿಂ ದೂರರಪ್ಪರ್ ॥೧೬॥

ಜವದಿಂ ತನ್ಮೂರ್ತಿಯಂ ನೂತನ ಶಿಲೆಯ ಕಲಾಭಿಜ್ಞರಿಂ ನಿರ್ಮಿಸುತ್ತು ।
ತ್ಸವದಿಂ ಸಂಸ್ಥಾಪನಂ ಮಾಳ್ಪುದು ಪೊಳಲಮುಖಂಡರ್ಕಳೇ ನೀವಿರಲ್ಪೇ ॥
ರೆ ವಲಂ ಹೃತ್ಪೂರ್ವಕಂ ಗೆಯ್ವವರಿರುವರದಾರೀಗಳೇ ಸಂದ ತತ್ಕಾ ।
ರ್ಯವನಾತ್ಮಪ್ರೇಮದಿಂ ಪೂರಿಸುವದೆನುತೆ ಪೇಳ್ದಂ ಭವಿಷ್ಯೋಕ್ತಿಯಿಂದಂ
॥೧೭॥

ಗುರುಪೇಳ್ದಂತರ್ಯಭಾವಂ ವೃಷಭನನೆಲಸಲ್ಕೆಂದೊ ದೇವಾಧಿದೇವಂ ।
ಗಿರಿಶಂ ತಾನಿತ್ತ ಲಿಂಗೈಕ್ಯದವಧಿಯನದೇಂ ಸೂಚಿಸಲ್ಕೆಂದೊ ಸದ್ಭ ॥
ಕ್ತರ ಭಾವೋತ್ಸತ್ವಮಂ ಕಾಣಲೆನುತೊರೆದನೋ ಮೂಢರಿಂಗೆಂತುದೃಗ್ಗೋ ।
ಚರಮೆಂದಾದೇಶಮಂ ಮನ್ನಿಸಿತಳರ್ದರವರ್ಚಿಂತೆಯಿಂದಿತ್ತಲೀತಂ ॥೧೮॥

ಮನುವಂಚಿತ್ತಾಂತದೊಳ್ಬಾನಿಸುತೆ ಜಗದಜಂಜಾಟದೊಂದೆಳ್ಚರಂ ಮೀ ।
ರ್ದನಘಂನಿರ್ವ್ಯಾಕುಲಂ ನಿರ್ಮಲ ಹೃದಯಗತಜ್ಯೋತಿಯಂಕಾಣುತುಂ ಜು॥
ಮ್ಮೆನೆ ರೋಮಂಮೂಡಿನೆಟ್ಟಿಂತಿರೊಡಲೊಳೊಡೆದುತ್ಕಂಪನಂ ಪೊಣ್ಮೆ ನೈಜಾ ।
ಯನದೊಳ್ಸಾಸಂದದಿಂದೇಳ್ತರುತಿರೆ ಭವಭಂಗಂ ಮಹಾಲಿಂಗಸಂಗಂ ॥೧೯॥

ಚಂ॥ ಮಾ॥ ವೃ॥

ಮಗುಳ್ದಿರದೊರ್ಮೆಯಾತ್ಮಗುರು ಕೃತ್ರಿಮ ಚೋಹನುನಾಂತುಭೂತಿಯಿಂ ।
ದೃಗಸುಮನೋಜ್ಞ ದಿವ್ಯಶಿವಲಾಂಛನದಿಂಕರದಂಡಶೋಭೆಯಿಂ ॥
ದುಗುವಸುವರ್ಣ ರಂಜಿತಜಟಾಪಟಲ ಪ್ರಭೆಯಿಂ ಜರಾಂಗದಿಂ ।
ಬಗೆಯಲದೋರ್ವಮಾರ್ಗಿಗನಮಾಳ್ಕೆ ಜಲಕ್ಕನೆ ಕಣ್ಗೆಕಾಣ್ಬಿದಂ ॥೨೦॥

ಎಲೆಪಿಂದೆನಾನೊರೆದೊರೆಯ ।
ನಲಸದೆ ಸಾರ್ಥಂಗೊಳಿಸಿದೆ ನಿಜಮಾಯ್ತಿನ್ನೇಂ॥
ವಿಲಸಿತ ಲಿಂಗಮುಖದಿನವಿ ।
ಕಲಮೆನೆಭಕ್ತೇಷ್ಟಮೀವುದೊಲಿದೆಂದೆನ್ನಲ್ ॥೨೧॥

ಉ॥ ಮಾ॥ ವೃ ॥

ಏನಿದುಮಾವನೋ ಏನುತೆ ಪೌವ್ವನೆ ಪಾರಿಪೆಳರ್ದುಪಿಂದಿನೊ ।
ಳ್ಭಾನು ಸಮುಪ್ರಭಾಕಲಿತ ತದ್ಗುರುವಂ ನೆರೆಕಂಡು ಚೋದ್ಯಮಂ ॥
ಮಾನಸದಲ್ಲಿ ತಾಳ್ದಡಿಗೆ ಮೊಳ್ಗಿಕೃತಾರ್ಥತೆವೆತ್ತು ಪೇಳ್ದಿದಂ ।
ಭಾನುಭವಪ್ರಹಾರ ಭವದಾಜ್ಞೆಯನುತ್ತರಿಸಲ್ಸಮರ್ಥರಾರ್ ॥೨೨॥

ಆದೊಡವುಂ ಬಿನ್ನಯಿಸುವೆ ।
ನಾದಂ ಪಡಿವಾತಿದಲ್ತುಮದ್ಗುರುವರ್ಯ ॥
ಸಾದರದಿಂ ನೀನೊಡನುಡಿ ।
ಸಿದ್ಧಾಜ್ಞೆಯಿದು ಮಾಸದಂತ್ಯಕಾಂ ನಡೆತರ್ಪೆಂ ॥೨೩॥

ಎನೆಬಗೆಯೊಳ್ಮುದಮೊದವ ।
ಲ್ಕಿನುಗಿ ಮುಗುಳ್ನಡಗುವ ಮಿಂಚಿನೊಲ್ ನೈಗರೆದಂ ॥
ಮನದೊಳ್ಬಿಚ್ಚಂತಿರೆ ತ ।
ದ್ಧನಗುರುವಂ ನೆನೆಯುತೆ ನಿಜಮತಕೇಳ್ತಂದಂ ॥೨೪॥

ಚಂ॥ ವಾ॥ ವೃ॥

ಶಿವಮನುವಂ ಹೃದಂಬುರುಹದೊಳ್ನೆನೆಯುತ್ತೆ ರಹಸ್ಯದೊಳ್ಭವಿ ।
ಷ್ಯವನುರೆ ಸೂಚಿಸುತ್ತೆ ಶಿವನರ್ಚನೆಯೊಳ್ರಮಿಸುತ್ತೆ ಸರ್ವದಾ ॥
ಭವಹರಣಾತ್ಮ ದೇಶಿಕಗೆ ಬಿನ್ನಯಿಸಿರ್ದವಸಾನಕಾಲ ಸಂ ।
ಭವಿಸಿತೆನುತ್ತೆ ಚಿತ್ತಗುಹೆಯೊಳ್ಪಡಿಮೂಡೆ ಸುಮೌನವಾಂತಿದಂ ॥೨೫॥

ಮಃ ಸ್ರ॥ ವೃ॥

ನಸುದೇಹಾಲಸ್ಯಮಂದುದ್ಭವಿಸಿತೊರೆಯಲೇಂ ನಿರ್ನೆರಂ ಮೂತ್ರಬಾಧಾ ।
ವೆಸರಿಂ ಸಂತಾಪದೀ ವಾರ್ತೆಯನರಿದುರೆ ತದ್ಭಕ್ತಸಂತಾನಮೆಲ್ಲಂ ॥
ಬಸಿರಂಮೋದುತ್ತೆ ಬಾಯ್ಬಿಟ್ಟಳವಳಿದು ಭಿಷಗ್ವರ್ಯನಂ ತಮ್ಮೊಳಾಲೋ ।
ಚಿಸುತುಂ ರಾಚಣ್ಣಗೌಡಂ ಮೆರೆಯೆ ಕರೆಸಿದರ್ಕೊಂಗವಾಡಕ್ಕೆ ಶೀಘ್ರಂ ॥೨೬॥

ಗುರುಭಕ್ತಂ ವೈದ್ಯವಿದ್ಯಾಪರಿಣತನನಿಲೋದ್ವೇಗದಿಂದೆಯ್ದಿ ಕಾಣು ।
ತ್ತುರೆ ಮೂತ್ರಾಧ್ವಕ್ಕೆತೀಕ್ಷ್ಣಾಸ್ತ್ರಗಳಿನನಿತು ನಾನಾಪ್ರಯೋಗಂಗಳಿಂ ತ ।
ಳ್ತಿರೆ ತದ್ಧನ್ವಂತ್ರಿಯತ್ನಂ ರಚಿಸಿದೊಡಮಣಂ ತನ್ಮುಖಂಗಾಣದಿರ್ದ ।
ತ್ತರರೇ ನೋಡಲ್ಕೆ ಚೋದ್ಯಂಶರಧಿಯುಳಿಯಲೇಂ ಸಾಲ್ಗುಮೇ ವೇಣುದಂಡಂ ॥೨೭॥

ಮರಣಮುಖನೆತ್ತ ಭವದು ।
ರ್ಮರಣ ಹರಣನೆತ್ತ ಬಾಹ್ಯಜಡಹರನಾನೆ ॥
ತ್ತರಿಯಲ್ಕೊರಗೊಳಗಿಡಿಗಿದ ।
ದುರಿತಾಮಯ ಹರಣನೆತ್ತಮುಜಗಜಸಾಮ್ಯಂ ॥೨೮॥

|| ಹರಿಣೀವೃತ್ತಂ ||

ನೆಲದಮರೆಗಿರ್ಪುದ್ಯತ್ಸೌವರ್ಣದಂತೆ ರಹಸ್ಯದಿಂ ।
ನೆಲಸಿದ ಭವದ್ಭ್ರಾಜದ್ವೈರಾಗ್ಯಮಂ ಪೊಗಳಲ್ಕೆ ತಾಂ ॥
ಸುಲಭಮೆ ಮಹಾಮೋಹಾಲೀನಾತ್ಮನೆಂತರಿವಂ ಧರಾ ।
ವಲಯದೊಳದೇಂಬಲ್ಲಂ ಸೂರ್ಯಾಂಶುವಂ ವಿಗತಾಂಬಕಂ ॥೨೯॥

ಮ॥ ಸ್ರ॥ ವೃ॥

ಪೊರಚೋಹಂತೊಟ್ಟು ಭಕ್ತರ್ಕಳ ಧನಕೆಮನಂಗೊಟ್ಟುದುರ್ನೀತಿಯರ್ಥೋ।
ತ್ಕರಮಂ ಹೊಲ್ದಿಟ್ಟು ಕಣ್ಗಿಟ್ಟು ಪರಸತಿಗೆ ಕಣ್ಣಿಟ್ಟು ಜೋಲ್ದಿಟ್ಟು ಪೂರ್ವಾ ॥
ಚರಣಂಸೀದಿಟ್ಟು ನೀರ್ಬಿಟ್ಟು ಕದನಕೆಪಣಂ ದೊಟ್ಟು ದುಶ್ಶೀಲಕೆಂದುಂ ।
ನೆರೆಯಿಂಬಂಗೊಟ್ಟು ನಾಣ್ಗೆಟ್ಟು ಮೆರೆವವರಪಾಸ್ತಾಕ್ಷರೇ ಬುತ್ತಿಗಳ್ಳರ್॥೩೧॥

ಉ॥ ಮಾ॥ ವೃ॥

ಉಂಟೆ ಪ್ರಶಾಂತಿ ಕಾಂತಿ ಮಯರುಂಟೆ ವಿಶುದ್ಧ ವಿರಕ್ತಿಯಾಂತವ ।
ರ್ಗಂಟೆನೊಳುಂಟೆ ಜನಸಂಗದೊಳಿರ್ದದನೆಂದುಮಂಟದಾ ॥
ಬಂಟರದುಂಟೆ ಸರ್ವಸಮತಾಗುಣ ಮಂಡಿತರುಂಟೆ ಚಿದ್ರಮಾ ।
ಮಂಟಪದಲ್ಲಿಮಂಡಿಸಿದರುಂಟೆ ಭವತ್ಸದೃಶರ್ಧರಾಗ್ರದೊಳ್ ॥೩೧॥

ಮಹಿತಾಮಲೋರ್ಧ್ವರೇತಂ ।
ಮಹಿಯೊಳ್ನೀನೆಂದು ದಣ್ಣಿನೆದಣಿವೊಲ್ ॥
ವಿಹಿತ ಶ್ರೀಗುರುಪದವನ ।
ರುಹಕ್ಕೆ ಪೊಡಮಟ್ಟು ಮಂದಿರಕ್ಕೇಳ್ತಂದಂ ॥೩೨॥
ಮರುತನಲೆದಾಟದಿಂ ಭೂ ।
ಮಿರುಹಂ ಸಂಚಲಿಸುವಂತೆ ನಡೆವೆಂನುಡಿವೆಂ ॥
ಗುರುದೇವ ನಿಮ್ಮ ನಾಟಕ ।
ಮಿರೆಯೊಳ್ಪೂರೈಯ್ಸುವನ್ನೆಗಂ ಶಿವರುದ್ರ ॥೩೩॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳ್ವಿಂ
ಶತ್ಯಾಶ್ವಾಸಂ
—ಸಮಾಪ್ತಂ.—

———

॥ ಓಂಚಿಲ್ಲಿಂಗರೂಪಿಣೇನಮಃ ॥

## ಏಕವಿಂಶತ್ಯಾಶ್ವಾಸಂ.



ಪಿಣ್ಯಾಕರೂಪದಿಂ ಕಾ ।
ರುಣ್ಯಂಮಿಗೆ ರೇಣುಕಗುರುಸುಳಿದೊಲ್ಸುಳಿದುಂ ॥
ಪುಣ್ಯಕರದಿಷ್ಟದೆ ಯತಿವ ।
ರೇಣ್ಯಂ ಶಿವರುದ್ರಯೋಗಿ ಬೆರೆದಂ ಸರಿದಂ ॥೧॥

# ಶರಯಂತ್ರಬಂಧಂ.

—ಗಂಗಾಸ್ತುತಿ—

| | | | | | | | |
|---|---|---|---|---|---|---|---|
| ಏ | ಧಾ | ತೃ | ವಿ | ನು | ತೇ | ಗಂ | ಗೇ |
| ಪ್ರ | ಧಾ | ನ | ಶು | ಭ | ದಂ | ಕು | ರು |
| ವಿ | ಧಾ | ನ | ವಿ | ತ | ತೇಽ | ಸಂ | ಗೇ |
| ಬು | ಧಾ | ಳಿ | ಶು | ಭ | ದಂ | ಕು | ರು |

॥೨॥

**ಸೂಚನೆ:** ಈ ಶರಯಂತ್ರಬಂಧದಲ್ಲಿ ಮೊದಲಸಾಲಿನ ಮೊದಲಕ್ಷರ
ವನ್ನು ಹಿಡಿದು ಮೂರನೆಸಾಲಿನ ಎರಡನೆಯ ವರ್ಣ ಹಿಡಿದು V ಈ ಚಿನ್ಹದಂತೆ
ಅದೇ ಸಾಲಿನ ಮುಂದಿನಕ್ಷರಗಳನ್ನು ಕೂಡಿಸುತ್ತ ಹೋಗಲು ಮೊದಲಸಾಲಿನ
ಅಕ್ಷರಗಳೇ ಬರುವವು ಇದರಂತೆ ಎರಡನೆಯ ಚರಣದ ಮೊದಲಕ್ಷರವನ್ನು
ಮೊದಲಸಾಲಿನ ಕೆಳಗಿನ ಮೂರನೆಯಕ್ಷರ ಹಿಡಿದು ಕ್ರಮವಾಗಿ ಕೂಡಿಸುತ್ತ
ಬರಲು ಎರಡನೆಯ ಚರಣದ ಅಕ್ಷರಗಳೇ ಬರುವವು. ಅದರಂತೆ ಮೂರನೆಯ
ಚರಣದ ಆದ್ಯಕ್ಷರವನ್ನು ಮೊದಲ ಸಾಲಿನ ಮೂರನೆಯ ವರ್ಣ ಹಿಡಿದು ಮೇಲೆ
ಹೇಳಿದಂತೆ ವಿರುದ್ಧವಾಗಿ Λ ಚಿನ್ಹದಂತೆ ಕೂಡಿಸುತ್ತ ಬರಲು ಮೂರನೆಯ ಚರಣದ
ಅಕ್ಷರಗಳೇ ಬರುವವು. ಅದರಂತೆ ನಾಲ್ಕನೆಯ ಚರಣದ ಆದ್ಯಕ್ಷರ ಮೊದಲಸಾಲಿನ
ಕೊನೆಯ ವರ್ಣ ಹಿಡಿದು ಈ ಮೊದಲು ಹೇಳಿದಂತೆ ಕೂಡಿಸುತ್ತ ಬರಲು ನಾಲ್ಕನೆ
ಯಚರಣದ ಅಕ್ಷರಗಳೇ ಬರುವವು ಈ ಮೇಲೆ ಹೇಳಿದ ಸಂಕೇತದಂತೆ V ಈ
ಚಿನ್ಹದಂತೆ ಕೆಂಪುವರ್ಣ ಕೂಡಿಸಿರಿ. ಮತ್ತು Λ ಈ ಚಿನ್ಹದಂತೆ ಕಪ್ಪು ಅಕ್ಷರ
ಕೂಡಿಸಿರಿ. ಆಯಾಯಸಾಲಿನ ಅಕ್ಷರಗಳೇ ಬರುವವು.

ಚಂ॥ ಮಾ॥ ವೃ॥

ನಿಜಗುರುಪೂರ್ವದಲ್ಲಿ ತನಗೊಲ್ದು ನಿರೂಪಿಸಿತೋರ್ದ ತದ್ದಿನಂ ।
ನಿಜಮೆನೆ ಸಾರ್ದುದಂ ನೆನೆದು ಪಶ್ಚಿಮ ಚಕ್ರದೊಳಿರ್ಪ ನಿರ್ಗುಣಾ ॥
ರುಜನಿರವದ್ಯನಿಷ್ಕಲ ನಿರಂಜನ ನಿತ್ಯನಿರಂಗ ಕೋಟಿ ನೀ ।
ರಜಸಖದೀಪ್ತಿಯಂಪಳಿವ ಭಾಸುರ ನಿಶ್ಚಲಲಿಂಗ ಗರ್ಭದೊಳ್ ॥೩॥

ಸುಕರ ಶಕಾಬ್ದ ಚಂದ್ರ ವಸು ಬಾಣ ಸಮುದ್ರ ಗಣಾಂಕಮಾಳ್ದ ಸು ।
ಪ್ರಕಟಿತ ಬಂಧುರಾಂಗಿರಸ ವತ್ಸರ ಭಾದ್ರಪದ ತ್ರಯೋದಶೀ ॥
ವಿಕಸಿತ ಶುದ್ಧದೊಳ್ಶ್ರವಣತಾರಕೆಯೊಪ್ಪುವಚಾರುಚಂದ್ರವಾ ।
ರಕಮೃತಸಿದ್ಧಿಯೋಗವೊದಗಲ್ಬಯಲಾದನಿವಂ ಪ್ರಭಾತದೊಳ್ ॥೪॥

ಗೊರವನದಾವಗಂ ತಿರಿದು ಬೇಸರಿದಿಲ್ಲಿಯೆ ಮೂರ್ತಗೆಯ್ದನೋ ।
ವರಮೆರಮಿಂಡದೇವಗೆ ಪೆಳರ್ದು ಸುಮೌನದೆ ಮಂಡಿಸಿರ್ಪನೋ ॥
ಕರಮೆನೆ ಭಕ್ತರೊಲ್ದು ಗುರುಪಜ್ಜಲದಿಂ ಸಲೆಮಿಯ್ಸಿಭೂತಿಯಿಂ ।
ಪರಮಶಿವಾಕ್ಷಿಯಿಂ ಕಳೆಯಲರ್ಚೆ ಸುಮೂರ್ತಿಸಿದರ್ವಿತರ್ದಿಯೊಳ್ ॥೫॥

॥ ಶಿಖರಿಣೀವೃತ್ತಂ ॥

ಪರಂಜ್ಯೋತಿ ದ್ಯೋತಿ ಪ್ರರುಚಿಯೊಳಸಾರ್ದಂ ಗುರುಮತಾ ।
ಬ್ಧಿರಾಕಾಚಂದ್ರಂ ತಾನೆನಿಪೊಸಗೆ ತಳ್ತೆಲ್ಲೆಡೆಯೊಳಂ ॥
ಮರುದ್ವೇಗಂಬೋಲ್ಪರ್ಬಲಳಲುರಿಯಿಂ ಭಕ್ತತತಿ ಹೃ ।
ತ್ಸರೋಜಾತಂ ಬೆಂದೆಯ್ದೆ ಕರಿಮುರಿವೋದತ್ತೊರೆಯಲೇಂ ॥೬॥

ಚಂ॥ ಮಾ॥ ವೃ॥

ತತಮತದಂಗಣಂ ಬಿರಿಯೆ ಸರ್ವಮತೀಯ ಮಹೋದಯರ್ಮಹೋ ।
ನ್ನತಗುರುಪಟ್ಟಬದ್ಧರಭವಾನುಭವರ್ಚರಮೂರ್ತಿಗಳ್ಪರೋ ॥
ಹಿತರರಿಯಲ್ಬುಧರ್ಪರಮದೇಶಿಕಹಸ್ತಸರೋಜಸಂಭವ ।
ಶ್ರಿತಿಗಲ ಘೋಷದಿಂ ಪರುಷೆಗೆಯ್ದುವವೊಲ್ನೆರೆದರ್ಕ್ಷಣಾರ್ಧದೊಳ್ ॥೭॥

॥ ಪಂಚಚಾಮರವೃತ್ತಂ ॥

ಕೆಲರ್ಮನೋಜ್ಞ ಪುಷ್ಪಮಾಲೆಯಂ ಕೆಲರ್ದಶಾಂಗಮಂ ।
ಕೆಲರ್ವಿಭೂತಿಯಂ ಕೆಲಂಬರೊಲ್ದು ನಾರಿಕೇಳ್ಗಳಂ ॥
ಕೆಲರ್ಫಲಂಗಳಂಸಮಾಧಿ ಸತ್ಕ್ರಿಯಾರ್ಹವಸ್ತುವಂ ।
ಕೆಲಂಬರಿತ್ತುಪಾದಪದ್ಮಯುಗ್ಮದಲ್ಲಿ ಮೊಳ್ಗಿದರ್ ॥೮॥

ಚಂ॥ ಪ॥ ವೃ॥

ಪುರದಮುಖಂಡರಾಗಳೊಡಗೂಡಿ ವಿಚಾರಿಸಿದರ್ಗುರುಪ್ರಭಾ ।
ಕರನ ಸಮಾಧಿಯಾವೆಡೆಯೊಡರ್ಚುವದೆನ್ನಲದೋರ್ವ ಭಾವುಕಂ ॥
ಗುರುವರನೊಲ್ದು ಪೂರ್ವದೊಳೆನೆಟ್ಟರುವರ್ಕ ಮಹೀಜ ದಾಣದೊ ।
ಳ್ಪಿರಿದೆನೆ ಮಾಳ್ಪುದೆಂದೆನೆ ಸಮಂಜಸಮೆಂದೊಡಬಟ್ಟು ಭಾವದೊಳ್ ॥೯॥

ಮ॥ ವಿ॥ ವೃ॥

ಗುರುಸತ್ಕೋನ್ನತ ದಿವ್ಯಪೂರ್ಣರುಚಿವೊಲ್ಪಂಬಿರ್ದ ಭಕ್ತರ್ಗೆ ಭಾ ।
ಸುರಭಾವೇಷ್ಟಮನೀವ ಕಲ್ಪಕುಜದೊಲ್ತತ್ಸ್ಥಾನದೊಳ್ತನ್ನ ಬಂ ॥
ಧುರಮಾಂಗಲ್ಯ ಸಮಾಧಿಯಂ ರಚಿಸುವೊಲ್ತಾನೊಲ್ದು ಪೇಳ್ದಿರ್ದವೊ ।
ಲ್ಮೆರೆವಾಪೂರ್ವದ ತಾಣದಲ್ಲಿ ನೆರೆದವರ್ಗೇದೋಕ್ತಿಯಿಂ ಭಕ್ತಿಯಿಂ ॥೧೦॥

ಗುರುಚರತಿಂಥಿಣಿಯಂ ಸ।
ದ್ಗುರು ಮಾರ್ಗಾಗತ ವಿಧಾನಮಂ ಮೀರದೆತ ॥
ಳ್ತಿರದೆಲ್ಲರ್ಭರದಿಂ ಭಾ ।
ಸುರತದ್ದೇಶಿಕ ಸಮಾಧಿಯಂ ವಿರಚಿಸಿದರ್ ॥೧೧॥

॥ ಪಂಚಚಾಮರವೃತ್ತಂ ॥

ತದೀಯಕೊಂಗವಾಡಭಕ್ತರೆಯ್ದೆ ಕೇಳ್ದು ವಾರ್ತೆಯಂ ।
ಮುದಾದ್ಭುತಂಗಳೇಕಕಾಲದಲ್ಲಿ ಪೊಣ್ಮೆ ಭಾವದೊಳ್ ॥
ತ್ವದೀಯ ಭಕ್ತವರ್ಗಕಿತ್ತ ತದ್ಭವಿಷ್ಯ ವಾಣಿತಾಂ ।
ಸದೈವ ಸತ್ಯವೆಂದು ಕಾಣ್ಕೆಯಿತ್ತು ಪಾಡಿ ಮೊಳ್ಗಿದರ್ ॥೧೨॥

ಮ॥ ವಿ॥ ವೃ॥

ಶಿಲೆಯೊಂದಂಶವನಳ್ಗಿ ತಚ್ಛಿವಕಲಾಚೈತನ್ಯಮಂ ನೀಡಿ ಮಂ ।
ಗಲಮಾದಿಷ್ಟಸುರೂಪದಿಂ ಕರದೊಳಿತ್ತುಂ ಪುಟ್ಟುಸಾವೆಂಬ ಶೃಂ ॥
ಖಲೆಯಂ ಛೇದಿಸಿ ನಿತ್ಯಮೋಕ್ಷಪದಮಂ ಕಣ್ಮುಂದೆ ಕಾಣ್ಬಂತೆ ಗೆ ।
ಯ್ದಲಘು ಶ್ರೀಗುರುವಿಗ್ರಹಂ ಜಗತಿಯೊಳ್ ಬೈಲಾದುದೆಂದಳ್ದಿದರ್ ॥೧೩॥

ಸ॥ ಸ್ರ॥ ವೃ॥

ಪುಟ್ಟುತ್ತುಂ ಸಾವುತುಂ ಸಂಚರಿಸುವರಳಿವೇಂತಾನೆ ಬೆಟ್ಟತ್ತೆ ನೋಡ ।
ಲ್ಪುಟ್ಟುತ್ತುಂ ಸಾವುತುಂ ಸಂಚರಿಸವೆ ಕ್ರಿಮಿಃಕೀಟಂ ಪತಂಗ ಪ್ರತಾನಂ ॥

ಪುಟ್ಟಂಸಾವಂ ಕರಂಸುಟ್ಟೊರಸಿ ನಿಜಪದಸ್ಥಾನಮಂಭಾಗ್ಯಮಂ ತಾಂ ।
ಕೊಟ್ಟಿಂದುಂ ಪಾಲನಂ ಮಾಳ್ಪ ಗುರುವಗಲ್ದೊಡಾ ತಾಪಕೇನೆಲ್ಲೆಯುಂಟೇ
॥೧೪॥

ಭವಮಂ ಸಂತರಿಸಿದ ಹೃ ।
ದ್ಧವನಂ ಕೈವಿಡಿದುಬಾಳ್ದ ನಿನ್ನನಕಿನ್ನೇಂ ॥
ಭವಿಯೊಳ್ವೈಧವ್ಯವನ ।
ಪ್ಪುವನಾಂ ದುರ್ಭಾಗ್ಯನೆಂದು ಸುಯ್ದನದೋರ್ವಂ॥ ॥೧೫॥

ಬೊಪ್ಪಂಲೋಕದೊಳೆಮ್ಮಾ ।
ಳ್ದಪ್ಪಂ ಮುಪ್ಪೊಳಲುರಿಚನನಪ್ಪಿದ ನಿನ್ನಂ ॥
ದಪ್ಪಕ ವಗೆಯನೆ ನೋಡ ।
ಲ್ಕಪ್ಪುದದೆಂದೊಪ್ಪಣಂಗಿ ಕಂಬನಿಗರೆದರ್ ॥೧೬॥

ಚಂ॥ ಮಾ॥ ವೃ॥

ವಿಲಸಿತಪುಷ್ಪಕಂ ಮೆರೆಯೆ ಮೂರ್ತಿಸಿ ತದ್ಗುರುಮೂರ್ತಿಯಂ ಸುಮಾಂ ।
ಜಲಿ ಪರಿಸೂಸೆ ಮಂಗಲ ಜಯಸ್ವನ ಪೂರ್ವಕ ಭಕ್ತರೆಲ್ಲವರ್ ॥
ಪುಲಕಮದಂಗದೊಳ್ನಿಮಿರೆ ಕೈಪರೆಗುಟ್ಟೆ ವೃಷಧ್ವಜಂ ಪಳಂ ।
ಚಲೆಯೆ ಸುವೀರಶೈವ ಶಿವಲಿಂಗಮನಾಂತವೊಲಾಂತರಳ್ತಿಯಿಂ ॥೧೭॥

ಮ॥ ವಿ॥ ವೃ॥

ಜಳಕಂಬೊಕ್ಕುದಣಿಂಬಮಂ ತಳೆದು ಭ್ರಾಜದ್ಭೂತಿಯುದ್ಯತ್ಫಣಿ ।
ಸ್ಥಳದಲ್ಲೊಪ್ಪೆ ಶಿವಾಂಬಕ ಸ್ರಜಗಲಾಲಂಕಾರಮೆಂಬೊಲ್ಮೆನಂ ॥
ಗೊಳೆ ಹೃಜ್ಜ್ಯೋತಿ ಮಯೂಖಲಿಂಗವೆಸೆಯಲ್ಮಾಹೇಶನಿಂ ತಾನೆದು ।
ರ್ಗೊಳಲೆಯ್ತಂದ ಗಣಾಳಿಯಂತೆಸೆದರುದ್ಯತ್ಪುಷ್ಪಕಂದಾಳ್ದವರ್ ॥೧೮॥

ಚಂ॥ ಮಾ॥ ವೃ ॥

ಗುರುವಿಜಯೋತ್ಸವಂ ಘನಮಹೋತ್ಸವದಿಂ ಸುಸಮಾಧಿ ದಾಣಕ್ಕೆ ।
ತರೆಗುರುಪಟ್ಟಬದ್ಧರಭವಾಗಮ ತತ್ವ ವಿಶಾರದಕ್ರಮಂ ॥
ವೆರಸು ಸಮಾಧಿ ತದ್ವಿಧಿಯನುದ್ಗುರು ಪದ್ಧತಿಯಂತೆತೀರ್ಚಿಬಂ ।
ಧುರಶಿವಲಿಂಗದಂಗಕೆ ಸುಮಾಂಜಲಿಯಂ ಜಯತೆಂದು ಸೂಸಿದರ್ ॥೧೯॥

[ಪೂ. ಲಿಂ: ಚೆನ್ನಕವಿಗಳ ದೃಷ್ಟಿದೋಷದಿಂದ ಜಾರಿಬಿದ್ದ ಕೆಲವು ಪದ್ಯಗಳು.]
(ಆಶ್ವಾಸ ೨೧ ಪದ್ಯ ೨೦–೨೪ ರ ವರೆಗೆ)

ಮುಗ್ಧಸುಭಾವನೀತನಕರಾಂಬುರುಹಪ್ರಭನತ್ಯುದಾರಸಂ ।
ಸ್ನಿಗ್ಧನನಾಥದೀನಜನಸಾಹಸಕಾರವಿನೀತನೀತಸಂ ॥
ಧಿಗ್ಧಮನೋವಿದೂರ ಗುರುಪಾದಪಯೋಜಶಿಳೀಮುಖಾಭಸ ।
ಮ್ಯಗ್ಧನಶಾಲಿಯಲ್ಲ ಮಠಪತ್ತಿಯವೀರಬಸಯ್ಯನೊಪ್ಪುವಂ ॥೨೦॥ಅ

ಇವಗೊಪ್ಪೊತ್ತಿನಗ್ರಾಸಕಂ ನೆಲೆಯದಿಲ್ಲಂ ಕೇಳ್ವರಿಲ್ಲಂ ಶರೀ ।
ರವನೇಗಂ ದುಡಿಸಲ್ವಯಸ್ಸಿಗಿಳಿದಿಲ್ಲಂ ಬಿಟ್ಟೊಡಂ ಬಾಳ್ತೆಸಾ ॥
ಗುವದಿಲ್ಲಂ ಮನೆಯೊಳ್ಕುಟುಂಬಭರಣಂ ಪೆರ್ಚಿರ್ಕುಸಂಭಾವಿಸ ।
ಲ್ಲವಮಾತ್ರಂ ಪಿರಿಯರ್ಕಳಾರ್ಜಿಸಿದಕಾಸೊಂದಿಲ್ಲಗೇಹಾಂತದೊಳ್
॥೨೧॥ಅ

ಕಡುದಾರಿದ್ರ್ಯದಬೇಗೆಯಿಂ ನವಿದುಕರ್ಗಾಗುತ್ತೆತಾಯ್ತುಂದೆಗ ।
ಳ್ಬಿಡಬೇಕೀಪರಿ ಕಷ್ಟವಾಂತೊಡಲನೆಂದುಸ್ಸೆಂದು ಕಣ್ಣೀರಿನ ॥
ಕಡಲಲ್ಲಾಳಿಸಿಹಾದಿಗಾಣ್ಣದಿವರಂ ಸಾಣ್ಗೆಡ್ಡಿಸೈಗೆಡ್ಡಿಮಿ ।
ರ್ದೆಡೆಯುಂ ಸೈತಿಡದಿರ್ಪಸ್ವೆವರಗಿನಾದಾರಿದ್ರ್ಯಕಾಂ ಮೊಳ್ಗುವೆಂ ॥೨೨॥ಅ

ಭವಿಷತ್ತಿನ ಶುಭಚಿನ್ಹಮೊ ।
ಭವಹರ ಗುರುನೆಲೆಸಿದ ನೆಲೆಯ ಮಹತ್ವಮೋಎಂ ॥
ಭವೋಲೀತನ ಮಠದೊಳ್ಪಡೆ ।
ದವರಿಂಬೇಹಾರವೊಂದನಿಂತವಂ ಕೈಕೊಂಡಂ ॥೨೩॥ಅ

ಲಾಭಮಲಾಭಂ ಸಮನಿಪ ।
ಶುಭಾಶುಭಂ ಸರ್ವಮುಂ ಗುರುಪದಾಜ್ಞಕೇ ॥
ಕೋಭಾವನೆಯಿಂ ಸಲ್ಲಿಸಿ ।
ಭೂಭವನದಿನಂ ಬಿನಡೆಯಿಸಲ್ಕೆನೆಂಬೆಂ ॥೨೪॥ಅ

ಕತಿಪಯಕಾಲದೊಳ್ಗುರುಕೃಪಾಬಲವೋ ನಿಜಭಕ್ತಿ ಭೂರುಹಂ ।
ವಿತತವೆನಲ್ಪ್ರವೃದ್ಧಿಸಿ ಫಲೋನ್ಮುಖವಾಯಿತೋ ಎಂದೆನಲ್ಸತೀ ॥
ಸುತಸುಖಭೋಗಸಂಪದ ಸುಗೌರವದಿಂದಿರುತಿರ್ಪನೊಚ್ಚತಂ ।
ನುತಗುರು ಸತ್ಕೃಪಾಬಲಮದೇನ ನೊಡರ್ಚದೊಭೂಕಟಾಹದೊಳ್
॥೨೫॥ಅ

ಎತ್ತಣಮೆನ್ನಿರವುಂಬಳಿ ।
ಕೆತ್ತಣದೇಶಿಕ ಕೃಪಾಕಟಾಕ್ಷಂ ಚಿತ್ರಂ ॥
ಇತ್ತವನೈಶಿರಿಯನವಂ ।
ಗಿತ್ತಾಲ್ಲಿಕೃತಾರ್ಥನಪ್ಪೆನೆಂದರಿದಾಗಳ್ ॥೨೬॥ಅ

—

ಪುರನೇತೃಗಳಿಂದೊಡಗೊಂ ।
ಡಿರದಾ ಮಠಪತ್ತಿ "ವೀರಬಸವಾಖ್ಯಾನಂ" ॥
ವಿರಚಿಸಿದಂ ಮಠಮಂ ತ ।
ದ್ಗುರುಕರಜಾತಂ ನಿಜಗುರು ಸಂಸ್ಮರಣಾರ್ಥಂ ॥೨೦॥

ಶಾ॥ ವಿ॥ ವೃ॥

ಶ್ರೀಗೋಕರ್ಣ ಮಹಾಬಲೇಶ್ವರ ಸುಪುಣ್ಯಕ್ಷೇತ್ರಮಾರಾಜಿಸ ।
ಲ್ಪ್ರಾಗಂ ಕೈಮಿಗೆವೀರಶೈವಮಠಮಂ ಶ್ರೀರೇಣುಕಾಚಾರ್ಯತ ॥
ದ್ಯೋಗೀಶಪ್ರಭುಮೂರ್ತಿಯಂ ಜಗತಿ ಕಲ್ಯಾಣೈಕ ನೈಮಿತ್ಯದಿಂ ।
ತ್ಯಾಗೋದ್ಯದ್ಗುಣದಿಂ ಶ್ರಮಂಗೊಳುತಿಹಂ ತಾನಲ್ಲಿ ಸಂಸ್ಥಾಪಿಸೀ ॥೨೧॥

ಮ॥ ಸ್ರ॥ ವೃ॥

ಲಲಿತೋದ್ಯದ್ಭ್ರೂಲತಾ ದ್ವಾದಶಮಠದಧಿಕಾರತ್ವಮಂ ಪೊರ್ದಿತನ್ನಂ ।
ಸಲೆನಂಬಿರ್ದಾತ್ಮರಂತರ್ಗತ ಮಲಿನಮುಮಂ ದೀಕ್ಷೆಯಿಂ ಕ್ಷಾಲನಂ ಗೆ ॥
ಯ್ದೊಲವಿಂಸ್ವೈರ್ಮಲ್ಯರಂ ಮಾಳ್ಪಕತದೆ "ಮಡಿವಾಳಾಖ್ಯ"ಸನ್ನಾಮ ಸಾರ್ಥಂ॥
ನೆಲದೊಳ್ತಾನೆಂದು ಕಲ್ಲಾಯ್ತರೊರೆಯುತಿಹರೀ ಯೋಗಿವರ್ಯಂ ಬಳಿಕ್ಕಂ ॥೨೨॥

ಚಾರುಕಡಕೋಳ ಪೊವಲಿ ।
ರಾರಾಜಿತರಾಮದುರ್ಗಬಳಿಕಂ ಸತ್ತೀ ॥
ಗೇರಿ ಮುಖರೊಪ್ಪೆಚರಗುರು ।
ವರರ್ನೆರೆದ ಭಕ್ತಮಂಡಳಿ ಸಮುತ್ಸವದಿಂ ॥೨೩॥

ವರಬಿಂದು ಸಪ್ತವಸು ಭೂ ।
ಪರಿಗಣಶಕಸರ್ವಧಾರಿ ಸಂವತ್ಸರ ಬಂ॥
ಧುರಮಾಘಶುದ್ಧ ಪಂಚಮಿ ।
ಯಿರೆತಿಥಿಸರಸೀಜಮಿತ್ರವಾರೋದಯದೊಳ್ ॥೨೪॥

ಮ॥ ಸ್ರ॥ ವೃ॥

ಗುರು ಸದ್ವಂಶಾಗತಾಚಾರಪರನಭವಪೂಜಾವಿತಂದ್ರಕ್ರಿಯಾಸಿ।
ದ್ಧಿರಹಸ್ಯೈಶ್ವರ್ಯ ಸಂಪನ್ನರಮಳಿನಮಹಾಬ್ರಹ್ಮತೇಜೋಭಿರಾಮರ್ ॥

"ಗುರುಪಾದಾಚಾರ್ಯ"ರೆಂಬರ್ಗೆ ಮಡಿವಳಶಿವಾಚಾರ್ಯರಾಮೋದದಿಂದು ।
ತ್ತರಪೀಠಾಚಾರ್ಯಪಟ್ಟಂ ರಚಿಸಿದರಭವೋದ್ಘೋಷಣಂಮಾಡೆಭಕ್ತರ್ ॥೨೫॥

ಇವನೀಚಾರಿತ್ರ್ಯಮಂ ಲೋಕಗುರುವೆನಿಪ ಶ್ರೀರೇಣುಕಾಚಾರ್ಯಪಾದಾ ।
ಬ್ಜವನಾತ್ಮೋಚ್ಚಶೀರ್ಷದೊಳ್ತಾಳ್ದ ತದನುಪಮ ಸಾಮರ್ಥ್ಯದಾವೇಶದಿಂಬ ॥
ಲ್ಲವೊಲಾಂಪೇಳ್ದೆಂ ಬುಧರ್ದೋಷಮಿರೆ ಗಣಿಸದಾತ್ಮೀಯಸಂದಾದರಂ ಬೆ ।
ತ್ತಿವನಂ ಕಾರುಣ್ಯದಿಂ ತಿರ್ದಿಸಲಪುಗೆನುತುಂ ಯಾಚಿಪೆಂ ದೈನ್ಯದಿಂದಂ
॥೨೬॥

ಇದುದುರ್ಮಾಯಾವಿಮೋಹಾಂಬುನಿಧಿ ಬಡಬವಹ್ನಿಪ್ರಭಂ ನೋಳ್ಪೊಡಂ ತಾ ।
ನಿದು ಸರ್ಪೋಗ್ರಗ್ರಹೋಚ್ಚಾಟನ ಮನುಸದೃಶಂ ದುರ್ವಿಪನ್ಮೇಘವಾತಂ ॥
ಮದವತ್ಸೂರ್ಯಾತ್ಮ ಸಂಭೂತ ಕುಧರಕುಲಿಶಂ ಮಿಕ್ಕಕಟ್ಟುಗ್ರ ಪಾಪ ।
ಕ್ಕಿದು ಸಾಪತ್ನ್ಯಂ ಮಹಾಚಿದ್ಘುಟಿಕೆಯಿದಮೃತಂ ಪಾಠನೀಯಂ ನಿರಂತಂ
॥೨೭॥

ಪ್ರವಿರಾಜದ್ಧರ್ಮದಿಂದೈಸಿರಿ ಸಿರಿವಿಡುದುಂ ವಿದ್ಯೆಯಂ ವಿದ್ಯೆಯಿಂ ಜ್ಞಾ ।
ನವನುದ್ಯಜ್ಞಾನದಿಂ ಶಾಂತಿಯನತಿಶಯ ತಚ್ಛಾಂತಿಯಿಂ ಭಕ್ತಿಯಂ ಭ ॥
ಕ್ತಿವಧೂಸಾಂಗತ್ಯದಿಂ ನಿತ್ಯನಿರತಿಶಯ ಕೈವಲ್ಯಮಂ ಸರ್ವಭೂಲೋ ।
ಕ ವಿತಾನಕ್ಕೊಲ್ದು ತಾನೀಗೆ ಪರಮಶಿವರುದ್ರಂ ಮಹಾಯೋಗನಿಪ್ರಂ ॥೨೮॥

ಚ॥ ಮಾ॥ ವೃ॥

ಸುಕರಶಕಾಬ್ದ ಚಂದ್ರ ವಸುಸಾಗರ ಕರ್ಮ ಗಣಾಂಕದುರ್ಮುಖ ।
ಪ್ರಕಟಿತ ವತ್ಸರಾಶ್ವಿಜದೊಳಾ ದಶಮೀ ತಿಥಿ ಶುಕ್ಲಪಕ್ಷ ತಿ ॥
ಗ್ಮಕಿರಣವಾಸರೊಳ್ದಿನಕರೋದಯದಲ್ಲಿದು ಪೂರ್ಣಮಾಯ್ತು ದೇ ।
ಶಿಕಕರುಣಾ ಕಟಾಕ್ಷಬಲದಿಂ ಕೃತಿಚೆನ್ನಕವೀಂದ್ರ ನಿರ್ಮಿತಂ ॥೨೯॥

ಕೃತಿರಚನಾ ಪ್ರಸಕ್ತ ಸಮಯಕ್ಕತಿ ದುರ್ಧರ ರಾಜಯಕ್ಷ್ಮ ಶಂ ।
ಕಿತಮತಿ ಕಾಯಸಂಕಟ ಪರಸ್ಥಲವಾಸ ವಿಚಿತ್ರ ವಿಘ್ನಸಂ ॥
ತತಿಯೊದಗಿರ್ದೊಡಂ ಗುರುಕಟಾಕ್ಷಶಿರೋಬ್ಜದೊಳೊಪ್ಪಿರಲ್ಕೆ ತಾ ।
ನತಿಶಯಮಾದುದುಂಟೆ ಪರಿಪೂರ್ಣಮಿದಾಯ್ತು ಗುರುಪ್ರಸಾದದಿಂ ॥೩೦॥

ಮ॥ ವಿ॥ ವೃ॥

ಜನಕಂ"ಶ್ರೀಗುರುಪಾದವರ್ಯ"ನೆಸೆವ"ಳ್ಗಂಗಾಂಬೆ" ತನ್ಮಾತೆ ಪಾ।
ವನಮೀ ಪೂಜ್ಯರಿಗಾವಗಂ ಕರುಣದಿಂ ಸಚ್ಛಾಂತಿಯಂ ನೀಡುಗೆಂ॥
ದನಘಂಮದ್ಗುರು ಪಾದಪದ್ಮಯುಗದೊಳ್ಸದ್ಭಕ್ತಿಯಿಂಬೇಡಿ ಲೀ।
ಖನಿಗಾಂತದ್ಗುರು ದತ್ತಲಿಂಗನೆನಹಿಂ ವಿಶ್ರಾಂತಿಯಂ ದೆತ್ತಸೆಂ॥೩೧॥

॥ವಿಬುಧಪ್ರಿಯಾವೃತ್ತಂ॥

ಸೋಮನನಂಜಿತಕಾಮನಂ ಭವ ಭೀಮನಂ ಶಮಧಾಮನಂ।
ಹೇಮಪರ್ವತಧಾಮನಂ ಹಿಮಧಾಮನಂ ಗತಧಾಮನಂ॥
ವ್ಯೋಮಸುಂದರಕೇಶನಂ ಪರಮೇಶನಂ ಧೃತಭೇಶನಂ।
ರಾಮಣೀಯಕಮೂರ್ತಿಯಂ ಶ್ರುತಿಕೀರ್ತಿಯಂ ನೆರೆಕೀರ್ತಿಪೆಂ॥೩೨॥

ನೀತೆಯಂ ವರದಾತೆಯಂ ಪರಿಪೂತೆಯಂ ಗಿರಿಜಾತೆಯಂ।
ಖ್ಯಾತೆಯಂ ಶಿವಭೂತೆಯಂ ನತಭೂತೆಯಂ ಗುಣಜಾತೆಯಂ॥
ಪ್ರೀತಪಂಡಿತಗೀತೆಯಂ ಹರಿಕೇತೆಯಂ ಶುಭಯೂಥೆಯಂ।
ಮಾತೆಯಂ ಸುವಿನೀತೆಯಂ ನೆನೆವೆಂ ಧರಿತ್ರಿ ವಿಧಾತೆಯಂ॥೩೩॥

ಚಂ॥ ಮಾ॥ ವೃ॥

ಜಯಸುಚರಿತ್ರಶಾಂತಿವನಚೈತ್ರಭವಾಬ್ಧಿ ವಹಿತ್ರಚಿದ್ರಸಾ।
ಶ್ರಯ ರುಚಿಪಾತ್ರ ಸಾಧುನುತಿಪಾತ್ರಸುಭಕ್ತಜನಾತಪತ್ರ ನಿ॥
ರ್ಜಯಮನುಗಾತ್ರ ರೇಣುಕಸುಗೋತ್ರ ಪವಿತ್ರ ಜಿತಾಕ್ಷಮಿತ್ರ ಭೋ।
ಜಯಶಿವರುದ್ರಭದ್ರಗುರುಮುದ್ರಸುನಿದ್ರ ಮಹಾಮಹೋದಯ॥೩೪॥

ಶ್ರೀಗುರುಪಾದಪದ್ಮಪರಾಗಭಸಿತ
ಫಾಲಪಟ್ಟ ಚೆನ್ನಕವಿವಿರಚಿತಂ
ಶಿವರುದ್ರವಿಜಯಲೀಲಾ
ಪ್ರಬಂಧದೊಳೇಕ
ವಿಂಶತ್ಯಾಶ್ವಾಸಂ
—ಸಮಾಪ್ತಂ—

ಮಹಾಗುರುಪಾದಾರ್ಪಣಂ.

ಭದ್ರಂ ಶುಭಂ ಮಂಗಲಂ

**ಸಂಪೂರ್ಣಂ.**

SRI JAGADGURU VISHWARAD
JNANA SIMHASAN JNANAMA
LIBRARY.
Jangamwadi Math, VARAN
Acc. No. 315

## ಬಿಕರಿಗೆ ಸಿದ್ಧವಾದ ಗ್ರಂಥಗಳು.



| | | |
|---|---|---|
| ೧) | ಮಂತ್ರಬೀಜಕೋಶ | ೧—೦೦ |
| ೨) | ರೇವಣಸಿದ್ಧಯೋಗ | ೦—೭೫ |
| ೩) | ಶ್ರೀಶಿವರುದ್ರವಿಜಯ (ಪುರಾಣ) | ೫—೦೦ |
| ೪) | ಶಿವಲಿಂಗಾಚರ ರಚನಾಗಮ | |

ಪುಸ್ತಕ ದೊರೆಯುವ ಸ್ಥಳ:—

**ಶ್ರೀ ಶಿವರುದ್ರ ಶಿವಯೋಗಿ ಗ್ರಂಥಮಾಲೆ**

**ಹಿರಿಯಮಠ, ಸೂರಕೋಡ.**

ಪೋ. ಸೂರಕೋಡ. ತಾ: ನರಗುಂದ. ಜಿ. ಧಾರವಾಡ.

ಈ ಪುಸ್ತಕವು ಬಾಗಲಕೋಟ ಚಂದ್ರಿಕಾ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟು ಶ್ರೀ. ವೇ. ಸಂ. ವೀರಾರ್ಯ ಶಾಸ್ತ್ರಿಗಳವರಿಂದ ಶ್ರೀಶಿವರುದ್ರ ಶಿವಯೋಗಿ ಗ್ರಂಥಮಾಲೆ ಸೂರಕೋಡದಲ್ಲಿ ಪ್ರಕಾಶಿತವಾಯಿತು.